ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆ

# ಡಾ॥ ರಾಜೇಂದ್ರ ಪ್ರಸಾದ್

ಲೋಕಸಭಾ ಸಚಿವಾಲಯ, ನವದೆಹಲಿ
ಕನ್ನಡ ಅನುವಾದ : ಕರ್ನಾಟಕ ವಿಧಾನ ಮಂಡಲ ಕಾರ್ಯಾಲಯ,
ವಿಧಾನಸೌಧ, ಬೆಂಗಳೂರು - 560 001

## ಮುನ್ನುಡಿ

ನಮ್ಮ ದೇಶದ ಖ್ಯಾತ ಸಂಸದರು ರಾಷ್ಟ್ರಕ್ಕೆ, ಸಂಸದೀಯ ಬದುಕಿಗೆ ಮತ್ತು ರಾಜಕೀಯ ವ್ಯವಸ್ಥೆಗೆ ನೀಡಿರುವ ಕಾಣಿಕೆಗಳನ್ನು ದಾಖಲೆಗೊಳಿಸುವ ಉದ್ದೇಶದಿಂದ ಈ ವರ್ಷದ ಆರಂಭದಲ್ಲಿ ಖ್ಯಾತ ಸಂಸದೀಯ ಪಟುಗಳ ಜನ್ಮೋತ್ಸವವನ್ನು ಆಚರಿಸಲು ಭಾರತೀಯ ಸಂಸದೀಯ ಸಮೂಹ ನಿರ್ಧರಿಸಿರುವುದು ಅತ್ಯಂತ ಸೂಕ್ತವಾಗಿದೆ. ಈ ಚಟುವಟಿಕೆಯ ಅಂಗವಾಗಿ "ವಿಖ್ಯಾತ ಸಂಸದೀಯ ಪಟುಗಳು" ಎಂಬ ಗ್ರಂಥಮಾಲೆಯನ್ನು ಹೊರತರಲು ನಿರ್ಧರಿಸಿ, 1990ರ ಮಾರ್ಚ್‌ನಲ್ಲಿ ಡಾ|| ರಾಮಮನೋಹರ ಲೋಹಿಯಾ ಅವರ ಕುರಿತು ಪ್ರಥಮ ಗ್ರಂಥವನ್ನು ಹೊರತರುವ ಮೂಲಕ ಈ ಸರಣಿಯ ಪ್ರಕಟಣೆಯನ್ನು ಆರಂಭಿಸಲಾಯಿತು. ಆ ನಂತರ ಡಾ|| ಲಂಕಾ ಸುಂದರಮ್, ಡಾ|| ಶಾಮಪ್ರಸಾದ ಮುಖರ್ಜಿ, ಪಂಡಿತ್ ನೀಲಕಂಠ್ ದಾಸ್, ಶ್ರೀ ಪೊನ್ನಮ್‌ಪಿಳ್ಳಿ ಗೋವಿಂದ ಮೆನನ್ ಮತ್ತು ಶ್ರೀ ಭೂಪೇಶ ಗುಪ್ತಾ - ಈ ಎಲ್ಲರ ಜನ್ಮೋತ್ಸವದೊಂದಿಗೆ ಗ್ರಂಥಗಳು ಹೊರಬಂದವು.

ಈ ಮಾಲಿಕೆಯಲ್ಲಿ 7ನೇ ಗ್ರಂಥವಾಗಿರುವ ಈ ಪುಸ್ತಕವು ಡಾ|| ರಾಜೇಂದ್ರ ಪ್ರಸಾದರು ಗೈದಿರುವ ಸೇವೆ, ನೀಡಿರುವ ಕಾಣಿಕೆ ಕುರಿತು ದಾಖಲೆಗೊಳಿಸುವ ಒಂದು ವಿನಮ್ರ ಪ್ರಯತ್ನವಾಗಿದೆ. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾಗಿ ಮೂರು ಸಲ ಚುನಾಯಿತರಾದದ್ದು, ಸಂವಿಧಾನ ಸಭೆಯ ಅಧ್ಯಕ್ಷರಾಗಿ ಆಯ್ಕೆಯಾದದ್ದು, ಮತ್ತು ಅಂತಿಮವಾಗಿ, ನಮ್ಮ ಗಣರಾಜ್ಯದ ಪ್ರಥಮ ರಾಷ್ಟ್ರಪತಿಗಳಾಗಿ ಹದಿಮೂರು ವರ್ಷಗಳಷ್ಟು ದೀರ್ಘ ಕಾಲದವರೆಗೆ ಸೇವೆ ಸಲ್ಲಿಸಿದ್ದು, ಈ ಎಲ್ಲ ಸ್ಥಾನ, ಗೌರವಗಳ ಮೂಲಕ ನಮ್ಮ ದೇಶದ ಭವಿಷ್ಯತ್ತನ್ನು ರೂಪಿಸಿದ್ದು ಇವೇ ಮುಂತಾದ ಸಂಗತಿಗಳನ್ನು ಈ ಗ್ರಂಥದಲ್ಲಿ ದಾಖಲೆಗೊಳಿಸಲು ಪ್ರಯತ್ನಿಸಲಾಗಿದೆ.

ಪ್ರಸಕ್ತ ಗ್ರಂಥದಲ್ಲಿ ಮೂರು ಭಾಗಗಳಿವೆ. ಪ್ರಥಮ ಭಾಗದಲ್ಲಿ ಅವರ ಘಟನಾ ಪೂರ್ಣ ಬದುಕಿನ ಬಗ್ಗೆ ಕೆಲವು ಹೊಳವುಗಳನ್ನು ದಾಖಲಿಸುತ್ತ ಭಾರತದ ಪ್ರಥಮಾಧ್ಯಕ್ಷರಾಗಿದ್ದ ಅವರ ವ್ಯಕ್ತಿತ್ವದ ಒಂದು ಸಂಕ್ಷಿಪ್ತ ಪಾರ್ಶ್ವ ನೋಟವನ್ನು ಕೊಡಲು ಪ್ರಯತ್ನಿಸಲಾಗಿದೆ. ದ್ವಿತೀಯ ಭಾಗದಲ್ಲಿ ಅವರ ಸಮಕಾಲೀನರೂ, ಸಹವರ್ತಿಗಳೂ, ಸಹೋದ್ಯೋಗಿಗಳೂ ಆಗಿದ್ದ ಹತ್ತೊಂಬತ್ತು ಜನರ ಲೇಖನಗಳಿವೆ. ಅವರ ನಿಕಟ ಸಾನಿಧ್ಯದಲ್ಲಿದ್ದು ಅವರ ವೈಯಕ್ತಿಕ ಬದುಕಿನ ಪರಿಚಯ ಮಾಡಿಕೊಳ್ಳುವ ಅವಕಾಶ ಸಿಕ್ಕ ಮಾಜಿ ಮತ್ತು ಹಾಲಿ

ಸಂಸತ್ ಸದಸ್ಯರ ಲೇಖನಗಳು ಇವಾಗಿವೆ. ತೃತೀಯ ಭಾಗದಲ್ಲಿ ಡಾ॥ ರಾಜೇಂದ್ರ ಪ್ರಸಾದರು ಸಂವಿಧಾನ ಸಭೆಯ ಅಧ್ಯಕ್ಷರಾಗಿ ಮಾಡಿದ ಭಾಷಣಗಳು ಮತ್ತು ಸಂಸತ್ತಿನಲ್ಲಿ ಮಾಡಿದ ಭಾಷಣಗಳನ್ನು ಒಳಗೊಳ್ಳಲಾಗಿದೆ.

ಅವರ ಜನ್ಮೋತ್ಸವದ ಸಂದರ್ಭದಲ್ಲಿ ನಾವು ಡಾ॥ ರಾಜೇಂದ್ರ ಪ್ರಸಾದರ ನೆನಪಿಗೆ ನಮ್ಮ ಗೌರವಪೂರ್ಣ ನಮನಗಳನ್ನು ಅರ್ಪಿಸುತ್ತೇವೆ ಮತ್ತು ಈ ಎಲ್ಲ ವಿಷಯಗಳನ್ನೊಳಗೊಂಡಿರುವ ಈ ಗ್ರಂಥ ಉಪಯುಕ್ತವಾಗಲಿದೆ, ಆಸಕ್ತದಾಯಕವಾಗಲಿದೆ ಎಂದು ಆಶಿಸುತ್ತೇವೆ.

ನವದೆಹಲಿ:
ಡಿಸೆಂಬರ್, 1990

ರಬಿ ರೇ,
ಲೋಕಸಭಾಧ್ಯಕ್ಷರು ಮತ್ತು
ಭಾರತೀಯ ಸಂಸದೀಯ ಸಮೂಹದ ಅಧ್ಯಕ್ಷರು

## ಪೀಠಿಕೆ

ನಮ್ಮ ದೇಶ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸುಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಮಡಿದ ಹಾಗೂ ನವ ಭಾರತ ನಿರ್ಮಾಣಕ್ಕಾಗಿ ಶ್ರಮಿಸಿದ ಪ್ರತಿಭಾನ್ವಿತ ಸ್ವಾತಂತ್ರ್ಯ ಹೋರಾಟಗಾರರು ಮತ್ತ ಸಂಸದೀಯ ಪಟುಗಳನ್ನು ನೆನೆಸಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿರುತ್ತದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಗಣ್ಯರ ಬಗ್ಗೆ ಅನೇಕ ಕಿರಿಹೊತ್ತಿಗೆಗಳನ್ನು ಹಿಂದಿ ಮತ್ತು ಆಂಗ್ಲ ಭಾಷೆಗಳಲ್ಲಿ ಹೊರತಂದಿರುತ್ತಾರೆ. ಆದರೆ ನಮ್ಮ ಕರ್ನಾಟಕ ರಾಜ್ಯದ ಜನಪ್ರತಿನಿಧಿಗಳಿಗೆ ಹಾಗೂ ಜನತೆಗೆ ಈ ಪ್ರತಿಭಾವಂತರುಗಳ ಬದುಕು-ಬರಹ ಮತ್ತು ಸಾಧನೆಗಳನ್ನು ಪರಿಚಯಿಸುವ ದೃಷ್ಟಿಯಿಂದ ಈ ಕಿರು ಹೊತ್ತಿಗೆಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸುವ ಒಂದು ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕೆಂದು ವಿಧಾನ ಪರಿಷತ್ತಿನ ಸನ್ಮಾನ್ಯ ಸಭಾಪತಿಯವರರಾದ ಶ್ರೀ ಡಿ.ಬಿ. ಕಲ್ಮಣ್‌ಕರ್ ಹಾಗೂ ವಿಧಾನ ಸಭೆಯ ಸನ್ಮಾನ್ಯ ಅಧ್ಯಕ್ಷರಾದ ಶ್ರೀ ರಮೇಶ್ ಕುಮಾರ್ ಅವರುಗಳು ಅಪೇಕ್ಷಿಸಿದಂತೆ ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪಸಮಿತಿಯು ಕಾರ್ಯ ಪ್ರವೃತ್ತವಾಗಿ ಭಾಷಾಂತರ ಕಾರ್ಯವನ್ನು ಕರ್ನಾಟಕ ರಾಜ್ಯದ ಭಾಷಾಂತರ ನಿರ್ದೇಶನಾಲಯದ ಸಹಯೋಗದೊಂದಿಗೆ ಹಾಗೂ ನುರಿತ ಭಾಷಾಂತರಕಾರರುಗಳ ಮೂಲಕ ತಯಾರಿಸಿರುವ ಡಾ|| ರಾಜೇಂದ್ರ ಪ್ರಸಾದ್ ಅವರ ಕೃತಿಯನ್ನು ತಮ್ಮ ಮುಂದಿಡುತ್ತಿದ್ದೇನೆ.

ಇದು ಲೋಕಸೇವಾ ಸಚಿವಾಲಯದವರು "Eminent Parliamentarians Monograph Series" ಎಂಬ ಆಂಗ್ಲ ಭಾಷೆಯ ಕನ್ನಡಾನುವಾದವಾಗಿದ್ದು, ಸದರಿ ಗ್ರಂಥದ ಪ್ರಕಾಶಕರಾದ ಲೋಕಸಭಾ ಸಚಿವಾಲಯಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅನುದಾನವನ್ನು ನಿರ್ವಹಿಸಿಕೊಟ್ಟ ಪ್ರೊ. ಆರ್.ಕೆ. ಹುಡಗಿ, ಗುಲ್ಬರ್ಗಾ ಇವರಿಗೆ ಮತ್ತು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಸಂಸದೀಯ ವಿಷಯಗಳಲ್ಲಿ ಅನುಕೂಲ ಹಾಗೂ ಅನುಭವ ನೀಡುತ್ತದೆಂದು ಭಾವಿಸುತ್ತೇನೆ.

ಬೆಂಗಳೂರು
ಸೆಪ್ಟೆಂಬರ್, 1999

**ಯಾಕೂಬ್ ಷರೀಫ್,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ.

# ಡಾ|| ರಾಜೇಂದ್ರ ಪ್ರಸಾದ್

## ಪರಿವಿಡಿ

## ಡಾ|| ರಾಜೇಂದ್ರ ಪ್ರಸಾದ: ಒಂದು ಪಾರ್ಶ್ವ ನೋಟ

ಆಧುನಿಕ ಭಾರತದ ಪ್ರಮುಖ ರೂವಾರಿಗಳಲ್ಲಿ ಒಬ್ಬರಾಗಿದ್ದ ಡಾ|| ರಾಜೇಂದ್ರ ಪ್ರಸಾದ ಅವರದು ಬಹುಮುಖ ವ್ಯಕ್ತಿತ್ವ. ಗಣ್ಯ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಅವರು ಖ್ಯಾತ ನ್ಯಾಯವಾದಿಗಳೂ ಆಗಿದ್ದರು. ನಿರರ್ಗಳ ವಾಗ್ಮಿಗಳಾಗಿದ್ದ ಅವರು ಅಸ್ಖಲಿತ ಸಂಸದರೂ ಆಗಿದ್ದರು. ಅಂತೆಯೇ ಸಮರ್ಥ ಆಡಳಿತಗಾರರಾಗಿದ್ದ ಅವರು ಅತ್ಯುತ್ತಮ ರಾಜಕೀಯ ಮುತ್ಸದ್ದಿಗಳೂ ಆಗಿದ್ದರು. ಇದೆಲ್ಲಕ್ಕೂ ಮಿಗಿಲಾಗಿ, ಮಾನವೀಯತೆ ಅವರ ವ್ಯಕ್ತಿತ್ವದ ಜೀವ ಜೀವಾಳವಾಗಿತ್ತು.

ಮಹಾತ್ಮ ಗಾಂಧೀಜಿಯ ಕಟ್ಟಾ ಅನುಯಾಯಿಗಳಾಗಿದ್ದ ಅವರು ಗಾಂಧೀಜಿಯ ನಂಬುಗೆ ಮತ್ತು ವಿಶ್ವಾಸಕ್ಕೆ ಪಾತ್ರರಾಗಿದ್ದರು. ಹಾಗೆಂದೇ ಅವರು ನಮ್ಮ ಸಂಸ್ಕೃತಿಯ ಅತ್ಯುತ್ತಮ ಅಂಶಗಳ ಪ್ರತಿನಿಧಿಗಳಾಗಿದ್ದರು. ಸಂವಿಧಾನ ಸಭೆಯ ಅಧ್ಯಕ್ಷರಾಗಿ, ಆ ಮೇಲೆ ನಮ್ಮ ದೇಶದ ಅತ್ಯುನ್ನತ ಹುದ್ದೆಯ ಸ್ಥಾನವನ್ನಲಂಕರಿಸಿ, ಸತತವಾಗಿ ಎರಡು ಅವಧಿಗಳವರೆಗೆ ಮುಂದುವರೆದ ಅವರು ನಮ್ಮ ದೇಶದ ಭವಿಷ್ಯತ್ತನ್ನು ರೂಪಿಸುವಲ್ಲಿ ಆಡಿದ ಪಾತ್ರ ಅತ್ಯಂತ ಮಹತ್ವದ್ದು. ನಮ್ಮ ರಾಜಕೀಯ ವ್ಯವಸ್ಥೆಯ ಮೇಲೆ, ರಾಷ್ಟ್ರೀಯ ಬದುಕಿನ ಮೇಲೆ ಅವರೊತ್ತಿದ ಮುದ್ರೆ ಅಚ್ಚಳಿಯದಂಥದ್ದು.

ಡಾ|| ರಾಜೇಂದ್ರ ಪ್ರಸಾದರನ್ನು ಅವರ ಗೆಳೆಯರು, ಮೆಚ್ಚಿನ ಅನುಯಾಯಿಗಳು, ನೆಚ್ಚಿನಿಂದ ಕರೆಯುತ್ತಿದ್ದದ್ದು 'ರಾಜೇನ್ ಬಾಬು' ಎಂದು. ರಾಜೇನ್ ಬಾಬು ಹುಟ್ಟಿದ್ದು ಬಿಹಾರಿನ ಸಾರಣ ಜಿಲ್ಲೆಯ ದೂರದ ಒಂದು ಹಳ್ಳಿಯಲ್ಲಿ 3, ಡಿಸೆಂಬರ್, 1884 ರಂದು. ಅಂದರೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸಿನ ಸ್ಥಾಪನೆಗಿಂತ ಒಂದು ವರ್ಷ ಮೊದಲು. ಮುಂದೆ ಅವರು ಈ ಸಂಘಟನೆಯ ಅತ್ಯುನ್ನತ ಸ್ಥಾನವನ್ನು ಒಮ್ಮೆ ಅಲ್ಲ, ಮೂರು ಸಲ ಅಲಂಕರಿಸಿದ್ದರು. ತಂದೆ ಮಹಾದೇವ ಸಹಾಯ್, ತಾಯಿ ಕಮಲೇಶ್ವರಿ ದೇವಿಯವರು ನಡೆಸಿದ್ದು ತುಂಬಾ ಸರಳವಾದ ಜೀವನ. ತ್ಯಾಗ, ಪರಿಶುದ್ಧತೆಗಳು ಅವರ ಬದುಕಿನ ಮುಖ್ಯ ಲಕ್ಷಣಗಳಾಗಿದ್ದವು. ಕುಟುಂಬದ ಆಸ್ತಿಪಾಸ್ತಿಗೇನೂ ಕಡಿಮೆಯಿರಲಿಲ್ಲ. ಆದರೆ ಸಾಕಷ್ಟು ಭೂಮಿ ಸೀಮಿ ಹೊಂದಿದ್ದರೂ ಅವರ ಕುಟುಂಬ ಅದ್ದೂರಿಯ ಬದುಕಿನಿಂದ ಬಹುದೂರವಿತ್ತು; ಸಿರಿವಂತಿಕೆಯ ಹಮ್ಮು ಬಿಮ್ಮು ಅವರ ಬಳಿ ಸುಳಿದಿರಲಿಲ್ಲ. ಆ ಕಾರಣದಿಂದಾಗಿಯೇ ಅವರ ಕುಟುಂಬ ವಿಶೇಷವಾಗಿ ಹಬ್ಬಹರಿದಿನಗಳ ಸಂದರ್ಭದಲ್ಲಿ, ಪೂಜೆ ಪುನಸ್ಕಾರಾದಿಗಳ ಮೂಹೂರ್ತಗಳಲ್ಲಿ, ಇಡೀ ಗ್ರಾಮಸ್ಥರೊಂದಿಗೆ ಮುಕ್ತವಾಗಿ ಬೆರೆಯುತ್ತಿತ್ತು. ಗ್ರಾಮದ ಒಬ್ಬ ಸದ್‌ಗೃಹಸ್ಥರಾಗಿದ್ದ ಮಹಾದೇವ ಸಹಾಯ್ ಅವರು ಪರ್ಶಿಯನ್ ಮತ್ತು ಸಂಸ್ಕೃತ ಭಾಷೆಗಳ ಪ್ರಕಾಂಡ ಪಂಡಿತರಾಗಿದ್ದರು. ರೋಗ ರುಜಿನಗಳಿಗೆ ಪರಿಹಾರ ಯಾಚಿಸಿ ತಮ್ಮಲ್ಲಿಗೆ ಬರುತ್ತಿದ್ದ ಹಲವಾರು ರುಗ್ಣ ಜೀವಿಗಳಿಗೆ ಅವರು ಆಯುರ್ವೇದ ಮತ್ತು ಯುನಾನಿ ಔಷಧಗಳನ್ನು ಉಚಿತವಾಗಿ ನೀಡುತ್ತಿದ್ದರು. ತಾಯಿ ಕಮಲೇಶ್ವರಿದೇವಿ ಗಾಢವಾದ ಧಾರ್ಮಿಕ ಸ್ವಭಾವದ ಮಹಿಳೆಯಾಗಿದ್ದಳು. ಹಾಗಾಗಿ, ರಾಜೇನ್ ಮಗುವಾಗಿದ್ದಾಗ ರಾಮಾಯಣ ಮಹಾಭಾರತದಂಥ ಪುರಾಣ ಕಾವ್ಯಗಳ ಅನೇಕ ಕಥಾ ಪ್ರಸಂಗಗಳನ್ನು ಕುರಿತು ಹೇಳುತ್ತಿದ್ದಳು. ವಿಶೇಷವಾಗಿ ಮನೆ ಮತ್ತು ಇಡೀ ಊರಿನಲ್ಲಿ ಸಾಕಾರಗೊಂಡಂತಿದ್ದ ಪ್ರಶಾಂತ, ಪರಿಶುದ್ಧವಾದ

ಪರಿಸರ ಬಾಲಕ ರಾಜೇನ್‌ನ ಮನಸ್ಸಿನ ಮೇಲೆ ಆಳವಾದ ಪ್ರಭಾವ ಬೀರಿತ್ತು. ತತ್ಪರಿಣಾಮವಾಗಿ, ಅವರು ಕ್ರಮೇಣ ಬಂಧುರ ಭಾವ, ನಿಸ್ವಾರ್ಥ ಸೇವೆ, ತ್ಯಾಗ, ವಿನಯ, ಸರಳತೆಯಿಂದ ಕೂಡಿದ ಉದಾತ್ತ ಆದರ್ಶ ಮತ್ತು ಮೌಲ್ಯಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ರೂಢಿಸಿಕೊಳ್ಳಲು ಸಾಧ್ಯವಾಯಿತು.

## ಶಿಕ್ಷಣ

ಹತ್ತೊಂಬತ್ತನೇ ಶತಮಾನದ ಭಾರತದ ಇನ್ನಾವುದೇ ಹಳ್ಳಿಯಂತೆ, ರಾಜೇನ್ ಬಾಬುರವರವು ಊರಿನಲ್ಲಿಯೂ ಪ್ರಾಥಮಿಕ ಶಿಕ್ಷಣದ ಮೂಲಭೂತ ಸೌಲಭ್ಯವೂ ಇರಲಿಲ್ಲ. ಆದ್ದರಿಂದ ಅವರ ಆರಂಭದ ಶಿಕ್ಷಣ ಗ್ರಾಮದ ಮೌಲ್ವಿಗಳಿಂದ ನಡೆಯಿತು. ಗ್ರಾಮದ ಮೌಲ್ವಿ, ಅವರಿಗೆ ಪರ್ಶಿಯನ್ ಕಲಿಸಿದರು. ಅನಂತರ ಹೈಸ್ಕೂಲ್ ಶಿಕ್ಷಣಕ್ಕಾಗಿ, ಜಿಲ್ಲಾ ಸ್ಥಳವಾಗಿದ್ದ ಛಾಪ್ರಾ ಪಟ್ಟಣದ ಒಂದು ಶಾಲೆಗೆ ಸೇರಿಸಲಾಯಿತು. ಅಲ್ಲಿಂದಲೇ ಅವರು ಕಲ್ಕತ್ತಾ ವಿಶ್ವವಿದ್ಯಾಲಯದ ಪ್ರವೇಶ ಪರೀಕ್ಷೆಯಲ್ಲಿ ಪಾಸಾದರು. ಆ ಕಾಲದಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಯಲ್ಲಿ ಬಂಗಾಲ್, ಬಿಹಾರ್, ಓರಿಸ್ಸಾ, ಅಸ್ಸಾಮ ಮತ್ತು ಬರ್ಮಾ ಪ್ರದೇಶಗಳು ಬರುತ್ತಿದ್ದವು. ಪ್ರವೇಶ ಪರೀಕ್ಷೆಯಂಥ ಪ್ರಥಮ ಹಂತದಲ್ಲೇ ರಾಜೇನ್ ಬಾಬು ತಮ್ಮ ಪ್ರತಿಭೆಯನ್ನು ಮೆರೆದು ಪ್ರಪ್ರಥಮ ಸ್ಥಾನ ಪಡೆದುಕೊಂಡರು. ಅವರ ಪಾಲಿಗೆ ಇದು ಒಂದು ಅದ್ಭುತ ಸಾಧನೆಯೆಂದು ಪರಿಗಣಿಸಲಾಯಿತಷ್ಟೇ ಅಲ್ಲ, ಬಿಹಾರದಿಂದ ಬಂದ ಇಂಥ ಮಹತ್ ಪ್ರತಿಭೆಯ ಮೊಟ್ಟಮೊದಲ ವಿದ್ಯಾರ್ಥಿ ಎಂಬ ಕೀರ್ತಿಗೂ ಭಾಜನರಾದರು.

ಹಿಂದೂ ಸಮಾಜದ ಪದ್ಧತಿಯಂತೆ ಹದಿಮೂರು ತುಂಬಿದೊಡನೆಯೇ 1897ರಲ್ಲಿ ರಾಜೇನ್ ಬಾಬು ಅವರ ವಿವಾಹವಾಯಿತು. ಪತ್ನಿ ರಾಜವಂಶದೇವಿ ಹಿಂದೂ ಸಂಪ್ರದಾಯದ ಮೂರ್ತರೂಪದಂತಿದ್ದರು. ಆದ್ದರಿಂದಲೇ ಪತಿಯ ಸುಖ ದುಃಖದಲ್ಲಿ ಪಾಲ್ಗೊಳ್ಳುತ್ತ ತಮ್ಮ ಬದುಕನ್ನು ರಾಜೇನ್ ಬಾಬು ಅವರೊಂದಿಗೆ ತಾದಾತ್ಮ್ಯಗೊಳಿಸಿದರು. ಮುಂದೆ ಎರಡು ಗಂಡು ಮಕ್ಕಳ ತಾಯಿಯಾದ ಅವರು ರಾಜೇನ್ ಬಾಬು ಅವರಿಗೆ ಸರ್ವ ವಿಧದಿಂದಲೂ ಅನುರೂಪದ ಸಹಧರ್ಮಣಿಯಾಗಿ ಬಾಳಿದರು.

ಪ್ರವೇಶ ಪರೀಕ್ಷೆ ಪಾಸಾದ ಮೇಲೆ ರಾಜೇನ್ ಬಾಬು ಆ ಕಾಲದಲ್ಲಿ ಕಲ್ಕತ್ತೆಯ ಪ್ರತಿಷ್ಠಿತ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಪ್ರವೇಶ ಪಡೆದರು. ಅಲ್ಲಿ ಕಿರಿಯ ವಿದ್ಯಾರ್ಥಿಯಾಗಿದ್ದರೂ ಅನತಿ ಕಾಲದಲ್ಲೇ ಸಹಪಾಠಿಗಳ ಮಧ್ಯ ಸಾಕಷ್ಟು ಹೆಸರು ಮಾಡಿದ ರಾಜೇನ್ ಬಾಬು, ಕಾಲೇಜಿನ ವಿದ್ಯಾರ್ಥಿ ಸಂಘದ ಕಾರ್ಯದರ್ಶಿ ಸ್ಥಾನಕ್ಕೆ ದೊಡ್ಡ ಬಹುಮತದೊಂದಿಗೆ ಚುನಾಯಿತರಾಗಿ ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಮುಖಂಡರಾದರು.

ಕಾಲೇಜು ವ್ಯಾಸಂಗದ ಸಂದರ್ಭದಲ್ಲಿ ಖ್ಯಾತ ವಿಜ್ಞಾನಿ ಜಗದೀಶ್ಚಂದ್ರ ಬೋಸ್, ಮುಂತಾದವರು ಎಷ್ಟೇ ಒತ್ತಾಯ ಮಾಡಿದರೂ ರಾಜೇನ್ ಬಾಬು ವಿಜ್ಞಾನ ವಿಷಯಗಳನ್ನು ಆರಿಸಿಕೊಳ್ಳಲಿಲ್ಲ. ಬದಲಾಗಿ, ಅವರು ಕಲಾ ವಿಭಾಗವನ್ನೇ ಆಯ್ಕೆ ಮಾಡಿಕೊಂಡರು. ವಿದ್ಯಾರ್ಥಿ ದೆಸೆಯಿಂದಲೇ ಅವರಲ್ಲಿ ರಾಷ್ಟ್ರ ಪ್ರೇಮದ ಪ್ರವೃತ್ತಿ ಆಳವಾಗಿ ಬೇರೂರತೊಡಗಿತ್ತು. 1905ರಲ್ಲಿ ಬಂಗಾಲ ವಿಭಜನೆಯಾದಾಗ ಅದನ್ನು ವಿರೋಧಿಸಿ ಭುಗಿಲೆದ್ದ ಸಂಘರ್ಷ ಮತ್ತು ಆ ಸಂದರ್ಭದಲ್ಲಿಯ

ಜನತೆಯ ಪ್ರತಿಭಟನಾತ್ಮಕ ಸಭೆ ಮೆರವಣಿಗೆಗಳು, ರಾಷ್ಟ್ರ ನಾಯಕರು ಮಾಡುತ್ತಿದ್ದ ಭಾಷಣಗಳು, ರಾಜೇನ್ ಬಾಬು, ಅವರ ಮೇಲೆ ಗಾಢ ಪ್ರಭಾವ ಬೀರಿ ಅವರ ಅಂತರಾಳವನ್ನು ಕಲಕಿದವು. 1906ರಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ತಮ್ಮ ಅಧ್ಯಯನ ಮುಂದುವರಿಸುತ್ತಿದ್ದಾಗಲೇ ಅವರು ಮೊಟ್ಟ ಮೊದಲ ಬಾರಿಗೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಒಂದು ಸಭೆಯಲ್ಲಿ ಪಾಲ್ಗೊಂಡರು. 1908ರಲ್ಲಿ ಕಲ್ಕತ್ತೆಯಲ್ಲಿ ಬಿಹಾರ ವಿದ್ಯಾರ್ಥಿಗಳನ್ನು ಸಂಘಟಿಸಿ ಬಿಹಾರ ವಿದ್ಯಾರ್ಥಿ ಸಮ್ಮೇಳನವನ್ನು ರೂಪಿಸಿದರು. ಅದು ಇಡೀ ಭಾರತದಲ್ಲಿಯೇ ಅಂಥ ಮೊದಲ ಸಂಘಟನೆಯಾಗಿತ್ತು. ಮುಂದೆ ಕಾಲಾನುಕ್ರಮದಲ್ಲಿ, ಇದೇ ಸಂಘಟನೆ ಬಿಹಾರಿನ ಅನೇಕ ಪ್ರಮುಖ ರಾಜಕೀಯ ನಾಯಕರಿಗೆ ಜನ್ಮ ಕೊಟ್ಟಿತು. ಈ ಸಂಘಟನೆಯು ರಾಜೇಂದ್ರ ಪ್ರಸಾದರ ಸಂಘಟನಾ ಚಾತುರ್ಯವನ್ನು ಮೊದಲ ಬಾರಿಗೆ ಪ್ರದರ್ಶಿಸಿತು. ಆಮೇಲೆ ಕಾಲ ಕಳೆದಂತೆ, ಅವರ ಸಂಘಟನಾ ಸಾಮರ್ಥ್ಯ ಒಂದು ಐತಿಹ್ಯವಾಗಿ ಮಾರ್ಪಟ್ಟಿತು. ಅಧ್ಯಯನದಲ್ಲಿಯೂ ರಾಜೇನ್ ಬಾಬು ಸದಾ ಎಲ್ಲರಿಗಿಂತಲೂ ಮುಂದಿರುತ್ತಿದ್ದರು. ಬಿ.ಎ. ಪರೀಕ್ಷೆಯಲ್ಲಿ ಪ್ರಥಮ ದರ್ಜೆ ಪಡೆದ ಅವರು ಎಂ.ಎ ಇಂಗ್ಲೀಷ್‌ಗೆ ಪ್ರವೇಶ ಪಡೆದರು. ಅಲ್ಲಿಯೂ ತಮ್ಮ ಪ್ರತಿಭೆಯನ್ನು ಸಾಬೀತುಗೊಳಿಸಿದ ಅವರು ಸ್ನಾತಕೋತ್ತರ ಪದವಿಯ ನಂತರ ಅಂದಿನ ಅನೇಕ ಹಿರಿಯ ಧುರೀಣರಂತೆ ಕಾನೂನು ಅಧ್ಯಯನಕ್ಕೆ ತೊಡಗಿದರು. ಅಜಮಾಸು ಇದೇ ಸಂದರ್ಭದಲ್ಲಿ ಅವರು ಗೋಪಾಲಕೃಷ್ಣ, ಗೋಖಲೆಯವರ ಸಂಪರ್ಕಕ್ಕೆ ಬಂದರು. ರಾಜೇನ್ ಬಾಬು ಅವರ ಶೈಕ್ಷಣಿಕ ಪ್ರತಿಭೆ, ಸುಸಂಸ್ಕೃತ ಕೌಟುಂಬಿಕ ಹಿನ್ನೆಲೆ, ಇತ್ಯಾದಿಯನ್ನು ಬಹುಸೂಕ್ಷ್ಮವಾಗಿ ಗಮನಿಸಿದ್ದ ಶ್ರೀ ಗೋಖಲೆಯವರು, ರಾಜೇನ್ ಬಾಬು ಭಾರತ ಸೇವಾ ದಳ ಸೇರುವಂತೆ ಕೇಳಿಕೊಂಡರು. ಆದರೆ ಕುಟುಂಬದ ಸದಸ್ಯರ ಬಲವತ್ತರವಾದ ಒತ್ತಾಯಕ್ಕೆ ಮಣಿದು ಅವರು ಸೇವಾದಳವನ್ನು ಸೇರಲಿಲ್ಲ.

## ನ್ಯಾಯವಾದಿಗಳಾಗಿ

ಕಾಯ್ದೆಯ ಅಭ್ಯಾಸವನ್ನು ಯಶಸ್ವಿಯಾಗಿ ಮುಗಿಸಿದ ನಂತರ ರಾಜೇನ್ ಬಾಬು 1911ರಲ್ಲಿ ಕಲ್ಕತ್ತಾದಲ್ಲಿ ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿದ್ದೇ ತಡ ಕೂಡಲೆ ಅವರು ತುಂಬಾ ಜನಪ್ರಿಯ ವಕೀಲರಾದರು. ಅವರಲ್ಲಿಗೆ ಬರುತ್ತಿದ್ದ ಕಕ್ಷಿದಾರರ ಸಂಖ್ಯೆ ಶೀಘ್ರದಲ್ಲಿಯೇ ಬಹುದೊಡ್ಡದಾಗಿ ಬೆಳೆಯಿತು. ಇದಕ್ಕೆ ಕಾರಣ ರಾಜೇನ್ ಬಾಬು ಅವರ ಪರಿಶುದ್ಧ ಚಾರಿತ್ರ್ಯ ಮತ್ತು ಆಂತರಿಕ ನಿಸ್ಪೃಹತೆ. ಜೊತೆಗೆ ತಮ್ಮ ತೀಕ್ಷ್ಣ ಬುದ್ಧಿ ಅದ್ಭುತವಾದ ಸ್ಮರಣ ಶಕ್ತಿ ಹಾಗೂ ವೃತ್ತಿ ನೀತಿಯ ಬಗ್ಗೆ ಇದ್ದ ನಿಷ್ಠುರ ನಿಷ್ಠೆ - ಮುಂತಾದ ಸದ್ಗುಣಗಳ ಕಾರಣದಿಂದಾಗಿ ಅವರು ನ್ಯಾಯಾಧೀಶರ ಗೌರವ ಹಾಗೂ ಶ್ಲಾಘನೆಗೂ ಪಾತ್ರರಾದರು. ವಿಷಯದ ಆಳ ಮತ್ತು ಪರಿಪೂರ್ಣವಾದ ಅಧ್ಯಯನದ ಫಲಶೃತಿಯಾಗಿ ಹೊರ ಹೊಮ್ಮುತ್ತಿದ್ದ ರಾಜೇನ್ ಬಾಬು ಅವರ ನಿಶಿತ ಮತಿಯ, ಕಾನೂನಿನ ಪ್ರಜ್ಞೆ, ತರ್ಕಬದ್ಧ ವಾದ ವಿಶ್ಲೇಷಣೆ ಇತ್ಯಾದಿಗಳನ್ನು ನ್ಯಾಯಾಧೀಶರು ತುಂಬಾ ಮೆಚ್ಚಿಕೊಳ್ಳುತ್ತಿದ್ದರು. ಅತುಲ ಬುದ್ಧಿಮತ್ತೆ ಮತ್ತು ಅಪಾರ ಶ್ರಮದ ಅವರ ವೃತ್ತಿ ಜೀವನ ಅನತಿ ಕಾಲದಲ್ಲೇ ಅವರಿಗೆ ಸಾಕಷ್ಟು ಯಶಸ್ಸು ದೊರಕಿಸಿಕೊಟ್ಟಿದ್ದರಲ್ಲಿ ಆಶ್ಚರ್ಯವೇನಿಲ್ಲ. ಒಮ್ಮೆ ಒಂದು ಮೊಕದ್ದಮೆಗೆ ಸಂಬಂಧಿಸಿ ಅಂದಿನ ಗಣ್ಯ ನ್ಯಾಯ ಮೀಮಾಂಸಕ ಮತ್ತು ಪ್ರಾಜ್ಞ ನ್ಯಾಯಾಧೀಶರಾಗಿದ್ದ ನ್ಯಾಯಾಮೂರ್ತಿ ಅಸುತೋಷ ಮುಖರ್ಜಿಯವರ ಮುಂದೆ ರಾಜೇನ್ ಬಾಬು ಮಂಡಿಸುತ್ತಿದ್ದ ವಾದದ ವೈಖರಿಗೆ ಮೆಚ್ಚಿ ಶ್ರೀ ಮುಖರ್ಜಿಯವರು ತಲೆದೂಗಿದರು. ಅದರಿಂದ ತುಂಬಾ

ಪ್ರಭಾವಿತರಾದ ಅವರು ಕಲ್ಕತ್ತಾ ವಿಶ್ವವಿದ್ಯಾಲಯದ ಕಾಯ್ದೆ ವಿಭಾಗದಲ್ಲಿ ಪ್ರಾಧ್ಯಾಪಕ ಹುದ್ದೆ ನೀಡುವುದಾಗಿ ಹೇಳಿ, ರಾಜೇನ್ ಬಾಬು ಅದನ್ನು ಸ್ವೀಕರಿಸುವಂತೆ ಮನವೊಲಿಸಿದರು. ಕಲ್ಕತ್ತಾ ವಿಶ್ವವಿದ್ಯಾಲಯದ ಕುಲಾಧಿಪತಿಗಳೂ ಆಗಿದ್ದ ನ್ಯಾಯಮೂರ್ತಿ ಅಸುತೋಷ ಮುಖರ್ಜಿಯವರ ಕರೆಗೆ ಓಗೊಟು ಕೃತಜ್ಞತೆಯಿಂದ ಪ್ರಾಧ್ಯಾಪಕ ಹುದ್ದೆಯನ್ನು ಸ್ವೀಕರಿಸಿದರು.

ಯುವ ಉತ್ಸಾಹಿ ನ್ಯಾಯವಾದಿಗಳಾಗಿದ್ದ ರಾಜೇನ್ ಬಾಬು ವೃತ್ತಿಯ ಪರಿಧಿಯಾಚೆಗೂ ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ ಚಟುವಟಿಕೆಗಳಂಥ ವಿವಿಧ ಕ್ಷೇತ್ರಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳತೊಡಗಿದರು. ಅಖಿಲ ಭಾರತ ಹಿಂದೀ ಸಾಹಿತ್ಯ ಸಮ್ಮೇಳನದಲ್ಲಿ ಸಾಕಷ್ಟು ಆಸಕ್ತಿ ತೋರತೊಡಗಿದರು.

ವಕೀಲಿ ವೃತ್ತಿಯನ್ನು ಅನುಸರಿಸುವುದರ ಜೊತೆಗೆ ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕ ಹುದ್ದೆಯ ಕಾರ್ಯ ನಿರ್ವಹಿಸುತ್ತಾ ಅವರು 1915ರಲ್ಲಿ ಕಾಯ್ದೆಯ ಸ್ನಾತಕೋತ್ತರ ಪದವಿಯಾದ ಎಂ.ಎಲ್. ಪರೀಕ್ಷೆಯಲ್ಲಿ ತೇರ್ಗಡೆಯಾದರು. ಅಲ್ಲಿಯೂ ಪ್ರಪ್ರಥಮ ಸ್ಥಾನ ಅವರ ಪಾಲಿಗೇ. ಮುಂದೆ 1916ರಲ್ಲಿ, ಪಾಟ್ನಾ ಉಚ್ಚ ನ್ಯಾಯಾಲಯದ ಸ್ಥಾಪನೆಯಾದ ಮೇಲೆ, ಅವರು ಕಲ್ಕತ್ತೆಯಿಂದ ಪಾಟ್ನಾಕ್ಕೆ ಬಂದರು. ಈ ಆಗಮನ ರಾಜೇಂದ್ರ ಪ್ರಸಾದರ ಜೀವನದಲ್ಲಿ ಒಂದು ಹೊಸ ತಿರುವಿಗೆ ಕಾರಣವಾಯಿತೆಂಬುದನ್ನು ಅವರ ಬದುಕಿನ ಮುಂದಿನ ಅನೇಕ ಘಟನೆಗಳು ಶ್ರುತಪಡಿಸುತ್ತವೆ.

## ಮಹಾತ್ಮರ ಅನುಚರ

ಡಾ॥ ರಾಜೇಂದ್ರ ಪ್ರಸಾದರು ಮಹಾತ್ಮಾ ಗಾಂಧೀಜಿಯ ಪ್ರಭಾವಕ್ಕೆ ಒಳಗಾದದ್ದು 1917ರಲ್ಲಿ. ಬ್ರಿಟಿಷ್ ನೀಲಿ ಬೆಳೆಗಾರರ (British Indigo Planters) ಶೋಷಣೆಯಿಂದ ರೈತರನ್ನು ವಿಮೋಚನೆಗೊಳಿಸಲು ಗಾಂಧೀಜಿ ಚಂಪಾರಣ ಸತ್ಯಾಗ್ರಹ ಸಂಘಟಿಸಿದಾಗ, ಇದಕ್ಕೂ ಮುಂಚೆ 1916ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಲಕ್ನೌ ಅಧಿವೇಶನದ ಸಂದರ್ಭದಲ್ಲಿ ಗಾಂಧೀಜಿಯನ್ನು ಸಮೀಪದಿಂದ ನೋಡುವ ಅವಕಾಶ ಅವರಿಗೆ ದೊರಕಿತ್ತು. ಚಂಪಾರಣ ಸತ್ಯಾಗ್ರಹವು ಆಮೇಲೆ ಗಾಂಧೀಜಿಯ ನೇತೃತ್ವದಲ್ಲಿ ರಾಷ್ಟ್ರ ಮಟ್ಟದಲ್ಲಿ ಹೂಡಲಾದ ಅಹಿಂಸಾತ್ಮಕ ರಾಷ್ಟ್ರೀಯ ಮಹಾ ಹೋರಾಟಕ್ಕೆ ಪೂರ್ವ ಪೀಠಿಕೆಯಾಯಿತು.

ಈ ನೀಲಿ ರೈತರ ವಿಮೋಚನೆಯ ಹೋರಾಟದ ಸಂದರ್ಭದಲ್ಲಿ ಮಹಾತ್ಮ ಗಾಂಧೀಜಿ ಉಪಸ್ಥಿತರಿದ್ದದ್ದು ಸಹಜವಾಗಿಯೇ ಬ್ರಿಟಿಷ್ ಸರ್ಕಾರ ಮತ್ತು ನೀಲಿ ಬೆಳೆಗಾರರ ಅಸಂತೋಷಕ್ಕೆ ಕಾರಣವಾಯಿತು. ಗಾಂಧೀಜಿಯ ಮೇಲೆ ಮೊಕದ್ದಮೆ ಹೂಡಿ ಅವರನ್ನು ನ್ಯಾಯಾಲಯಕ್ಕೆ ಎಳೆಯಲಾಯಿತು. ಅಲ್ಲಿ ಗಾಂಧೀಜಿ, ಎಲ್ಲರ ನಿರೀಕ್ಷೆಗನುಗುಣವಾಗಿ, ಸತ್ಯಾಗ್ರಹದ ತತ್ವವನ್ನು ಬೋಧಿಸುವ ಮತ್ತು ಸಮರ್ಥಿಸುವ ಕ್ರಮ ಕೈಗೊಂಡರು. ರೈತರ ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಡುತ್ತಿದ್ದ ಗಾಂಧೀಜಿ ತಮ್ಮ ಸಹಾಯಕ್ಕಾಗಿ ರಾಜೇಂದ್ರ ಪ್ರಸಾದ ಮತ್ತು ಇನ್ನಿತರ ಕೆಲವು ವಕೀಲರನ್ನು ಆಮಂತ್ರಿಸಿದರು. ಉತ್ಸಾಹಿ ತರುಣರಾಗಿದ್ದ ಡಾ॥ ರಾಜೇಂದ್ರ ಪ್ರಸಾದ ಗಾಂಧೀಜಿಯ ಕರೆಗೆ ಸ್ಪಂದಿಸಿ ಅವರ ಸತ್ಯಾಗ್ರಹದ ಪ್ರಯೋಗದಲ್ಲಿ ಪಾಲ್ಗೊಂಡರು. ಚಂಪಾರಣ ಸತ್ಯಾಗ್ರಹವು ರಾಜೇಂದ್ರ ಪ್ರಸಾದರನ್ನು ಮಹಾತ್ಮ ಗಾಂಧೀಜಿಯ ಆಪ್ತವಲಯಕ್ಕೆ ಪ್ರವೇಶ ದೊರಕಿಸಿಕೊಟ್ಟಿತು.

ಅಷ್ಟೇ ಅಲ್ಲ, ಅದು ಅವರ ಇಡೀ ಬದುಕಿನ ದಾರಿಯನ್ನೂ ಬದಲಾಯಿಸಿತು. ಗಾಂಧೀಜಿಯಿಂದ ಸ್ಫೂರ್ತಿ ಪಡೆದ ರಾಜೇಂದ್ರ ಪ್ರಸಾದರು ತಮ್ಮ ಬದುಕಿನ ವೈಖರಿಯನ್ನು ಸರಳಗೊಳಿಸಿಕೊಂಡು ಒಬ್ಬ ನಿಜವಾದ ಗಾಂಧೀವಾದಿಯಾದರು. ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳುವ, ತಮ್ಮ ಪಾತ್ರೆಗಳನ್ನು ತಾವೇ ತೊಳೆದುಕೊಳ್ಳುವ, ರೈಲಿನ ತೃತೀಯ ದರ್ಜೆಯಲ್ಲಿ ಪ್ರಯಾಣಿಸುವ ಮುಂತಾದ ಸಾದಾ ಮತ್ತು ಸರಳ ಜೀವನದ ವಿಧಾನವನ್ನು ರೂಢಿಸಿಕೊಂಡು, ಸುಖ ಸುಪ್ಪತ್ತಿಗೆಯ ಬದುಕನ್ನು ನಿರ್ಭಿಡೆಯಿಂದ ಧಿಕ್ಕರಿಸಿದರು. ನಮ್ಮ ರಾಷ್ಟ್ರದ ಅತ್ಯುನ್ನತ ಹುದ್ದೆಯಾದ ರಾಷ್ಟ್ರಪತಿಯ ಸ್ಥಾನವನ್ನು ಅಲಂಕರಿಸಿದಾಗಲೂ ಅವರು ಅದೇ ಸರಳ ಮತ್ತು ಸವಿನಯದ ಬದುಕನ್ನು ಮುಂದುವರಿಸಿಕೊಂಡು ಬಂದರು. ತಮ್ಮ ನೆಚ್ಚಿನ ನೇತಾರರ ಕ್ರಿಯಾಶೀಲ ಮಾರ್ಗದರ್ಶನದಲ್ಲಿ ಭರದಿಂದ ಹೆಜ್ಜೆ ಹಾಕಿದ ಅವರು ಅಂದು ಬಿಹಾರಿನಲ್ಲಿ ನಡೆದ ಅನೇಕ ಆಂದೋಲನ, ಹೋರಾಟಗಳಿಗೆ ನವ ನೇತೃತ್ವವನ್ನು ನೀಡಿದರು. ಆ ಮೂಲಕ ದೇಶವನ್ನು ಸ್ವಾತಂತ್ರ್ಯದ ಗುರಿಯೆಡೆಗೆ ಮುನ್ನಡೆಸುತ್ತಾ ಆರ್ಥಿಕ ಪುನರುಜ್ಜೀವನಕ್ಕಾಗಿಯೂ ಶ್ರಮಿಸಿದರು. ಚಂಪಾರಣದಲ್ಲಿ ಗಾಂಧೀಜಿಯಿಂದ ಆರಂಭಿಸಲ್ಪಟ್ಟ 'ಸತ್ಯಾಗ್ರಹ' ಅಸ್ತ್ರವು ಕೈರಾದಲ್ಲಿ ಪರಿಪೂರ್ಣಗೊಂಡಿತು. ಕೈರಾ ಜಿಲ್ಲೆಯ ರೈತರು ಕೂಡ ತಮ್ಮ ಹೋರಾಟದಲ್ಲಿ ಸತ್ಯಾಗ್ರಹದ ತಂತ್ರವನ್ನು ಬಳಸತೊಡಗಿದರು; ಸಾಮ್ರಾಜ್ಯಶಾಹೀ ಸರಕಾರದ ಎಲ್ಲ ದಂಡನಾ ಕ್ರಮಗಳನ್ನು ಪ್ರತಿಭಟಿಸಿ ಎದ್ದು ನಿಂತರು; ಸತ್ಯಾಗ್ರಹದ ಸೂತ್ರ ಕರಗತ ಮಾಡಿಕೊಂಡ ಅವರು ಭೂ ಕಂದಾಯವನ್ನು ಕೊಡಲು ಧೈರ್ಯದಿಂದ ನಿರಾಕರಿಸಿದರು. ಸರಕಾರ ಅನಿವಾರ್ಯವಾಗಿ ಮಣಿಯಬೇಕಾಯಿತು. ಚಂಪಾರಣ ಸತ್ಯಾಗ್ರಹವು ರಾಜೇಂದ್ರ ಪ್ರಸಾದರಲ್ಲಿ ಗಾಂಧೀಜಿಯ ಸತ್ಯಾಗ್ರಹದ ಹೋರಾಟದ ಹಾದಿಯಲ್ಲಿ ನಂಬುಗೆಯನ್ನು ಗಟ್ಟಿಗೊಳಿಸಿದರೆ, ಕೈರಾದಲ್ಲಿ ಅವರಿಗೆ ದೊರೆತ ಅದ್ಭುತ ಯಶಸ್ಸು ಅವರನ್ನು ಇನ್ನೂ ಹೆಚ್ಚು ಗಾಂಧೀಜಿಯ ಹತ್ತಿರಕ್ಕೆ ತಂದಿತು. ಇದರಿಂದ ವಿದೇಶೀ ಆಳ್ವಿಕೆಯ ಶೋಷಣೆಯ ವಿರುದ್ಧ ಸತ್ಯಾಗ್ರಹದ ಅಸ್ತ್ರ ಮಾತ್ರ ತುಂಬಾ ಪರಿಣಾಮಕಾರಿಯಾಗಬಲ್ಲದು ಎನ್ನುವ ಬಗ್ಗೆ ಅವರ ವಿಶ್ವಾಸ ಇನ್ನೂ ದೃಢವಾಯಿತು. ಈ ರೀತಿಯಾಗಿ, ಗಾಂಧೀಜೀಯ ಪ್ರಭಾವಲಯಕ್ಕೆ ಬಂದ ಪೂರ್ವ ಪ್ರಾಂತಗಳ ಮೊದಲ ಪ್ರಧಾನ ವ್ಯಕ್ತಿ ರಾಜೇಂದ್ರ ಪ್ರಸಾದರಾಗಿದ್ದರೆ, ಪಶ್ಚಿಮ ಪ್ರಾಂತಗಳಿಂದ ಬಂದ ಮೊದಲ ಪ್ರಮುಖ ಗಾಂಧೀವಾದಿ ವಲ್ಲಭ ಬಾಯಿ ಪಟೇಲರಾಗಿದ್ದರು.

## ಸ್ವಾತಂತ್ರ್ಯ ಹೋರಾಟಗಾರ

ತಮ್ಮ ಉನ್ನತ ಶಿಕ್ಷಣಕ್ಕಾಗಿ ಕಲ್ಕತ್ತೆಗೆ ಬರುವದಕ್ಕಿಂತ ಬಹಳ ಮುಂಚೆಯೇ ದೇಶಪ್ರೇಮದ ಮತ್ತು ರಾಷ್ಟ್ರೀಯ ಭಾವನೆಗಳು ರಾಜೇನ್ ಬಾಬು ಅವರ ಹೃನ್ಮನಗಳಲ್ಲಿ ತುಂಬಿ ಹೋಗಿದ್ದವು. ಅವರ ಸಹೋದರ ಆಗಲೇ ರಾಷ್ಟ್ರೀಯ ಹೋರಾಟದಲ್ಲಿ ಧುಮುಕಿದ್ದರಿಂದ ಅವರಿಂದಲೇ ರಾಜೇನ್ ಬಾಬು ಅವರಿಗೆ 'ಸ್ವದೇಶಿ' ಪಂಥದ ದೀಕ್ಷೆಯಾಗಿತ್ತು. ಗಾಂಧೀಜಿಯ ವಿಚಾರ ಧಾರೆಯಿಂದ ಪ್ರೋತ್ಸಾಹಿತರಾದ ಅವರು ಮಹಾತ್ಮರ ಸ್ವಾತಂತ್ರ್ಯ ಕಹಳೆಗೆ ಓಗೊಟ್ಟು ಅವರ ವಿಶಿಷ್ಟವೂ ಅಪೂರ್ವವೂ ಆದ ಪ್ರತಿಭಟನೆಯ ವಿಧಾನಕ್ಕೆ ಮಾರು ಹೋದರು. ಗಾಂಧೀಜಿಯ ಹೋರಾಟದ ವಿಧಾನ ಅವರ ಮನಸ್ಸನ್ನು ಸೂರೆಗೊಂಡಿತು. ಪರಿಣಾಮವಾಗಿ, ರಾಜೇಂದ್ರ ಪ್ರಸಾದರು ವಸಾಹತುಶಾಹಿ ಆಡಳಿತದ ವಿರುದ್ಧ ರಾಜಕೀಯ ಹೋರಾಟದ ಕಣಕ್ಕೆ ನೇರವಾಗಿ ಇಳಿದರು.

ಅಂದಿನಿಂದ ರಾಷ್ಟ್ರವನ್ನು ವಸಾಹತು ವಾದಿಗಳ ಹಿಡಿತದಿಂದ ಬಿಡಿಸಲು ದೃಢ ನಿರ್ಧಾರದಿಂದ ಮುನ್ನುಗ್ಗಿದರು.

1918ರ ರೌಲೆಟ್ ಕಾಯಿದೆ ಮತ್ತು 1919ರ ಜಲಿಯನ್ ವಾಲಾ ಬಾಗ್ ಹತ್ಯಾಕಾಂಡದ ನಂತರ ರಾಜೇಂದ್ರ ಪ್ರಸಾದರಿಗೆ ಗಾಂಧೀಜಿಯ ಹೋರಾಟದ ಸಾಧನ ಮಾರ್ಗಗಳ ಬಗ್ಗೆ ಇನ್ನೂ ಹೆಚ್ಚಿನ ಸಹಮತಿ ಉಂಟಾಯಿತು. ಬ್ರಿಟಿಷ್ ಸರಕಾರದ ಅಮಾನವೀಯ ದಬ್ಬಾಳಿಕೆಯ ಕಾರ್ಯಾಚರಣೆ ಮತ್ತು ಕಾಯ್ದೆಗಳೆದುರು 'ಅಸಹಕಾರ' ಮಾತ್ರ ಅತ್ಯಂತ ಪರಿಣಾಮಕಾರಿ ಹಾಗೂ ಸಬಲ ಅಸ್ತ್ರವಾಗಬಲ್ಲದೆಂದು ಅವರಿಗೆ ಖಚಿತವಾಯಿತು. ಕರಾಳ ಕಾಯ್ದೆ ಎಂದು ಕರೆಯಲ್ಪಟ್ಟ ರೌಲೆಟ್ ಕಾಯ್ದೆಯ ವಿರುದ್ಧದ ಪ್ರತಿಭಟನೆಯ ಸಂದರ್ಭದಲ್ಲಿ ಪರಿಪೂರ್ಣ ಅಹಿಂಸೆಯನ್ನು ಪಾಲಿಸುವುದಾಗಿ ಪ್ರತಿಜ್ಞೆಗೈದು ಬಿಹಾರಿನ ಮೊದಲ ಪ್ರಮುಖ ಸತ್ಯಾಗ್ರಹಿ ರಾಜೇಂದ್ರ ಪ್ರಸಾದರಾಗಿದ್ದರು. ಹೆಚ್ಚು ಕಡಿಮೆ ಇದೇ ಹೊತ್ತಿಗೆ ರಾಜೇನ್ ಬಾಬು ಅತ್ಯಂತ ಲಾಭದಾಯಕವಾಗಿದ್ದ ವಕೀಲ ವೃತ್ತಿಯನ್ನು ಬಿಟ್ಟು ತಾಯ್ನಾಡಿನ ಸ್ವಾತಂತ್ರ್ಯದ ಹೋರಾಟಕ್ಕೆ ತಮ್ಮ ಸಮಸ್ತ ಬದುಕನ್ನು ಸಮರ್ಪಿಸಲು ತೀರ್ಮಾನ ತೆಗೆದುಕೊಂಡರು. ಸ್ವತಃ ಕಷ್ಟಪಟ್ಟು ಅತ್ಯಂತ ಮುತುವರ್ಜಿಯಿಂದ ಸಂಸ್ಥಾಪಿಸಿಕೊಂಡಿದ್ದ ವಕೀಲಿ ವೃತ್ತಿಗೆ ಯಾವುದೇ ಅಳುಕಿಲ್ಲದೆ ತಿಲಾಂಜಲಿಯಿತ್ತರು.

1924ರಲ್ಲಿ ಅಸಹಕಾರ ಅಂಧೋಲನದ ಅಂಗವಾಗಿ ಗಾಂಧೀಜಿ ದೇಶದಾದ್ಯಂತ ಸತ್ಯಾಗ್ರಹ ಆರಂಭಿಸಿದರು. ಅದಕ್ಕೆ ಜನತೆಯಿಂದ ಅಭೂತ ಪೂರ್ವ ಪ್ರತಿಕ್ರಿಯೆ ದೊರೆಯಿತು. ಆದರೆ ಚೌರಿಚೌರ ಘಟನೆ ಅವರ ಮನಸ್ಸಿಗೆ ತುಂಬಾ ನೋವುಂಟು ಮಾಡಿತು. ಚೌರಿಚೌರದಲ್ಲಿ, ಕೋಪಾವಿಷ್ಟರಾಗಿದ್ದ ಸತ್ಯಾಗ್ರಹಿಗಳ ಸಮೂಹ ಒಂದು ಪೊಲೀಸ್ ಠಾಣೆಗೆ ಬೆಂಕಿಯಿಟ್ಟಿತ್ತು. ಪರಿಣಾಮವಾಗಿ ಅನೇಕ ಪೊಲೀಸರು ಸಾವನ್ನಪ್ಪಿದರು. ಇದರಿಂದ ಖಿನ್ನರಾದ ಮಹಾತ್ಮಾಜಿ ಆಂದೋಲನವನ್ನು ಹಿಂತೆಗೆದುಕೊಂಡರು. ಅನೇಕ ಮುಖಂಡರಿಗೆ ಗಾಂಧೀಜಿಯ ಈ ಕ್ರಮ ಸರಿಯೆನಿಸಲಿಲ್ಲ. ಈ ಕುರಿತು ಅವರೊಂದಿಗೆ ಭಿನ್ನಾಭಿಪ್ರಾಯವಿದ್ದ ಮುಖಂಡರು ಆ ಕ್ರಮವನ್ನು ಒಂದು ಅವಮಾನಕರ, 'ಕಲಂಕಿತ ಹಿನ್ನಡೆ' ಯೆಂದು ಬಣ್ಣಿಸಿದರು. ಆದರೆ ರಾಜೇಂದ್ರ ಪ್ರಸಾದರು, ಇನ್ನೂ ಕೆಲವೇ ಕೆಲವು ಜನ ಗಾಂಧೀಜಿಯ ಸಹವರ್ತಿಗಳೊಂದಿಗೆ, ಈ ಕ್ರಮವನ್ನು ಎತ್ತಿ ಹಿಡಿದರು. ಗಾಂಧೀಜಿಯ ನಿರ್ಧಾರದ ಬಗ್ಗೆ ಸಂಪೂರ್ಣ ಸಹಮತಿ ತೋರಿದರು. 'ದೇಶ ಅಹಿಂಸಾತ್ಮಕ ಅಸಹಕಾರ ಅಂದೋಲನಕ್ಕೆ ಇನ್ನು ಪಕ್ವಗೊಂಡಿಲ್ಲ' ಎಂದ ಗಾಂಧೀಜಿಯ ನಿಲುವಿಗೆ ಅವರು ಸಂಪೂರ್ಣ ಒಪ್ಪಿಗೆ ಸೂಚಿಸಿದರು. ಬಹುಶಃ ಆ ಕಾರಣಕ್ಕಾಗಿಯೇ ಮಹಾತ್ಮಾಜಿ ರಾಜೀವ್ ಬಾಬು ಅವರಲ್ಲಿ ತಮ್ಮ ಪ್ರತಿಬಿಂಬವನ್ನೇ ಕಾಣತೊಡಗಿದರು. ಅವರನ್ನು ತಮ್ಮ ವಿಶ್ವಾಸಕ್ಕೆ ತೆಗೆದುಕೊಂಡು ಹೆಚ್ಚು ಹೆಚ್ಚಿನ ವಿಧಾಯಕ ಕಾರ್ಯಗಳ ಜವಾಬ್ದಾರಿಯನ್ನು ಹೊರಿಸತೊಡಗಿದರು. ವಿದ್ರೋಹದ ಆಪಾದನೆ ಹೊತ್ತು ಜೈಲಿಗೆ ಹೋಗುವ ಮುಂಚೆ ಗಾಂಧೀಜಿ, ರಾಜೇನ್ ಬಾಬು ಅವರನ್ನು ಕರೆದು ಜನತೆಯನ್ನು ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಿ ಸತ್ಯಾಗ್ರಹಕ್ಕೆ ಅವಶ್ಯವಿರುವ ಪೂರ್ವಭಾವಿ ಭೂಮಿಕೆಯನ್ನು ನಿರ್ಮಿಸಲು ಸಲಹೆ ನೀಡಿದರು. ನ್ಯಾಯಾಲಯದಲ್ಲಿ ಗಾಂಧೀಜಿಗೆ ಆರು ವರ್ಷ ಜೈಲು ಶಿಕ್ಷೆ ವಿಧಿಸಿ ನ್ಯಾಯಾಧೀಶರು ನೀಡಿದ ತೀರ್ಪಿನ ವಾಕ್ಯ ಕಿವಿಗೆ ಬಿದ್ದೊಡನೆಯೇ ರಾಜೇನ್ ಬಾಬು ಚಿಕ್ಕ ಮಗುವಿನಂತೆ ಬಿಕ್ಕಳಿಸುತ್ತ ನೆಲಕ್ಕೆ ಕುಸಿದರು. ಅವರು ಗಾಂಧೀಜಿಯೊಂದಿಗೆ ಸ್ಥಾಪಿಸಿಕೊಂಡಿದ್ದ ಭಾವನಾತ್ಮಕ ಸಂಬಂಧ ಹಾಗೂ ಮಮಕಾರದ ಪರಿಣಾಮ ಅದಾಗಿತ್ತು.

1923ರಲ್ಲಿ ರಾಜೇನ್ ಬಾಬು ನಾಗಪೂರ ಧ್ವಜಾ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ರಾಷ್ಟ್ರೀಯ ನಾಯಕರಿಂದ ಆಗಬಹುದಾಗಿದ್ದ ತೊಂದರೆಯನ್ನು ಮೊದಲೇ ನಿರೀಕ್ಷಿಸಿದ್ದ ಸರಕಾರ ಮುನ್ನೆಚ್ಚರಿಕೆಯ ಕ್ರಮವಾಗಿ ನಿಷೇಧಾಜ್ಞೆಯನ್ನು ಜಾರಿಗೊಳಿಸಿತ್ತು. ದಂಡನಾ ಕ್ರಮದ ಆದೇಶವನ್ನು ಪ್ರತಿಭಟಿಸಿ ಸತ್ಯಾಗ್ರಹಕ್ಕೆ ನೇತೃತ್ವ ನೀಡಿದ್ದಕ್ಕಾಗಿ ಸೇಠ ಜಮನಾಲಾಲ್ ಬಜಾಜ್ ಬಂಧನಕ್ಕೊಳಗಾದರು. ಆಗ ಹೋರಾಟದ ನೇತೃತ್ವದ ಭಾರ ಸರ್ದಾರ ವಲ್ಲಭ ಬಾಯಿ ಪಟೇಲರ ಹೆಗಲಿಗೆ ಬಂದಿತು. ಅವರ ಬಂಧನದ ಸಮಯವೂ ಸಮೀಪಿಸುತ್ತಿದ್ದಂತೆ ಸತ್ಯಾಗ್ರಹದ ಮುಖಂಡತ್ವವನ್ನು ರಾಜೇನ್ ಬಾಬು ವಹಿಸಬೇಕಾಗಿ ಬಂತು. ಇದೇ ಸಮಯದಲ್ಲಿ ರಾಜೇನ್ ಬಾಬು ಮತ್ತು ಸರ್ದಾರ್ ಪಟೇಲರ ನಡುವಿನ ಸಂಪರ್ಕ ಗಾಢಗೊಂಡು ಅದು ಆಜೀವ ಪರ್ಯಂತದ ಆತ್ಮೀಯ ಗೆಳೆತನಕ್ಕೆ ತಿರುಗಿತು. ಆ ಸ್ನೇಹಜೀವನದ ಅನೇಕ ಆಹ್ಲಾದಕರ ಸ್ಮೃತಿಗಳು ಮುಂದೆ ರಾಜೇನ್ ಬಾಬು ಅವರ ಬಾಳಿನ ಅಮೂಲ್ಯ ಬುತ್ತಿಯಾದವು.

ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡದ್ದಕ್ಕೆ ಬ್ರಿಟಿಷ್ ಸರಕಾರ 1930ರಲ್ಲಿ ರಾಜೇನ್ ಬಾಬು ಅವರನ್ನು ಬಂಧಿಸಿತು. ಆದರೆ ಶಿಕ್ಷೆ ಪೂರ್ತಿಯಾಗುವ ಮುಂಚೆಯೇ 1934ರಲ್ಲಿ ಅವರನ್ನು ಬಿಡುಗಡೆಗೊಳಿಸಿತು. ಯಾಕೆಂದರೆ, ಆಗ ಬಿಹಾರಿನಲ್ಲಿ ಸಂಭವಿಸಿದ ಭಯಾನಕ ಭೂಕಂಪದ ಸಂತ್ರಸ್ತರಿಗೆ ಪರಿಹಾರ ಕಾರ್ಯಕ್ರಮಗಳನ್ನು ಸಂಘಟಿಸಲು ರಾಜೇನ್ ಬಾಬು ಅವರ ಸಹಾಯ ಸರ್ಕಾರಕ್ಕೆ ತುರ್ತಾಗಿ ಬೇಕಾಗಿತ್ತು. ರಾಜೇನ್ ಬಾಬು ಅವರು ಎರಡನೆಯ ಧೀರ್ಘಾವಧಿಯ ಜೈಲು ಶಿಕ್ಷೆ ಅನುಭವಿಸಿದ್ದು 'ಭಾರತ ಬಿಟ್ಟು ತೊಲಗಿ' ಗೊತ್ತುವಳಿಯನ್ನು ಅಂಗೀಕರಿಸಿದಾಗ. 1942ರಲ್ಲಿ ಬಂಧಿಸಲ್ಪಟ್ಟ ಅವರು ಸುಮಾರು ಮೂರು ವರ್ಷಗಳವರೆಗೆ ಬಂಧನದಲ್ಲಿದ್ದು 1945ರಲ್ಲಿ ಬಿಡುಗಡೆ ಹೊಂದಿದರು.

## ಕಾಂಗ್ರೆಸ್‌ನ ಮುಂಚೂಣಿ ಮುಖಂಡ

ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನೊಂದಿಗೆ ರಾಜೇನ್ ಬಾಬು ಅವರಿಗೆ ಸಂಪರ್ಕ ಬಂದದ್ದು ಕಲ್ಕತ್ತೆಯಲ್ಲಿ ಅವರು ಪದವಿಗಾಗಿ ಓದುತ್ತಿದ್ದಾಗ. 1906ರ ಕಾಂಗ್ರೆಸ್ ಅಧಿವೇಶನ ಕಲ್ಕತ್ತೆಯಲ್ಲಿ ನಡೆದಾಗ ರಾಜೇನ್ ಬಾಬು ಸ್ವಯಂ ಸೇವಕರಾಗಿ ಕೆಲಸ ಮಾಡಿದ್ದರು. ಆ ಸಂದರ್ಭದಲ್ಲಿ ಅವರಿಗೆ ರಾಷ್ಟ್ರೀಯ ನಾಯಕರಾಗಿದ್ದ ಸರೋಜಿನಿ ನಾಯ್ಡು, ಪಂಡಿತ ಮದನ ಮೋಹನ ಮಾಳವೀಯ ಮತ್ತು ಮಹಮ್ಮದಲಿ ಜಿನ್ನಾರಂತಹ ಖ್ಯಾತ ವಾಗ್ಮಿಗಳ ಪ್ರಭಾವ ಪೂರ್ಣ, ರಾಷ್ಟ್ರಭಕ್ತಿ ಪ್ರಚೋದಕ ಭಾಷಣಗಳನ್ನು ಕೇಳುವ ಸದಾವಕಾಶ ದೊರಕಿತ್ತು.

ಅವರು ಸ್ವಾತಂತ್ರ್ಯ ಹೋರಾಟದ ಮುಂಚೂಣಿಯಲಿದ್ದ ಈ ರಾಷ್ಟ್ರೀಯ ಸಂಘಟನೆಯನ್ನು ಸೇರಿದ್ದು ಮಾತ್ರ ತಮ್ಮ ವ್ಯಾಸಂಗ ಪೂರ್ಣಗೊಂಡ ಮೇಲೆಯೇ. ಅದು 1911ರಲ್ಲಿ ಅವರು ತಮ್ಮ ಲಾಭದಾಯಕ ವಕೀಲಿ ವೃತ್ತಿಯನ್ನು ಅನುಸರಿಸುತ್ತಿದ್ದಾಗಲೂ ತಮ್ಮ ಅಮೂಲ್ಯ ಸಮಯವನ್ನು ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಚಟುವಟಿಕೆಗಳಿಗೆ ಮೀಸಲಿಡತೊಡಗಿದರು. ಅವರು ಗಾಂಧೀಜಿಯ ಸಂಪರ್ಕಕ್ಕೆ ಬಂದದ್ದು 1916ರಲ್ಲಿ. ಆಗ ದಕ್ಷಿಣ ಆಫ್ರಿಕೆಯಲ್ಲಿ ಸುಮಾರು ಎರಡು ದಶಕಗಳ ಕಾಲ ವಿವಿಧ ಚಟುವಟಿಕೆಗಳಲ್ಲಿ ಕಳೆದ ಗಾಂಧೀಜಿ ಭಾರತದಲ್ಲಿ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಮೊದಲ ಬಾರಿಗೆ ಭಾಗವಹಿಸಲು ಬಂದಿದ್ದರು.

1920ರ ನಾಗಪುರ ಅಧಿವೇಶನದಲ್ಲಿ ರಾಷ್ಟ್ರೀಯ ಕಾಂಗ್ರೆಸ್, 'ಸ್ವರಾಜ್' ತನ್ನ ಅಂತಿಮ ಗುರಿಯೆಂದು ಘೋಷಿಸಿತ್ತು. ಈ ಸಂದೇಶವನ್ನು, ಜೊತೆಗೆ ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳನ್ನು ದೇಶದ ಉದ್ದಗಲಕ್ಕೂ ಕೊಂಡೊಯ್ಯಲು ಪಕ್ಷಕ್ಕೆ ಅನೇಕ ಸಮರ್ಥ ಮತ್ತು ತ್ಯಾಗಶೀಲ ಕಾರ್ಯಕರ್ತರ ಆವಶ್ಯಕತೆಯಿತ್ತು. ರಾಜೇಂದ್ರ ಪ್ರಸಾದರು ಒಬ್ಬ ಸಮರ್ಪಿತ ಕಾರ್ಯಕರ್ತರಾಗಿ ಬಿಹಾರ ಪ್ರಾಂತದ ತುಂಬಾ ಅಡ್ಡಾಡಿದರು. ವಿಧಾಯಕ ಕಾರ್ಯಕ್ರಮಗಳ ಮೂಲಕ ಕಾಂಗ್ರೆಸ್‌ನ ಧ್ಯೇಯ ಧೋರಣೆಗಳನ್ನು, ಆದರ ಯೋಜನೆ ಕಾರ್ಯಕ್ರಮಗಳನ್ನು ಜನತೆಗೆ ವಿವರಿಸುತ್ತಾ ಅವರೊಂದಿಗೆ ವೈಯಕ್ತಿಕ ಸಂಬಂಧ ಸ್ಥಾಪಿಸಿದರು. ವಿದ್ಯಾರ್ಥಿ ದೆಸೆಯಲ್ಲಿ ಸಮ್ಮೇಳನಗಳನ್ನು ಸಂಘಟಿಸುವಲ್ಲಿ ದೊರೆತ ಅನುಭವ ಅವರಿಗೆ ಅನುಕೂಲಕರವಾಗಿ ಪರಿಣಮಿಸಿತು. ಆ ಅನುಭವದ ನೆಲೆಗಟ್ಟಿನ ಮೇಲೆಯೇ, ಅವರು ಕೈಗೆತ್ತಿಕೊಂಡ ಸಂಘಟನಾ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಿರ್ವಹಿಸತೊಡಗಿದರು. 1922ರ ಕಾಂಗ್ರೆಸ್ ಅಧಿವೇಶನ ಗಯಾದಲ್ಲಿ ನಡೆದಾಗ ಅಲ್ಲಿಗೆ ಬಂದಿದ್ದ ಸಾವಿರಾರು ಪ್ರತಿನಿಧಿಗಳಿಗೆ ಅವರು ಯೋಜಿಸಿ ಸಾಂಗಗೊಳಿಸಿದ ವ್ಯವಸ್ಥೆ ಅವರ ಸಂಘಟನಾ ಚಾತುರ್ಯಕ್ಕೆ ಸಾಕ್ಷಿಯಾಗಿತ್ತು. 1937ರಲ್ಲಿ ವಿವಿಧ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಸರಕಾರ ರಚಿಸಿದಾಗ ರಾಜೇನ್ ಬಾಬು ಸರ್ದಾರ ಪಟೇಲ್ ಮತ್ತು ಮೌಲಾನಾ ಆಜಾದ್‌ರಿಂದ ಕೂಡಿದ ಸಂಸದೀಯ ಮಂಡಳಿ ತುಂಬಾ ಸಾಮಥ್ಯವೂ ಪರಿಣಾಮಕಾರಿಯೂ ಆದ ಮಾರ್ಗದರ್ಶನ ನೀಡಿತು.

1911 ರಲ್ಲಿ ಭಾರತೀಯ ಕಾಂಗ್ರೆಸ್ ಸೇರಿದ ರಾಜೇನ್ ಬಾಬು ಈ ಸಂಘಟನೆಯಲ್ಲಿ ಹಂತಹಂತವಾಗಿ ಮೇಲೇರಿದರು. ಒಬ್ಬ ಸಾಮಾನ್ಯ ಕಾರ್ಯಕರ್ತನಾಗಿ ಪ್ರವೇಶಿಸಿದ ಅವರು ನಾಲ್ಕು ದಶಕಗಳಿಗೂ ಹೆಚ್ಚಿನ ಕಾಲ ಆ ಸಂಸ್ಥೆಯ ವಿವಿಧ ಸ್ಥಾನ, ಹುದ್ದೆಗಳಲ್ಲಿ ಸೇವೆ ಸಲ್ಲಿಸಿದರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸು ಅವರ ಪಾಲಿಗೆ ಜನಸೇವೆಗೆ, ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಮಹತ್ಕಾರಣಕ್ಕೆ, ಒಂದು ಸಬಲ ಸಾಧನವಾಗಿತ್ತು. ಆರಂಭದಲ್ಲಿ ಕಾಂಗ್ರೆಸ್‌ನ ಒಬ್ಬ ಸಾಮಾನ್ಯ ಕಾರ್ಯಕರ್ತರಾಗಿದ್ದ ಅವರು ಕ್ರಮೇಣ ಮೇಲೇರುತ್ತ ಒಮ್ಮೆ ಅಲ್ಲ, ಮೂರು ಸಲ ಕಾಂಗ್ರೆಸ್‌ನ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದರು. ಇದೇ ಬಿಹಾರ ಭೂಕಂಪದಿಂದ ನರಳುತ್ತಿದ್ದಾಗ ಪರಿಹಾರ ಕಾರ್ಯಗಳನ್ನು ಕೈಗೊಂಡು ಅವುಗಳನ್ನು ನಿರ್ವಹಿಸುವಲ್ಲಿ ತೋರಿದ ಸಾಮರ್ಥ್ಯ ಹಾಗೂ ಜಾಣ್ಮೆಗೆ ಮನ್ನಣೆಯೇನೋ ಎಂಬಂತೆ ಅವರು 1935ರಲ್ಲಿ ಕಾಂಗ್ರೆಸ್‌ನ ಅಧ್ಯಕ್ಷರಾಗಿ ಚುನಾಯಿತರಾದರು. ಆಮೇಲೆ 1939ರಲ್ಲಿ, ಸುಭಾಶ್ಚಂದ್ರ ಭೋಸ್ ರಾಜೀನಾಮೆ ನೀಡಿದಾಗ ಆ ಸ್ಥಾನವನ್ನು ಅವರು ಮತ್ತೊಮ್ಮೆ ಅಲಂಕರಿಸಿದರು. ರಾಜೇನ್ ಬಾಬು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಚುನಾಯಿತರಾದದ್ದೂ 1947ರಲ್ಲಿ. ಆಚಾರ್ಯ ಜೆ.ಬಿ. ಕೃಪಾಲಾನಿಯವರು ರಾಜೀನಾಮೆ ಕೊಟ್ಟಿದ್ದರ ಪರಿಣಾಮವಾಗಿ ಆ ಸ್ಥಾನದ ಜವಾಬ್ದಾರಿ ನಿರ್ವಹಿಸುವ ಹೊರೆ ರಾಜೇನ್ ಬಾಬು ಅವರ ಮೇಲೆ ಬಿದ್ದಿತು. ಆ ಹೊತ್ತಿಗಾಗಲೇ ಅವರು ಮಧ್ಯಂತರ ಸರಕಾರದಲ್ಲಿ ಆಹಾರ ಮತ್ತು ಕೃಷಿ ಸಚಿವರಾಗಿ ಸೇವೆ ಸಲ್ಲಿಸುತ್ತಿದ್ದರು. ಜೊತೆಗೆ ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು.

## ಗಣ್ಯ ಲೇಖಕ

ರಾಜೇಂದ್ರ ಪ್ರಸಾದರು ತಮ್ಮದೇ ಆದ ರೀತಿಯಲ್ಲಿ ವಿಶಿಷ್ಟ ಲೇಖಕರಾಗಿದ್ದರು. ಅವರ ಮಾತೃ ಭಾಷೆಯಾಗಿದ್ದ ಹಿಂದೀ ಅಷ್ಟೇ ಅಲ್ಲದೆ, ಸಂಸ್ಕೃತ, ಉರ್ದು, ಪರ್ಶಿಯನ್ ಮತ್ತು ಇಂಗ್ಲೀಷ್ ಭಾಷೆಗಳ ಮೇಲೆ ಅವರಿಗೆ ಸಾಕಷ್ಟು ಪ್ರಭುತ್ವವಿತ್ತು. ಅವರು ಪ್ರಾಚೀನ ಭಾರತದ ಪರಂಪರೆಯೊಂದಿಗೆ ಮಧ್ಯಕಾಲೀನ ಹಾಗೂ ಆಧುನಿಕ ಪರಂಪರೆಗಳನ್ನು ಸುಸಂಬದ್ಧವಾಗಿ ಮೇಳೈಸಿಕೊಂಡಿದ್ದರು. ಸಾಹಿತ್ಯಿಕ ಅರ್ಥದಲ್ಲಿ ಈ ಮೂರು ಪರಂಪರೆಗಳು ಅವರಲ್ಲಿ ಸಂಗಮಿಸಿದ್ದವು. ತಮ್ಮ ಪ್ರಭಾವಪೂರ್ಣ ಲೇಖನ, ಸಾಹಿತ್ಯ ಮತ್ತು ಪತ್ರಿಕೆಗಳ ಮೂಲಕ ಅವರು ಜನಾಭಿಪ್ರಾಯವನ್ನು ತಿದ್ದುವಲ್ಲಿ, ಪ್ರಭಾವಿಸುವಲ್ಲಿ ಸಾಕಷ್ಟು ಯಶಸ್ವಿಯಾಗಿದ್ದರು. ಕೆಲವು ಪತ್ರಿಕೆಗಳಿಗೆ ಸಂಪಾದಕರಾಗಿ ಸೇವೆ ಸಲ್ಲಿಸುವುದರ ಜೊತೆಗೆ ಅವರು ಇಂಗ್ಲೀಷ್ ಮತ್ತು ಹಿಂದಿಯಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. 1920ರ ದಶಕದ ಆರಂಭದಲ್ಲಿಯೇ ಹಿಂದೀ ಸಾಪ್ತಾಹಿಕ 'ದೇಶ' ಹಾಗೂ ಇಂಗ್ಲೀಷ್ ದ್ವೈ ಸಾಪ್ತಾಹಿಕ 'ಸರ್ಚಲೈಟ್' ಪತ್ರಿಕೆಗಳ ಸಂಪಾದಕತ್ವವನ್ನು ವಹಿಸಿಕೊಂಡಿದ್ದರು. ಅವರಿಗೆ ಬಹಳಷ್ಟು ಹೆಸರು ತಂದ 'ಹಿಸ್ಟರಿ ಆಫ್ ಚಂಪಾರಣ ಸತ್ಯಾಗ್ರಹ' 1917ರಲ್ಲಿ ಪ್ರಕಟವಾದರೆ, ಅಷ್ಟೇ ಖ್ಯಾತಿಯ ಇನ್ನೊಂದು ಗ್ರಂಥ 'ಇಂಡಿಯಾ ಡಿವೈಡೆಡ್' 1940ರಲ್ಲಿ ಬೆಳಕು ಕಂಡಿತು. ಅವರ ಆತ್ಮ ಚರಿತ್ರೆಯಾದ 'ಆತ್ಮಕಥಾ' ಹಿಂದೀಯಲ್ಲಿ 1946ರಲ್ಲಿ ಹಾಗೂ ಇಂಗ್ಲೀಷಿನಲ್ಲಿ 1957ರಲ್ಲಿ ಪ್ರಕಟವಾಯಿತು. ಭಾರತದ ಸ್ವಾತಂತ್ರ್ಯ ಹೋರಾಟವನ್ನು ವರ್ಣಿಸುವ ಈ ಆತ್ಮಕಥೆ ಒಂದು ಅಮೂಲ್ಯ ದಾಖಲೆಯೆಂದು ಪರಿಗಣಿಸಲಾಗಿದೆ. ಅವರ ಮಾರ್ಗದರ್ಶಕ ಗುರುವಾಗಿದ್ದ ಗಾಂಧೀಜಿಯ ತತ್ವ ಮತ್ತು ಬೋಧನೆಗಳನ್ನೊಳಗೊಂಡ ಇನ್ನೊಂದು ಗ್ರಂಥ "At the feet of Mahatma Gandhi", ಪ್ರಕಟವಾದದ್ದು 1955 ರಲ್ಲಿ .

## ಸಮ್ಯಕ್ ದೃಷ್ಟಿಯ ಸಂಧಾನಕಾರ.

ಯಾವುದೇ ಮಾತುಕತೆಯ ಮೂಲಕ ಚೌಕಾಶಿ ಮಾಡುವ, ಸಂಧಾನ ನಡೆಸುವ ಸಂದರ್ಭದಲ್ಲೆಲ್ಲಾ ಅದರ ಜವಾಬ್ದಾರಿಯನ್ನು ರಾಜೇಂದ್ರ ಪ್ರಸಾದರು ಬಹು ಪರಿಣಾಮಕಾರಿಯಾಗಿ ನಿರ್ವಹಿಸಿದ್ದಾರೆ; ತಮ್ಮ ಚಾತುರ್ಯ ಪರಿಣಿತಿಯನ್ನು ಮೆರೆದಿದ್ದಾರೆ. ಭಾರತ ವಿಭಜನೆಯ ಸಮಯದಲ್ಲಿ ಲಾರ್ಡ್ ಮೌಂಟ್ ಬ್ಯಾಟನ್ನರ ಅಧ್ಯಕ್ಷತೆಯಲ್ಲಿ ವಿಭಜನಾ ಪರಿಷತ್ತು ರಚಿಸಲ್ಪಟ್ಟಾಗ ರಾಜೇಂದ್ರ ಪ್ರಸಾದರು ತಮ್ಮ ಆಪ್ತ ಸಹಚರರಾಗಿದ್ದ ಸರದಾರ ಪಟೇಲರೊಂದಿಗೆ ವಿಭಜನಾ ಪರಿಷತ್ತಿನಲ್ಲಿ ತುಂಬ ಸಮರ್ಥವಾಗಿ ಸೇವೆ ಸಲ್ಲಿಸಿದರು. ಅವರಿಗೆ ಪ್ರತಿಯಾಗಿ ಇನ್ನೊಂದಡೆ ಮಹಮ್ಮದಲಿ ಜಿನ್ನಾ ಮತ್ತು ಲಿಯಾಖತ್ ಅಲಿಖಾನ್ ಆ ಪರಿಷತ್ತಿನ ಸದಸ್ಯರಾಗಿದ್ದರು. ಭಾರತ ವಿಭಜನೆಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಡಾ|| ರಾಜೇಂದ್ರ ಪ್ರಸಾದರಿಗಿದ್ದ ಆಳವಾದ ಅರಿವು, ಕಾಯ್ದೆಗಳ ಒಳ ಹೊರಗುಗಳನ್ನರಿತ ನಿಶಿತ ಮತಿ, ಜಾಗೃತ ಬುದ್ಧಿ ಮತ್ತು ಅದನ್ನು ಸರಿದೂಗಿಸುವ ಸಭ್ಯತೆ ಇತ್ಯಾದಿ ಗುಣಗಳಿಂದಾಗಿ ಅವರು ಭಾರತದ ಪರವಾಗಿ ಒಬ್ಬ ಸಮ್ಯಕ್ ದೃಷ್ಟಿಯ ಸಂಧಾನಕಾರ ಎಂಬುದನ್ನು ಸಾಬೀತುಗೊಳಿಸಿದರು. ಮುಖ್ಯವಾಗಿ ಅವರ ಸ್ಫಟಿಕ ಸ್ಪಷ್ಟ ಗ್ರಹಿಕೆ, ದೂರದೃಷ್ಟಿ ಮತ್ತು ವ್ಯವಹಾರ ಜಾಣ್ಮೆಯಿಂದಾಗಿಯೇ ಅವರು ಭಾರತದ ಪರವಾಗಿ ಚೌಕಾಶಿ ನಡೆಸಲು ಮತ್ತು ಇಡೀ ಸಮಸ್ಯೆಯನ್ನು ನ್ಯಾಯಯುತವಾಗಿ ಬಗೆಹರಿಸಿಕೊಳ್ಳಲು ಸಾಧ್ಯವಾಯಿತು.

ಕೇಂದ್ರದ ಸೇವೆ, ಹಣಕಾಸು, ಆರ್ಥಿಕ ಸಂಬಂಧಗಳು, ಸಶಸ್ತ್ರ ಪಡೆ ಮುಂತಾದವುಗಳ ಕುರಿತ ಸಮಸ್ಯೆಯನ್ನು ಲೀಲಾಜಾಲವಾಗಿ ಬಗೆಹರಿಸಿದ್ದಷ್ಟೇ ಅಲ್ಲ, ಆ ಯಾವ ಸಂದರ್ಭದಲ್ಲಿಯೂ ಭಾರತಕ್ಕೆ ಅನ್ಯಾಯವಾಗದಂತೆ ಎಚ್ಚರ ವಹಿಸಿದ್ದು ಅವರ ಸಂಧಾನದ ಕೌಶಲ್ಯಕ್ಕೆ ನಿದರ್ಶನವಾಗಿತ್ತು.

## ಮಾನವತೆಯ ಮೂರ್ತಿ

ರಾಜೇನ್ ಬಾಬು ತಮ್ಮ ಬದುಕಿನ ಬಹು ಮೂಲ್ಯವಾದ ಭಾಗವನ್ನು ಸ್ವಾತಂತ್ರ್ಯ ಹೋರಾಟಕ್ಕೆ ಮೀಸಲಿಟ್ಟಂತೆಯೇ ದೀನ ದಲಿತರ ಕಲ್ಯಾಣಕ್ಕಾಗಿ ತಮ್ಮ ಬದುಕನ್ನು ಸವೆಸಿದರು. ಸದಾ ಬಡವರ ಬಗ್ಗೆ ಕಷ್ಟ ಕೋಟಲೆಗಳಲ್ಲಿ ಸಿಕ್ಕು ನರಳುತ್ತಿದ್ದವರ ಬಗ್ಗೆ ಅವರ ಮನಸ್ಸು ಮಿಡಿಯುತ್ತಿತ್ತು. ಬಡ ಜನತೆಯ ಸೇವೆ ಅವರ ಹೃದಯಕ್ಕೆ ಅತ್ಯಂತ ಹತ್ತಿರವಾದ ಚಟುವಟಿಕೆಯಾಗಿತ್ತು. ಅವರು ಮಾನವತೆಯ ಮೂರ್ತರೂಪವಾಗಿದ್ದರು. ದೀನ ದಲಿತರ ಜೊತೆಗೆ ತಮ್ಮನ್ನು ತಾವು ಸಂಪೂರ್ಣವಾಗಿ ಗುರುತಿಸಿಕೊಳ್ಳುತ್ತಿದ್ದರು. ಅವರ ಮೇಲ್ಮೆಗಾಗಿ ಸದಾ ಸಮರ್ಪಣಾ ಭಾವದಿಂದ ಶ್ರಮಿಸುತ್ತಿದ್ದರು. ಪರಿಣಾಮವಾಗಿ, ದೇಶದ ಕೋಟ್ಯಾಂತರ ಜನರ ಹೃದಯ ಮಂದಿರದಲ್ಲಿ ಅವರು ಸ್ಥಾಪಿತಗೊಂಡಿದ್ದರು. ಶಹಾಬಾದ ಜಿಲ್ಲೆಯಲ್ಲಿ ನೆರೆಹಾವಳಿ ಸಂತ್ರಸ್ತರ ಪರಿಹಾರ ಕಾರ್ಯದಲ್ಲಿ ತೊಡಗ್ಗಿ ಅವರು ಕೈಗೊಂಡ ಸಮಾಜಕಾರ್ಯ ಅವರಿಗೆ ತುಂಬಾ ಜನಪ್ರಿಯತೆಯನ್ನು ತಂದುಕೊಟ್ಟಿತು. ಪಾಟ್ನಾ ಮುನಿಸಿಪಲ್ ಕಾರ್ಪೋರೇಷನ್ನಿನ ಅಧ್ಯಕ್ಷರಾಗಿ ಅವರು ಅನೇಕ ಜನಸೌಲಭ್ಯದ ಕಾರ್ಯಕ್ರಮಗಳನ್ನು ಆರಂಭಿಸಲು ಯೋಜನೆ ಹಾಕಿಕೊಂಡಿದ್ದರು. ಆದರೆ ಹಣಕಾಸಿನ ಅಭಾವದಿಂದ ಆ ಯೋಜನೆಗಳನ್ನು ಕಾರ್ಯಗತ ಮಾಡಲು ಸಾಧ್ಯವಾಗಲಿಲ್ಲ. ಮೇಲಾಗಿ, ತಮ್ಮ ಯೋಜನೆಯನ್ನು ಕಾರ್ಯಗತಗೊಳಿಸಲು ಅವಶ್ಯವಿದ್ದ ಹಣದ ಸಂಗ್ರಹಣೆಗಾಗಿ ಹೊಸ ತೆರಿಗೆಗಳನ್ನು ವಿಧಿಸುವುದಕ್ಕೆ ಸಾಕಷ್ಟು ವಿರೋಧ ಕಂಡುಬಂದಿದ್ದರಿಂದ ನಿರುಪಾಯರಾಗಿ ತಮ್ಮ ಯೋಜನೆಗಳನ್ನು ಕೈಬಿಡಬೇಕಾಯಿತು. ತತ್ಪರಿಣಾಮವಾಗಿ ಅವರು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಬೇಕಾಯಿತು.

1930ರಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಕ್ಕಾಗಿ ದೀರ್ಘವಾಗಿ ಜೈಲು ಶಿಕ್ಷೆಗೆ ಒಳಗಾದಾಗ ಬಿಹಾರದಲ್ಲಿ ಭಯಂಕರವಾದ ಭೂಕಂಪ ಸಂಭವಿಸಿತು. ಸಾವಿರಾರು ಜನ ಸಾವಿಗೀಡಾದರು. ಮಿಲಿಯಾಂತರ ಜನ ಮನೆ ಮಾರು ಕಳೆದುಕೊಂಡರು. ನಿಸ್ವಾರ್ಥ ಹಾಗೂ ಸಮರ್ಪಣಾ ಭಾವದ ಸಾಮಾಜಿಕ ಕಾರ್ಯಕರ್ತರೆಂದು ಆಗಲೇ ಸಾಕಷ್ಟು ಹೆಸರು ಮಾಡಿದ್ದುದನ್ನು ಮನಗೊಂಡ ಬ್ರಿಟಿಷ್ ಸರಕಾರ ಆ ಸಂದರ್ಭದಲ್ಲಿ ರಾಜೇನ್ ಬಾಬು ಅವರ ಸಹಾಯ ಪಡೆಯುವ ಉದ್ದೇಶದಿಂದ ಅವರನ್ನು ಬಿಡುಗಡೆಗೊಳಿಸಿತು. ಪ್ರಳಯಾಂತಕ ಭೂಕಂಪಕ್ಕೆ ಬಲಿಯಾಗಿದ್ದ ನತದೃಷ್ಟರಿಗೆ ಕಿಂಚಿತ್ತಾದರೂ ಪರಿಹಾರ ದೊರಕಿಸಿಕೊಡುವ ಉದ್ದೇಶದಿಂದ 'ಭೂಕಂಪ ಪರಿಹಾರ ಸಮಿತಿ' ಯೊಂದನ್ನು ರಚಿಸಲಾಗಿತ್ತು. ಸಾಮಾಜಿಕ ಕಾರ್ಯದಲ್ಲಿ ತುಂಬಾ ಅನುಭವ ಗಳಿಸಿದ್ದ ರಾಜೇನ್ ಬಾಬು ಆ ಸಮಿತಿಯ ನೇತೃತ್ವ ವಹಿಸಬೇಕೆಂಬುದು ಸರಕಾರದ ಬಯಕೆಯಾಗಿತ್ತು. ಜೈಲಿನಿಂದ ಬಿಡುಗಡೆಯಾದೊಡನೆಯೇ ರಾಜೇನ್ ಬಾಬು ಪರಿಹಾರ ಕಾರ್ಯಕ್ರಮಗಳನ್ನು ಯುದ್ಧೋಪಾದಿಯಲ್ಲಿ ಯೋಜಿಸಿ ನಿರ್ವಹಿಸತೊಡಗಿದರು. ಆ ದುರ್ಭರ ಪರಿಸ್ಥಿತಿಯಲ್ಲಿ ತಮ್ಮ ಹೆಗಲಿಗೆ ಬಂದ ಜವಾಬ್ದಾರಿಯನ್ನು

ಪರಿಣಾಮವಾಗಿ ಬಹಳ ಕಡಿಮೆ ಸಮಯದಲ್ಲಿಯೇ ರೂ. 38 ಲಕ್ಷ ದಷ್ಟು ಬೃಹತ್ ಮೊತ್ತದ ಹಣವನ್ನು ಸಂಗ್ರಹಿಸಲು ಸಾಧ್ಯವಾಯಿತೆಂಬುದು ಯಾರೂ ಸೋಜಿಗಪಡಬೇಕಾದ ಸಂಗತಿ. ಇದಕ್ಕೆ ಪ್ರತಿಯಾಗಿ, ಸ್ಥಾನ, ಮಾನ, ಅಧಿಕಾರ, ಅಂತಸ್ತು, ಜೊತೆಗೆ ಸಮೃದ್ಧ ಸಾಧನ ಸಂಪನ್ಮೂಲಗಳಿದ್ದರೂ ವೈಸ್ ರಾಯರು, ರಾಜೇನ್ ಬಾಬು ಸಂಗ್ರಹಿಸಿದ್ದರ 1/3 ಭಾಗದಷ್ಟು ನಿಧಿ ಮಾತ್ರ ಸಂಗ್ರಹಿಸಲು ಸಾಧ್ಯವಾಗಿತ್ತು. ಪರಿಹಾರ ಕಾರ್ಯಗಳನ್ನು ಸಂಘಟಿಸುವಲ್ಲಿ ರಾಜೇನ್ ಬಾಬು ತೋರಿದ ಮುತುವರ್ಜಿ, ಪ್ರಾಮಾಣಿಕತೆ ಮತ್ತು ಮಾನವೀಯತೆಯನ್ನು ಇಡೀ ದೇಶ ಮೆಚ್ಚಿ ಕೊಂಡಾಡಿತು. ಬ್ರಿಟಿಷ್ ಸರಕಾರ ಕೂಡ ಅವರ ಈ ಕಾರ್ಯವನ್ನು ಮೆಚ್ಚಿ ಶ್ಲಾಘಿಸದಿರಲಾಗಲಿಲ್ಲ. ಒಂದು ವರ್ಷದ ನಂತರ ಕ್ವೇಟ್ಟಾದಲ್ಲಿ ಮತ್ತೊಂದು ಭೂಕಂಪ ಕಾಣಿಸಿಕೊಂಡಿತು. ಆಗಲೂ ಕೂಡ ರಾಜೇನ್ ಬಾಬು ಅವರಿಗೆ ಇದ್ದ ಪರಿಹಾರ ಸೇವೆಯ ಅನುಭವದ ಹಿನ್ನೆಲೆಯಿಂದಾಗಿ ಅವರನ್ನು 'ಕ್ವೇಟ್ಟಾ ಭೂಕಂಪ ಪರಿಹಾರ ಸಮಿತಿ'ಯ ಅಧ್ಯಕ್ಷರನ್ನಾಗಿ ಮಾಡಲಾಯಿತು. ರಾಜೇನ್ ಬಾಬು ಯಾವುದೇ ಕೆಲಸ ಕೈಗೊಳ್ಳಲಿ ಅದರಲ್ಲಿ ಅವರು ಸಂಪೂರ್ಣ ಸಮರ್ಪಣಾ ಭಾವದಿಂದ ತೊಡಗುತ್ತಿದ್ದರು. ಕೈಗೆತ್ತಿಕೊಂಡ ಕೆಲಸದ ಬಗ್ಗೆ ಪೂರ್ಣ ಕಾಳಜಿ, ಅದನ್ನು ನಿರ್ವಹಿಸುವ ಸಂದರ್ಭದಲ್ಲಿ ತೋರುತ್ತಿದ್ದ ನಿಸ್ವಾರ್ಥತೆ ರಾಜೇನ್ ಬಾಬು ಅವರ ಸಮಾಜ ಸೇವೆಯ ಪ್ರಮುಖ ಲಕ್ಷಣಗಳಾಗಿದ್ದವು. ಈ ಅರ್ಥದಲ್ಲಿ ಅವರೊಬ್ಬ ನಿಜವಾದ ಕರ್ಮಯೋಗಿಯಾಗಿದ್ದರು.

### ಸಮರ್ಥ ಸಚಿವ

1946ರ ಮಧ್ಯಂತರ ಸರಕಾರದಲ್ಲಿ ರಾಜೇನ್ ಬಾಬು ಆಹಾರ ಮತ್ತು ಕೃಷಿ ಮಂತ್ರಿಗಳಾದರು. ಪಂಡಿತ ಜವಾಹರ ಲಾಲ್ ನೆಹರೂ ಆ ಸರ್ಕಾರದ ಪ್ರಧಾನ ಮಂತ್ರಿಯಾಗಿದ್ದರು. ಗ್ರಾಮಾಂತರ ರೈತ ಕುಟುಂಬದ ಹಿನ್ನೆಲೆಯಿಂದ ಬಂದಿದ್ದ ರಾಜೇನ್ ಬಾಬು ಅವರಿಗೆ ಕೃಷಿ ಕ್ಷೇತ್ರದ ಇತಿಮಿತಿಗಳೆಲ್ಲಾ ಸಾಕಷ್ಟು ಗೊತ್ತಿದ್ದವು. ಮೇಲಾಗಿ, ಮೊದಲಿನಿಂದಲೂ ರೈತರ ಬಗ್ಗೆ ಅವರಿಗಿದ್ದ ಕಾಳಜಿ ಅವರ ಈಗಿನ ಜವಾಬ್ದಾರಿಗೆ ಹೆಚ್ಚಿನ ಗಾಂಭೀರ್ಯ ತಂದು ಕೊಟ್ಟಿತು. ಅನಾದಿ ಕಾಲದಿಂದಲೂ ಹಾಸು ಹೊಕ್ಕಾಗಿ ಬೆಳೆದಿದ್ದ ಗ್ರಾಮಾಂತರ ಬದುಕಿನ ಸಂಬಂಧ ಸಹಸಂಬಂಧಗಳ ನೇಯ್ಗೆಯನ್ನು ಭರದಿಂದ ಬೆಳೆಯುತ್ತಿದ್ದ ಔದ್ಯಮೀಕರಣ ಹಾಳು ಗೆಡವಿದೆಯೆಂಬುದು ಅವರಿಗೆ ಮನದಟ್ಟಾಗಿತ್ತು. ಗ್ರಾಮಾಂತರ ಬದುಕು ಪುನರ್ ಸಂಘಟನೆಗೊಳ್ಳಬೇಕಾದರೆ. ಆದಕ್ಕಾಗಿ ನಾವು ಕೈಗೊಳ್ಳುವ ಯಾವುದೇ ಹೊಸ ಪ್ರಯತ್ನವು ಗಾಂಧೀವಾದದ ಮೌಲ್ಯಗಳನ್ನು ಆಧರಿಸಿರಬೇಕೆಂಬುದು ಅವರ ನಂಬುಗೆಯಾಗಿತ್ತು. ಕೃಷಿ ಕ್ಷೇತ್ರದ ಗರಿಷ್ಠ ಅಭಿವೃದ್ಧಿಯ ಮೂಲಕ ಮಾತ್ರ ರೈತಾಪಿ ಜನತೆಯ ಬದುಕಿಗೆ ಹೊಸ ದಿಸೆ ದಿಕ್ಕನ್ನು ತೋರಿಸಲು ಸಾಧ್ಯ ಎಂಬುದು ಅವರ ದೃಢವಾದ ನಂಬುಗೆಯಾಗಿತ್ತು. ಆದ್ದರಿಂದಲೇ "ಹೆಚ್ಚು ಬೆಳೆಯಿರಿ" ಎಂಬ ಸಮೃದ್ಧ ಫಸಲಿನ ಆಶಯದ ಘೋಷಣೆಯನ್ನು ಅವರು ಕೊಟ್ಟರು. ಆಹಾರ ಮತ್ತು ಕೃಷಿ ಮಂತ್ರಾಲಯವು ಅವರ ಸಮರ್ಥ ಮತ್ತು ಕ್ರಿಯಾಶೀಲ ಮಾರ್ಗದರ್ಶನದಲ್ಲಿ ಹೇರಳ ಉತ್ಪಾದನೆಯೆಡೆಗಿನ ಆಂದೋಲನವನ್ನು ಪರಿಣಾಮಕಾರಿಯಾಗಿ ಜರುಗಿಸಿತು.

ರಾಜೇನ್ ಬಾಬು ಕೃಷಿ ಸಚಿವರ ಸ್ಥಾನವನ್ನು ವಹಿಸಿಕೊಂಡಾಗ ದೇಶದಲ್ಲಿ ಆಹಾರ ಅಭಾವದ ಭೀಕರ ಸ್ಥಿತಿ ತಾಂಡವವಾಡುತಿತ್ತು. ಬ್ರಿಟಿಷ್ ಸರ್ಕಾರದ ಆಹಾರ ನಿಯಂತ್ರಣ, ರೇಷನಿಂಗ್ ಮತ್ತು ಕಡ್ಡಾಯ ಆಹಾರ ಧಾನ್ಯಗಳ ಸಂಗ್ರಹಣೆಯ ನೀತಿಯಿಂದಾಗಿ ಆ ಭೀಕರತೆ ಇನ್ನೂ ಉಲ್ಬಣಗೊಂಡಿತ್ತು. ಆರಂಭದಲ್ಲಿ ಈ ಆಹಾರ ನಿಯಂತ್ರಣವನ್ನು ವಿರೋಧಿಸುತ್ತಿದ್ದ ಕಾಂಗ್ರೆಸ್ ಯುದ್ಧಾ ನಂತರ ಅನತಿ ಕಾಲದಲ್ಲೇ ತಾನು ಆಹಾರ ನಿಯಂತ್ರಣದ ಕ್ರಮಗಳನ್ನು ಅನಿವಾರ್ಯವಾಗಿ ಕೈಗೊಳ್ಳಬೇಕಾಯಿತು. ಕಡಿಮೆ ದರದಲ್ಲಿ ಆಹಾರ ಧಾನ್ಯಗಳನ್ನು ಸಂಗ್ರಹಿಸಿ ಬಡಬಗ್ಗರಿಗೆ ಅಗ್ಗದ ದರದಲ್ಲಿ ವಿತರಿಸುವ ಕ್ರಮ ಕೈಗೊಳ್ಳಬೇಕಾಯಿತು. ಆದರೆ ಗಾಂಧೀಜಿಯನ್ನೊಳಗೊಂಡಂತೆ ಕಾಂಗ್ರೆಸ್‌ನಲ್ಲಿಯೇ ಅನೇಕ ಜನರು ಸರ್ಕಾರದ ಈ ಕ್ರಮವನ್ನು ವಿರೋಧಿಸಿದರು. ಅಂತೂ ಕೊನೆಗೆ ಈ ಆಹಾರ ನಿಯಂತ್ರಣವನ್ನು ಸರ್ಕಾರ ಕೈ ಬಿಟ್ಟದ್ದು ರಾಜೇನ್ ಬಾಬು ಅವರಿಗೆ ಸಂತೋಷವನ್ನುಂಟುಮಾಡಿತು.

## ಸಂವಿಧಾನ ಸಭೆಯ ಅಧ್ಯಕ್ಷ

ಸ್ವತಂತ್ರ ಭಾರತಕ್ಕೊಂದು ಸಂವಿಧಾನ ರೂಪಿಸಲು 1946ರಲ್ಲಿ ಸಂವಿಧಾನ ಸಭೆಯನ್ನು ರಚಿಸಲಾಯಿತು. ಆ ಸಭೆಗೆ ಬಿಹಾರ ಪ್ರಾಂತದಿಂದ ಚುನಾಯಿತರಾಗಿದ್ದ ಡಾ॥ ರಾಜೇಂದ್ರ ಪ್ರಸಾದರನ್ನು ಅವಿರೋಧವಾಗಿ ಆ ಸಭೆಯ ಅಧ್ಯಕ್ಷರನ್ನಾಗಿ ಮಾಡಲಾಯಿತು. ಆ ಸಂದರ್ಭದಲ್ಲಿ ಅವರನ್ನು ಅಭಿನಂದಿಸಿ ಡಾ॥ ಎಸ್. ರಾಧಾಕೃಷ್ಣನ್ನರು ಹೇಳಿದ ಮಾತುಗಳು ಗಮನಾರ್ಹವಾಗಿವೆ:

> "ಡಾ॥ ರಾಜೇಂದ್ರ ಪ್ರಸಾದರಲ್ಲಿ ಸವಿನಯ ಸದ್ಭಾವ ಮೂರ್ತಿವೆತ್ತದ್ದನ್ನು ನಾವು ಕಾಣುತ್ತೇವೆ. ಅವರು ಶಿವ ಸಾಕಾರವಾಗಿದ್ದಾರೆ. ತಾಳ್ಮೆ ಧೈರ್ಯ ಅವರ ವ್ಯಕ್ತಿತ್ವದ ಎದ್ದು ಕಾಣುವ ಗುಣಗಳಾಗಿವೆ. ಅವರು ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿದ್ದಾರೆ. ರಾಜೇಂದ್ರ ಪ್ರಸಾದರು ಭಾರತದ ಕಾಂಗ್ರೆಸ್ಸಿನ ಸೇವಕರಾಗಿದ್ದಾರೆ. ಸಾಕಷ್ಟು ಸಂಕಟಗಳನ್ನು ಎದುರಿಸಿ ನೋವುಂಡ ಸೇವಕ ಅವರಾಗಿದ್ದಾರೆ. ನಮ್ಮ ದೇಶ ಪ್ರತಿನಿಧಿಸುವ ಮಹತ್ ಚೇತನದ ಸಾಕಾರ ರೂಪ ಅವರು, ಸಿಂಧೂ ಸಂಸ್ಕೃತಿಯ ಶಿವನ ಪ್ರತಿಮೆಯಿಂದ ಮೊದಲ್ಗೊಂಡು ಮಹಾತ್ಮಾ ಗಾಂಧೀಜಿ ಮತ್ತು ಡಾ॥ ರಾಜೇಂದ್ರ ಪ್ರಸಾದರ ಮೂಲಕ ಹರಿದು ಬಂದ ಪರಸ್ಪರ ಮೈತ್ರಿ, ಒಮ್ಮತ ಮತ್ತು ಸಾಮರಸ್ಯದ ಸದ್ಭಾವ ನಮ್ಮ ಪ್ರಯತ್ನಗಳಲ್ಲಿ ನಮಗೆ ಅಪೂರ್ವ ಪ್ರೋತ್ಸಾಹ ನೀಡಬಲ್ಲವೆಂಬ ನಂಬುಗೆ ನನಗಿದೆ"[1]

ಅದೇ ಸಂದರ್ಭದಲ್ಲಿ ಡಾ॥ ರಾಜೇಂದ್ರ ಪ್ರಸಾದರಿಗೆ ಅಭಿನಂದಿಸುತ್ತಾ ಡಾ॥ ಸರೋಜಿನಿ ನಾಯ್ಡು ಹೇಳಿದ ಮಾತು ಇಂತಿವೆ:

> "ಡಾ॥ ರಾಜೇಂದ್ರ ಪ್ರಸಾದರು ಬುದ್ಧದ ಆಧ್ಯಾತ್ಮದ ಅಪರಾವತಾರವಾಗಿದ್ದಾರೆ. ಸಮರ್ಪಣೆ, ಸಹಾನುಭೂತಿ, ಅರಿವು ಮತ್ತು ಅಕ್ಕರೆಯ ಸಾಕಾರ ರೂಪವಾಗಿದ್ದಾರೆ. ಈ ಸದನದಲ್ಲಿ ಪ್ರತಿಯೊಬ್ಬರು ದೃಢ ನಂಬುಗೆಯಿಂದ ಹೇಳಿದ ಮಾತು: ಡಾ॥ ರಾಜೇಂದ್ರ ಪ್ರಸಾದರು ಈ ಸದನದ ಸಂರಕ್ಷಕರಾಗಿ ಅಷ್ಟೇ ಅಲ್ಲ ಪ್ರಿಯ ಪಿತಾಮಹರಾಗಿಯೂ

---

1. ಸಂವಿಧಾನ ಸಭೆಯ ಚರ್ಚೆ, ಸಂಪುಟ I, 11 ಡಿಸೆಂಬರ್, 1946, ಪು . 36

ನಡೆದುಕೊಳ್ಳುವರೆಂಬ ನಂಬುಗೆ ನಮಗಿದೆ. ಅವರು ನಿಸ್ಸಂಶಯವಾಗಿಯೂ ಈ ಸದನದ ಸಂರಕ್ಷಕರಾಗಿ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಬಲ್ಲರೆಂಬ ನಂಬುಗೆ ನನಗಿದೆ. ಆದರೆ, ಸಂರಕ್ಷಣೆಗಾಗಿ ಅವರು ಉರಿಯುವ ಖಡ್ಗವನ್ನು ಹಿಡಿಯಲಾರರು. ಬದಲಾಗಿ, ದೇವದೂತನಂತೆ ಕೈಯಲ್ಲಿ ಶಾಂತಿಯ ಪ್ರತೀಕವಾದ 'ಲಿಲ್ಲಿ' ಹಿಡಿದು ಎಲ್ಲರ ಹೃನ್ಮನಗಳನ್ನು ಗೆಲ್ಲಬಲ್ಲರು. ಯಾಕೆಂದರೆ, ಅಪಾರ ಮತ್ತು ಆಳವಾದ ಅನುಭವದ ಭಾಗವಾಗಿರುವ ಅವರ ಮನಸ್ಸಿನ ಮಾಧುರ್ಯವೇ ಅಂತಹದ್ದಾಗಿದೆ. ಸ್ಪಷ್ಟವಾದ ದೃಷ್ಟಿ, ಸೃಜನಶೀಲ ಪ್ರತಿಭೆ ಮತ್ತು ಸೃಷ್ಟಿಶೀಲ ಶ್ರದ್ಧೆ ಈ ಮೂರು ಪುಷ್ಪರಿಗೊಂಡು ಅವರನ್ನು ಬುದ್ಧನ ಪದತಲಕ್ಕೆ ಅತ್ಯಂತ ಹತ್ತಿರದಲ್ಲಿ ತಂದು ನಿಲ್ಲಿಸಿವೆ"[2]

ಮೂರು ವರ್ಷಗಳಷ್ಟು ದೀರ್ಘ ಅವಧಿಯವರೆಗೆ ನಡೆದ ಸಂವಿಧಾನ ಸಭೆಯ ಚರ್ಚೆ, ಜಿಜ್ಞಾಸೆಗಳಿಗೆ ಅವರು ನೀಡಿದ ನೇತೃತ್ವ ಅವರ ಉದಾತ್ತ ಗುಣಗಳನ್ನು ಎತ್ತಿ ತೋರಿಸುತ್ತವೆ. ಈ ಅವಧಿಯಲ್ಲಿಯ ಎಲ್ಲಾ ನಡವಳಿಕೆಗಳನ್ನು ನಿಯಂತ್ರಿಸುವಲ್ಲಿ, ಅವುಗಳಿಗೆ ಸೂಕ್ತ ಮಾರ್ಗದರ್ಶನ ನೀಡುವಲ್ಲಿ ಅವರು ತೋರಿದ ದೃಢತೆ, ಅಪಾರ ಸಹನೆ, ತೀಕ್ಷ್ಣ ಬುದ್ಧಿಮತ್ತೆ, ವಿಪುಲ ಔದಾರ್ಯ ಮುಂತಾದವು ಅವರ ಅನುಪಮ ವ್ಯಕ್ತಿತ್ವಕ್ಕೆ ಭಾಷ್ಯ ಬರೆಯುತ್ತವೆ. ಸದನದ ಎಲ್ಲ ಸದಸ್ಯರಿಗೂ ಅವರು ಸಮಾನ ಅವಕಾಶ ಕಲ್ಪಿಸಿಕೊಡುತ್ತಿದ್ದರು. ಅವರ ಮುಂದಿದ್ದ ಯಾವುದೇ ವಿಷಯದ ಬಗ್ಗೆ ಎಲ್ಲ ಸದಸ್ಯರು ಮುಕ್ತವಾಗಿ ಮತ್ತು ನಿರ್ಭೀತವಾಗಿ ತಮ್ಮ ಅಭಿಪ್ರಾಯವನ್ನು ಮಂಡಿಸಲು, ಆ ಮೂಲಕ ಚರ್ಚೆ ಜಿಜ್ಞಾಸೆ ನಡೆಸಲು ಅವಕಾಶ ಮಾಡಿಕೊಡುತ್ತಿದ್ದರು. ಆ ಎಲ್ಲಾ ಸಂದರ್ಭಗಳಲ್ಲಿ ತಮ್ಮ ವ್ಯವಹಾರ ಕೌಶಲ್ಯ, ವಸ್ತು ನಿಷ್ಠತೆ ಮತ್ತು ನಿಷ್‌ಪಕ್ಷಪಾತ ನಿಲುವಿನಿಂದಾಗಿ ಸದನದ ಎಲ್ಲರ ಮೆಚ್ಚುಗೆಯನ್ನು ಗಳಿಸಿದ್ದರು.

26, ನವೆಂಬರ್, 1949 ರಂದು ಸಂವಿಧಾನವನ್ನು ಅಂತಿಮವಾಗಿ ಸ್ವೀಕರಿಸುವ ಸಂದರ್ಭದಲ್ಲಿ ರಾಜೇನ್ ಬಾಬು ಸಂವಿಧಾನ ಸಭೆಯ ಅಧ್ಯಕ್ಷರಾಗಿ ಸಮಾರೋಪದ ಮಾತುಗಳನ್ನಾಡುತ್ತಾ ಅಂಥ ಮಹತ್ತರ ಜವಾಬ್ದಾರಿಯ ಕಾರ್ಯ ಭಾರವನ್ನು ಸುಸಂಬದ್ಧವಾಗಿ ನಿಭಾಯಿಸಿದ್ದಕ್ಕೆ ಸದನದ ಸದಸ್ಯರನ್ನು ಅಭಿನಂದಿಸಿದರು. ಪ್ರಪಂಚದಲ್ಲಿಯೇ ಬಹುದೊಡ್ಡದಾದ ಸಂವಿಧಾನವೊಂದನ್ನು ರಚಿಸುವಲ್ಲಿ ದೊರೆತ ಯಶಸ್ಸಿಗೆ ತಮ್ಮ ಹರ್ಷವನ್ನು ವ್ಯಕ್ತಮಾಡುತ್ತಾ ಆ ಸಂವಿಧಾನದ ಕಾರ್ಯ ಸಾಧುತ್ವದ ಬಗ್ಗೆ ಅವರಾಡಿದ ಮಾತುಗಳು ಹೀಗಿವೆ:

"ನಮ್ಮ ಸಂವಿಧಾನ ನಮಗೆ ಏನೆಲ್ಲಾ ಅವಕಾಶಗಳನ್ನು ಕಲ್ಪಿಸಿ ಕೊಡಬಹುದು, ಕೊಡದೆಯೂ ಇರಬಹುದು. ದೇಶದ ಕಲ್ಯಾಣ ಮಾತ್ರ ಇಲ್ಲಿ ನಡೆಸಲಾಗುವ ಆಡಳಿತದ ವೈಖರಿಯನ್ನು ಅವಲಂಭಿಸಿರುತ್ತದೆ. ದೇಶದ ಏಳ್ಗೆ ಇಲ್ಲಿ ಆಡಳಿತ ನಡೆಸುವವರ ಮೇಲೆ ಅವಲಂಬಿಸಿರುತ್ತದೆ. ಚುನಾಯಿತರಾಗುವ ಜನ ಸಮರ್ಥರಾಗಿದ್ದರೆ ಸತ್

2. ಸಂವಿಧಾನ ಸಭೆಯ ಚರ್ಚೆ, ಸಂಪುಟ I, 11 ಡಿಸೆಂಬರ್ 1946, ಪು. 47.

ಶೀಲವುಳ್ಳವರಾಗಿದ್ದರೆ, ಅಂತರಂಗ ಬಹಿರಂಗ ಶುದ್ಧಿವುಳ್ಳವರಾಗಿದ್ದರೆ, ಒಂದು ದೋಷಪೂರ್ಣವಾದ ಸಂವಿಧಾನದ ಮಿತಿಯನ್ನು ಮೀರಿಯೂ ಅತ್ಯುತ್ತಮವಾದ ವ್ಯವಸ್ಥೆಯೊಂದನ್ನು ನಿರ್ಮಿಸಬಲ್ಲರು. ಆದರೆ ಅವರಲ್ಲಿ ಈ ಯಾವ ಗುಣಗಳು ಇಲ್ಲದಿದ್ದಲ್ಲಿ ಮಾತ್ರ ಎಂಥ ಒಳ್ಳೆಯ ಸಂವಿಧಾನದಿಂದಲೂ ದೇಶಕ್ಕೆ ಏನೂ ಉಪಯೋಗವಾಗಲಾರದು"[3]

ರಾಜೇನ್ ಬಾಬು ಅವರ ಬದುಕಿನ ಅತ್ಯಂತ ಮಹತ್ವದ ಮತ್ತು ಸ್ಮರಣೀಯ ಘಟನೆಯೆಂದರೆ, ಅವರು ಸಂವಿಧಾನ ಸಭೆಯ ಅಧ್ಯಕ್ಷರಾಗಿ ಬ್ರಿಟಿಷ್ ಸರ್ಕಾರದಿಂದ ಭಾರತ ಸರ್ಕಾರಕ್ಕೆ ಅಧಿಕಾರವನ್ನು ಹಸ್ತಾಂತರ ಮಾಡಿಕೊಂಡದ್ದು.

## ಗಣತಂತ್ರದ ಗಣ್ಯ ಅಧ್ಯಕ್ಷ

24 ಜನವರಿ 1950 ರಲ್ಲಿ ಸಂವಿಧಾನ ಸಭೆಯ ಅಂತಿಮ ಅಧಿವೇಶನದ ಮುನ್ನಾದಿನ ರಾಜೇಂದ್ರ ಪ್ರಸಾದರು ಸ್ವತಂತ್ರ ಭಾರತದ ಹಂಗಾಮಿ ಅಧ್ಯಕ್ಷರಾಗಿ ಅವಿರೋಧವಾಗಿ ಸರ್ವಾನುಮತದಿಂದ ಚುನಾಯಿತರಾದರು. 26 ಜನವರಿ 1950 ರಂದು ಅವರು ಅಧ್ಯಕ್ಷರಾಗಿ ಪ್ರಮಾಣ ವಚನ ಸ್ವೀಕರಿಸಿದರು. ಸಂವಿಧಾನದ ರಚನಾ ಸಭೆಯ ಅಧ್ಯಕ್ಷರಾಗಿದ್ದ ವ್ಯಕ್ತಿಯೇ ಅದನ್ನು ಸಮರ್ಥಿಸುವ, ರಕ್ಷಿಸುವ, ಸಂರಕ್ಷಿಸುವ ಜವಾಬ್ದಾರಿಯನ್ನು ಹೊರಬೇಕಾಗಿ ಬಂದದ್ದು ನಿಜವಾಗಿಯೂ ಒಂದು ಅಪೂರ್ವ ಗೌರವದ ಅವಕಾಶವೆಂದೇ ಹೇಳಬೇಕು. 1952ರಲ್ಲಿ ವಯಸ್ಕ ಮತದಾನದ ಆಧಾರದ ಮೇಲೆ ಸಂವಿಧಾನ ಬದ್ಧವಾಗಿ ನಡೆದ ಸಾರ್ವತ್ರಿಕ ಚುನಾವಣೆಗಳ ನಂತರ ಅವರು ಭಾರತ ಗಣತಾಂತ್ರಿಕ ಪ್ರಜಾಪ್ರಭುತ್ವದ ಪ್ರಥಮ ಅಧ್ಯಕ್ಷರಾಗಿ ಚುನಾಯಿತರಾದರು. 1957ರಲ್ಲಿ ಮತ್ತೆ ಎರಡನೇ ಅವಧಿಗಾಗಿ ಪುನರ್ ಚುನಾಯಿತರಾದದ್ದೂ ಒಂದು ವಿಶೇಷ.

ಪ್ರಥಮ ಪ್ರಧಾನ ಮಂತ್ರಿಗಳಾಗಿದ್ದ ಪಂಡಿತ ಜವಾಹರಲಾಲ ಅವರೊಂದಿಗೆ ಕೂಡಿಕೊಂಡು ರಾಜೇನ್ ಬಾಬು ಅವರು ಅನೇಕ ರಾಜಕೀಯ ಸತ್‌ಸಂಪ್ರದಾಯಗಳನ್ನು ಸ್ಥಾಪಿಸಿದ್ದಾರೆ. ಅದರ ಫಲಶೃತಿಯಾಗಿ ದೇಶದ ಮುಖ್ಯಸ್ಥ ಮತ್ತು ಸರ್ಕಾರದ ಪ್ರಧಾನರ ಮಧ್ಯದಲ್ಲಿ ಆರೋಗ್ಯಕರ ರಾಜಕೀಯ ಸಂಬಂಧಗಳು ನೆಲೆಗೊಳ್ಳಲು ಸಾಧ್ಯವಾಯಿತು. ಡಾ|| ರಾಜೇಂದ್ರ ಪ್ರಸಾದರು ರಾಷ್ಟ್ರಾಧ್ಯಕ್ಷರಾಗಿ ಸವೆಸಿದ ದಾರಿ ಇಂದಿಗೂ ಮಾರ್ಗದರ್ಶಕವಾಗಿದೆ. ಅವರು ನಮ್ಮ ಸಂಸದೀಯ ಪ್ರಜಾಪ್ರಭುತ್ವಕ್ಕೆ ಹಾಕಿದ ಅಡಿಗಲ್ಲು ನಮ್ಮ ಗಣತಾಂತ್ರಿಕ ವ್ಯವಸ್ಥೆಯನ್ನು ಭದ್ರ ಬುನಾದಿಯ ಮೇಲೆ ನಿಲ್ಲಿಸಿದೆ; ಅದು ಈ ಭೂಮಿಯಲ್ಲಿ ಆಳವಾಗಿ ಬೇರು ಬಿಡುವಂತೆ ನೀರೆರೆದು ಪೋಷಿಸಿದೆ.

ಭಾರತದ ಅತ್ಯುನ್ನತ ಹುದ್ದೆಯನ್ನು ಅಲಂಕರಿಸಿದಾಗಲೂ ಆ ಹುದ್ದೆಯ ಸುತ್ತಮುತ್ತ ಇದ್ದ ಥಳಕು ಬೆಳಕಿನ ವೈಭವೋಪೇತ ಬದುಕಿಗೆ ಮಾರುಹೋಗದೆ, ರಾಷ್ಟ್ರಪತಿ ಭವನದ ಆಢ್ಯತೆ ಆಡಂಬರಕ್ಕೆ ಅಲುಗದೆ, ರಾಜೇನ್‌ಬಾಬು ಸದಾ ಸಾದಾ ಜೀವನವನ್ನು ನಡೆಸಿದರು. ಸರಳತೆ ಅವರ ಬದುಕಿನಲ್ಲಿ ಹೆಪ್ಪುಗಟ್ಟಿತ್ತು. ಅಂತೆಯೇ ಅವರು ಪ್ರತಿದಿನವೂ ಚರಕದಿಂದ ನೂಲುತ್ತಿದ್ದರು. ಅವರ ಅಂತರಂಗ ಬಹಿರಂಗದ ಪ್ರಾಂಜ್ವಲತೆ, ವಿನಯದಿಂದೊಡಗೂಡಿದ ಪರಿಶುದ್ಧತೆ,

3. ಅದೇ. ಪು. 993

ಮಾನವೀಯ ಪ್ರೀತಿ, ಅನುಕಂಪ ಮತ್ತು ಆಳವಾದ ದೃಷ್ಟಿ ಇವೆಲ್ಲವೂ ಒಗ್ಗೂಡಿ ಅವರಲ್ಲಿ ಮೇರು ಸದೃಶವಾದ ವ್ಯಕ್ತಿತ್ವವನ್ನು ರೂಪಿಸಿದ್ದವು. ಹಾಗಾಗಿ, ಅವರೊಬ್ಬ ಅಜಾತ ಶತ್ರುವೆಂಬುದು ಅವರ ವ್ಯಕ್ತಿತ್ವಕ್ಕೆ ಬಹು ಸಮಂಜಸವಾಗಿ ಒಪ್ಪುವ ಮಾತಾಗಿತ್ತು.

1962 ರಲ್ಲಿ ಅಂದರೆ ಹನ್ನೆರೆಡು ವರ್ಷಗಳ ನಂತರ ಅವರು ರಾಷ್ಟ್ರಾಧ್ಯಕ್ಷ ಸ್ಥಾನವನ್ನು ತ್ಯಜಿಸಿ, ತಮ್ಮ ಉಳಿದ ಬದುಕನ್ನು ಶಾಂತಿಯುತವಾದ ಪರಿಸರದಲ್ಲಿ ಕಳೆಯಲು ಪಾಟ್ನಾದಲ್ಲಿಯ ಸದಾಕತ್ ಆಶ್ರಮಕ್ಕೆ ತೆರಳಿದರು. 28 ಫೆಬ್ರವರಿ 1963 ಭಾರತೀಯರಿಗೆಲ್ಲ ಒಂದು ದುರ್ದಿನ. ಅಂದು, ಭಾರತ ಮಾತೆಯ ಮಹಾನ್ ಪುತ್ರರಾಗಿದ್ದ ರಾಜೇನ್ ಬಾಬು ನಮ್ಮನ್ನಗಲಿದರು. ಅವರು ತಮ್ಮ ಹಿಂದೆ ಬಿಟ್ಟು ಹೋದದ್ದು ಮಹಾನ್ ಆದರ್ಶ ಮತ್ತು ಉದಾತ್ತವಾದ ವಿಚಾರಗಳನ್ನು ಮಾತ್ರ. ಭಾರತೀಯರಾದ ನಮಗೆ ಅವು ಅಮೂಲ್ಯವಾದ ಆಸ್ತಿ. ಭಾರತ ಮಾತೆಯ ಉಜ್ವಲ ಪುತ್ರರಾಗಿದ್ದ ರಾಜೇನ್ ಬಾಬು ಅವರ ದೇಶ ಸೇವೆಯನ್ನು ಮನ್ನಿಸಿ ಅದೇ ವರ್ಷ ರಾಷ್ಟ್ರದ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ 'ಭಾರತ ರತ್ನ' ಬಿರುದಾಂಕಿತದಿಂದ ಅವರ ಹೆಸರನ್ನು ಅಲಂಕರಿಸಲಾಯಿತು.

## ಶ್ರದ್ಧಾಂಜಲಿ - ಶ್ಲಾಘನೆ

ಅವರು ದಿವಂಗತರಾದಾಗ ಸಂಸತ್ತು, ರಾಜ್ಯಗಳ ಶಾಸನ ಸಭೆಗಳು, ಪತ್ರಿಕಾ ಜಗತ್ತು, ಸಮಾಜದ ವಿಭಿನ್ನ ಮಟ್ಟದ ನೇತಾರರು ಮತ್ತು ಗಣ್ಯರಾದಿಯಾಗಿ ಇಡೀ ರಾಷ್ಟ್ರದಲ್ಲಷ್ಟೇ ಅಲ್ಲ ವಿದೇಶಗಳಲ್ಲಿಯೂ ಅಪಾರ ಶೋಕ ವ್ಯಕ್ತಪಡಿಸಲಾಯಿತು. ಅನೇಕ ದಶಕಗಳವರೆಗೆ ಭಾರತದಾದ್ಯಂತ ಅಡ್ಡಾಡುತ್ತ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಬಹು ಮಹತ್ವದ ಪಾತ್ರ ನಿರ್ವಹಿಸುತ್ತ ಬಂದಿದ್ದ ಬೃಹತ್ ಮಹತ್ತಿನ ಜೀವವೊಂದು ನಮ್ಮನ್ನಗಲಿದಾಗ ಅಮಿತ ದುಃಖ ಹೊರಹೊಮ್ಮಿತ್ತು. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದ ರಾಷ್ಟ್ರೀಯ ಬದುಕಲ್ಲಿ ಅವರು ನಿರ್ವಹಿಸಿದ ಪಾತ್ರ ಸಾಟಿಯಿಲ್ಲದ್ದು.

ಅವರ ತ್ಯಾಗಮಯ ಬದುಕು, ಭಾರತದ ಜನತೆಯ ಸೇವೆಗೆ ಸಂಪೂರ್ಣವಾಗಿ ಸಮರ್ಪಿಸಿಕೊಂಡಿದ್ದ ಅವರ ನಿಸ್ವಾರ್ಥ ಜೀವನವನ್ನು ಬಹು ಉಜ್ವಲವಾದ ಮಾತುಗಳಲ್ಲಿ ಪ್ರಶಂಸಿಸುತ್ತಾ ಆಗಿನ ಲೋಕಸಭೆಯ ಅಧ್ಯಕ್ಷರಾಗಿದ್ದ ಸರ್ದಾರ ಹುಕುಂ ಸಿಂಗ್ ಅವರು ಆಡಿದ ಮಾತುಗಳು ಇಂತಿವೆ:

> "ಒಬ್ಬ ಮಹಾನ್ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಹಾಗೂ ಕಟ್ಟಾ ದೇಶಭಕ್ತರಾಗಿದ್ದ ರಾಜೇಂದ್ರ ಪ್ರಸಾದರು ಸಂವಿಧಾನ ಸಭೆಯ ಅಧ್ಯಕ್ಷರಾಗಿ ಅದರ ಚರ್ಚೆ ನಡವಳಿಕೆಗಳನ್ನು ತುಂಬಾ ತಾಳ್ಮೆ ಮತ್ತು ಮುಂಗಾಣ್ಕೆಯಿಂದ ಮಾರ್ಗದರ್ಶನ ಮಾಡಿದ್ದರು. ಅತ್ಯಂತ ಕಠಿಣತಮ ಹಾಗೂ ವಿಧಾಯಕ ಘಟ್ಟದಲ್ಲಿದ್ದ ಭಾರತದ ಮೊದಲ ಅಧ್ಯಕ್ಷರಾಗಿ ಅವರು ಸಲ್ಲಿಸಿದ ಸೇವೆ ಅನುಪಮ. ವಿನಮ್ರತೆ ಮತ್ತು ಮಾನವೀಯತೆಯನ್ನು ರೂಢಿಸಿಕೊಂಡಿದ್ದ ಅವರು ಒಬ್ಬ ಪ್ರಬುದ್ಧ ಬುದ್ಧಿ ಜೀವಿಗಳೂ ಆಗಿದ್ದರು. ಬಡವರ, ದೀನ ದಲಿತರ ಮಧ್ಯ ದುಡಿಯುತ್ತಾ ಅವರ ಕಷ್ಟ ಕಾರ್ಪಣ್ಯಗಳನ್ನು ಸರಿಯಾಗಿ ಅರಿತಿದ್ದರು. ತುಂಬಾ ಸರಳ

ಮತ್ತು ತ್ಯಾಗದ ಜೀವನ ನಡೆಸಿದ್ದರೂ ರಾಷ್ಟ್ರಪತಿಯ ಹುದ್ದೆಯ ಘನತೆ ಗೌರವಗಳನ್ನು ಚಾಚೂ ತಪ್ಪದೆ ಕಾಪಾಡಿದ್ದರು. ರಾಷ್ಟ್ರದ ಸಂವಿಧಾನಿಕ ಮುಖಂಡನಿಗೆ ಸುಯೋಗ್ಯವಾಗದ ರೀತಿಯಲ್ಲಿ ನಡೆದುಕೊಳ್ಳುತ್ತಾ ಅವರು ಅನೇಕ ಸತ್ ಸಂಪ್ರದಾಯಗಳಿಗೆ ಬುನಾದಿ ಹಾಕಿದ್ದರು."[4]

ರಾಜ್ಯಸಭೆಯಲ್ಲಿ, ಅದರ ಅಧ್ಯಕ್ಷರಾಗಿದ್ದ ಡಾ|| ಎಸ್. ರಾಧಾಕೃಷ್ಣನ್ ಅವರು ರಾಜೇನ್ ಬಾಬು ಅವರ ಶ್ರೇಷ್ಠ ಗುಣಗಳನ್ನು ಕುರಿತು ಈ ಕೆಳಗಿನಂತೆ ಕೊಂಡಾಡಿದರು:

"ಅವರೊಬ್ಬ ಪರಿಪೂರ್ಣ ಮಾನವರಾಗಿದ್ದರು, ಭಾರತೀಯ ಬದುಕಿನಲ್ಲಿರುವ ಅತ್ಯುತ್ತಮವಾದುದ್ದರ ಸಾಕಾರವಾಗಿದ್ದರು. ಉತ್ತಮ ಭಾರತೀಯನ ಪ್ರತೀಕದಂತಿದ್ದರು ಎಂಬ ಮಾತುಗಳು ಉಳಿದೆಲ್ಲರಿಗಿಂತಲೂ ರಾಜೇನ್ ಬಾಬು ಅವರ ವಿಷಯದಲ್ಲಿ ಹೆಚ್ಚು ಸತ್ಯ. ಅವರ ಸೇವೆ, ಸಹನೆ ಎಲ್ಲವೂ ಈಗಾಗಲೇ ನಮ್ಮ ರಾಷ್ಟ್ರೀಯ ವಿಮೋಚನಾ ಹೋರಾಟದ ಇತಿಹಾಸದಲ್ಲಿ ದಾಖಲೆಗೊಂಡ ಕಥೆಗಳಾಗಿವೆ. ಅವರ ಸರಳತೆ ಸವಿನಯತೆ ಮತ್ತು ನಿರಾಡಂಭರದ ಬದುಕು ಅವರನ್ನು ಜನತೆಯ ಹೃದಯಕ್ಕೆ ತೀರಾ ಹತ್ತಿರಕ್ಕೆ ತಂದಿತ್ತು. ಯಾವ ಜನತೆಗೆ ಸ್ವಾತಂತ್ರ್ಯ ಗಳಿಸಿ ಕೊಡಲು ಹೋರಾಡಿದ್ದರೋ, ಯಾವ ಜನತೆಗೆ ಹೊಸದಾಗಿ ಪಡೆದ ಸ್ವಾತಂತ್ರ್ಯದ ಸಂದರ್ಭದಲ್ಲಿ ತಮ್ಮ ಬದುಕನ್ನು ಸಮುಚಿತವಾಗಿ ರೂಪಿಸಿಕೊಳ್ಳಲು ಸನ್ಮಾರ್ಗದರ್ಶನ ಮಾಡಿದ್ದರೋ, ಆ ಜನತೆಯ ಹೃದಯದಲ್ಲಿ ಅವರಿಗೆ ಚಿರಸ್ಥಾನ ದೊರಕಿತ್ತು ............. ಭಾರತದ ಪ್ರಥಮ ಅಧ್ಯಕ್ಷರಾಗಿ ಸತತವಾಗಿ ಎರಡು ಅವಧಿಗಳವರೆಗೆ ಅತ್ಯುನ್ನತ ಗೌರವ ಮತ್ತು ಅಧಿಕಾರದ ಸ್ಥಾನವನ್ನು ವಿರಳ ವಿಶೇಷತೆಯೊಂದಿಗೆ ಅಲಂಕರಿಸಿದ್ದರು. ಅವರು ಸಂವಿಧಾನಿಕ ವರ್ತನೆ ಮತ್ತು ವ್ಯವಹಾರದ ನಿರ್ದಿಷ್ಟ ಪ್ರಮಿತಗಳನ್ನು ಸ್ಥಾಪಿಸಿದರು"[5]

1964 ಮೇ 5 ರಂದು ಸಂಸತ್ತಿನ ಕೇಂದ್ರ ಸಭಾಂಗಣದಲ್ಲಿ ಡಾ|| ರಾಜೇಂದ್ರ ಪ್ರಸಾದರ ಭಾವಚಿತ್ರವನ್ನು ಅನಾವರಣ ಮಾಡುವ ಸಂದರ್ಭದಲ್ಲಿ, ಆಗಿನ ಪ್ರಧಾನ ಮಂತ್ರಿಗಳಾಗಿದ್ದ ಪಂಡಿತ ಜವಾಹರಲಾಲ ನೆಹರೂ ಅವರು ರಾಜೇನ್ ದೀರ್ಘಕಾಲದ ಸೇವೆ ಮತ್ತು ಬಾಬು ಅವರ ಸೇವಾ ಬದುಕಿನ ರೀತಿ ನೀತಿಗಳನ್ನು ನೆನಪಿಸಿಕೊಳ್ಳುತ್ತಾ ಹೇಳಿದ ಮಾತುಗಳು:

"ಅನೇಕ ವರ್ಷಗಳಷ್ಟು ದೀರ್ಘಕಾಲದಿಂದ ಅವರು ಗಾಂಧೀಜಿಯುವರ ಒಡನಾಡಿಯಾಗಿದ್ದರು. ಮಹಾತ್ಮರ ಜೊತೆಗೂಡಿ ದುಡಿದಿದ್ದರು. ಅವರದು ಸೇವೆಗೆ ಸಮರ್ಪಿತವಾದ ಬದುಕಾಗಿತ್ತು. ಗಾಂಧೀಜಿ ಭಾರತದಲ್ಲಿ ತಮ್ಮ ಮಹಾ ಆಂದೋಲನದ ಅಭಿಯಾನ ಆರಂಭ ಮಾಡಿದಂದಿನಿಂದಲೂ ಸುರುವಾದ ಅವರ ಸೇವೆ ಮಹಾತ್ಮಾಜಿಯ ಮರಣಾ ನಂತರ ಭಾರತದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಕಾಲದವರೆಗೂ ಅವರು ಸೇವಾ ನಿಷ್ಠವಾದ ಜೀವನವನ್ನೇ ನಡೆಸುತ್ತ ಬಂದಿದ್ದರು..."[6]

---

4. ಲೋಕಸಭೆಯ ಚರ್ಚೆಗಳು. 1 ಮಾರ್ಚ್, 1963.
5. ರಾಜ್ಯ ಸಭೆಯ ಚರ್ಚೆಗಳು 1, ಮಾರ್ಚ್, 1963 ಸಂಗ್ರಹ 1381-82.
6. ಜರ್ನಲ್ ಆಫ್ ಪಾರ್ಲಿಮೆಂಟರಿ ಇನ್‌ಫಾರ್‌ಮೇಶನ್, ಸಂಪುಟ X, 1964, ಪು 12.

ಆಕರ ಗ್ರಂಥಗಳು


1. ಸೇನ್, ಎಸ್.ಪಿ. (ಸಂ): ಡಿಕ್ಷನರಿ ಆಫ್ ನ್ಯಾಶನಲ್ ಬಯಾಗ್ರಫೀಸ್, ಸಂಪುಟ, III, ಕಲ್ಕತ್ತಾ, ಇನ್‌ಸ್ಟಿಟ್ಯೂಟ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, 1973.

2. ಅಹಲಿವಾಲಿಯಾ, ಶಶಿ: ಫೌಂಡರ್ಸ್ ಆಫ್ ಮಾಡರ್ನ್ ಇಂಡಿಯಾ, ನವದೆಹಲಿ, ಮಾನಸ ಪಬ್ಲಿಕೇಶನ್ಸ್, 1986.

3. ಚೌದರಿ, ವಾಲ್ಮೀಕಿ (ಸಂ): ಡಾ|| ರಾಜೇಂದ್ರ ಪ್ರಸಾದ ಕರೆಸ್ಪಾಂಡೆನ್ಸ್ ಅ್ಯಂಡ್ ಸೆಲೆಕ್ಟೆಡ್ ಡಾಕುಮೆಂಟ್ಸ್, ಸಂಪುಟ XII, ನವದೆಹಲಿ, ಅಲೈಡ್ ಪಬ್ಲಿಷರ್ಸ್ ಲಿಮಿಟೆಡ್, 1989.

4. ಹಂಡಾ, ಆರ್ ಎಲ್: ರಾಜೇಂದ್ರ ಪ್ರಸಾದ - ಟ್ವೆಲ್ವ್ ಈಯರ್ಸ್ ಆಫ್ ಟ್ರೈಯಂಫ್ ಅ್ಯಂಡ್ ಡಿಸ್‌ಪೇರ್, ನವದೆಹಲಿ, ಸ್ಟರ್ಲಿಂಗ್ ಪಬ್ಲಿಷರ್ಸ್ ಪ್ರೈವೇಟ್ ಲಿಮಿಟೆಡ್, 1978.

5. ದ ಜರ್ನಲ್ ಆಫ್ ಪಾರ್ಲಿಮೆಂಟರಿ ಇನ್‌ಫಾರ್ಮೇಶನ್ ಸಂ. X 1964.

6. ರಂಗಾ, ಎನ್.ಜಿ. ಡಿಸ್ಟಿಂಗ್ವಿಶ್‌ಡ್ ಅ್ಯಕ್ವಂಟನ್ಸೆಸ್, ಹೈದ್ರಾಬಾದ್, ದೇಶೀ ಬುಕ್ ಹೌಸ್, 1976.

7. ಸಂವಿಧಾನ ಸಭೆಯ ಚರ್ಚೆಗಳು.

8. ಲೋಕಸಭಾ ಚರ್ಚೆಗಳು.

9. ರಾಜ್ಯಸಭೆಯ ಚರ್ಚೆಗಳು.

## ಭಾಗ-2

# ರಾಷ್ಟ್ರ ನಿರ್ಮಾಪಕ ರಾಜೇಂದ್ರ ಬಾಬು *

ಡಾ॥ ಶಂಕರ ದಯಾಳ ಶರ್ಮಾ*

ನಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಮತ್ತು ಸ್ವಾತಂತ್ರ್ಯಾನಂತರ ರಾಷ್ಟ್ರದ ನವ ನಿರ್ಮಾಣಕ್ಕಾಗಿ ಅನೇಕ ವಿಖ್ಯಾತ ದುರೀಣರು ತಮ್ಮ ಕಾಣಿಕೆಯನ್ನು ನೀಡಿದ್ದಾರೆ. ಆದರೆ ಅವರಲ್ಲಿ ಕೆಲವರಿಗೆ ಮಾತ್ರ ಸ್ವಾತಂತ್ರ್ಯ ಪೂರ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಹಾಗೂ ಸ್ವಾತಂತ್ರ್ಯಾನಂತರ ಆಧುನಿಕ ಭಾರತವನ್ನು ರೂಪಿಸುವ ಸದಾವಕಾಶ ದೊರೆತಿದೆ. ಅಂಥವರಲ್ಲಿ ಸರ್ದಾರ್ ಪಟೇಲರು ಒಬ್ಬರಾಗಿದ್ದರು. ಆದರೆ ತೀರಾ ಅಲ್ಪ ಸಮಯದವರೆಗೆ ಮಾತ್ರ. ಡಾ॥ ರಾಜೇಂದ್ರ ಪ್ರಸಾದ ಮತ್ತು ಪಂಡಿತ ಜವಾಹರಲಾಲ್ ಅವರಿಗಾದರೋ ಈ ಅವಕಾಶ ತುಂಬಾ ಧೀರ್ಘಕಾಲದವರೆಗೆ ದೊರೆತಿತ್ತು. ಹಾಗಾಗಿ, ಅವರು ಈ ಎರಡೂ ಅವಧಿಗಳಲ್ಲಿ ತಮ್ಮ ಪ್ರತಿಭೆ ಶಕ್ತಿ ಸಾಮರ್ಥ್ಯಗಳನ್ನು ಮೆರೆಯಲು ಅವಕಾಶ ಪಡೆದಿದ್ದ ಸುದೈವಿಗಳಾಗಿದ್ದರು.

ಡಾ॥ ರಾಜೇಂದ್ರ ಪ್ರಸಾದರಿಗೆ ನಮ್ಮ ದೇಶದ ಸಂಸ್ಕೃತಿ ಮತ್ತು ಜನತೆಯೊಂದಿಗೆ ತುಂಬ ಗಾಢವಾದ ಸಂಬಂಧವಿತ್ತು. ಅವರು ಯಾವಾಗಲೂ ಜನತೆಯ ಸುಖ-ದುಃಖಗಳಲ್ಲಿ ಒಂದಾಗುತ್ತಿದ್ದರು. 1914ರಲ್ಲಿ ಬಿಹಾರ ಮತ್ತು ಬಂಗಾಲ ಪ್ರಾಂತಗಳಲ್ಲಿ ಮಹಾಪೂರ ಉಂಟಾದಾಗ, 1934 ರಲ್ಲಿ ಬಿಹಾರಿನಲ್ಲಿ ಭಯಂಕರ ಭೂಕಂಪ ಸಂಭವಿಸಿದಾಗ ಅವರು ಮಾಡಿದ ಕೆಲಸ, ತೋರಿದ ತ್ಯಾಗಭಾವ ಅವರ ಸೇವಾ ತತ್ಪರತೆಗೆ ಅನುಪಮ ನಿದರ್ಶನಗಳಾಗಿವೆ. ಅವರ ಈ ಸೇವೆಯನ್ನು ಪ್ರಶಂಸಿಸಿ ಬಾಪು ಹೀಗೆ ಬರೆದಿದ್ದರು:

> "ರಾಜೇಂದ್ರ ಬಾಬು ಅವರ ನೇತೃತ್ವದ ಪ್ರಭಾವ ಅನುಪಮವಾಗಿದೆ. ಬೇರೆ ಇನ್ನಾವುದೇ ಪ್ರಾಂತದ ಯಾವುದೇ ನೇತಾರರು ರಾಜೇಂದ್ರ ಬಾಬು ಅವರಂಥ ಪ್ರಭಾವೀ ಧುರೀಣರಾಗಿಲ್ಲ. ಭೂಕಂಪದ ದುರಂತದ ದಿನಗಳಲ್ಲಿ ಅವರು ಮಾಡಿದ ಕಾರ್ಯ, ಗೈದ ಸೇವೆಯಿಂದಾಗಿ ಪಡೆದ ಖ್ಯಾತಿ, ಗಳಿಸಿದ ವಿಶ್ವಾಸ, ಅವರನ್ನು ಇಡೀ ದೇಶದ ನೆಚ್ಚಿನ ನಾಯಕರನ್ನಾಗಿ ಮಾಡಿದೆ. ಅವರು ಬಿಹಾರಿನ ಶಾಂತಿ ದೂತರಾಗಿದ್ದಾರೆ. ಬಿಹಾರಿನ ಮೂಲಕ ಇಡೀ ಭಾರತದ ಶಾಂತಿದೂತ ಅವರಾಗುವರೆಂಬ ಭರವಸೆ ನನಗಿದೆ."

ಬಾಪೂಜಿಯ ಈ ಆಸೆ ನಿಸ್ಸಂಶಯವಾಗಿಯೂ ಈಡೇರಿದೆ. ರಾಜೇಂದ್ರ ಬಾಬೂ ಜಿ ಜನಸಾಮಾನ್ಯರ ಸಮಸ್ಯೆಗಳೊಂದಿಗೆ ತಮ್ಮನ್ನು ತಾವು ಗುರುತಿಸಿಕೊಳ್ಳುವ ಮೂಲಕ ರಾಷ್ಟ್ರ ನಿರ್ಮಾಣದ ಚಟುವಟಿಕೆಗಳನ್ನು ಆರಂಭಿಸಿದ್ದರು. ಆಮೇಲೆ ಚಂಪಾರಣ ಸತ್ಯಾಗ್ರಹದ ಸಂದರ್ಭದಲ್ಲಿ ಅವರು ಮೊದಲ ಬಾರಿಗೆ ಬಾಪೂಜಿಯ ಸಂಪರ್ಕಕ್ಕೆ ಬಂದರು. ನಿಸ್ವಾರ್ಥ ಸೇವೆಯ ಸದ್ಭಾವ ಅವರ ರಾಜಕೀಯ ಸಿದ್ಧಾಂತದ ಸ್ವರೂಪ ಪಡೆಯಿತು. ಆಮೇಲೆ ಅವರು ಸದಾ ಮುನ್ನಡೆದದ್ದು ಮಹಾತ್ಮಾಜಿ ತೋರಿದ ದಾರಿಯಲ್ಲಿ. ಚಂಪಾರಣ ಸತ್ಯಾಗ್ರಹದ ಸಂದರ್ಭದಲ್ಲಿ ಡಾ॥ ರಾಜೇಂದ್ರ ಪ್ರಸಾದರು ತೋರಿದ ನಿಷ್ಠೆ, ವಹಿಸಿದ ಶ್ರಮ, ಇತ್ಯಾದಿಯನ್ನು ನೆನಪಿಸಿಕೊಳ್ಳುತ್ತಾ ಬಾಪೂಜಿ ತಮ್ಮ ಆತ್ಮ ಚರಿತ್ರೆಯಲ್ಲಿ ಹೀಗೆ ಬರೆದಿದ್ದಾರೆ:

---

*ಡಾ॥ ಶರ್ಮಾ ಅವರು ಭಾರತದ ಉಪರಾಷ್ಟ್ರಪತಿ ಹಾಗೂ ರಾಜ್ಯಸಭೆಯ ಅಧ್ಯಕ್ಷರು.

"ರಾಜೇಂದ್ರ ಬಾಬು ನನ್ನೊಡನೆ ಕೆಲಸ ಮಾಡುತ್ತಿರುವ ಅತ್ಯುತ್ತಮ ಸ್ವಯಂಸೇವಕರಲ್ಲಿ ಒಬ್ಬರಾಗಿದ್ದಾರೆ. ... ಅವರ ಪ್ರೀತಿ ವಿಶ್ವಾಸದ ಕಾರಣದಿಂದಾಗಿ ನಾನು ಅವರ ಮೇಲೆ ಎಷ್ಟರ ಮಟ್ಟಿಗೆ ಅವಲಂಬಿತನಾಗಿದ್ದೇನೆಂದರೆ, ಅವರಿಲ್ಲದೆ ನಾನು ಒಂದೇ ಒಂದು ಹೆಜ್ಜೆ ಸಹ ಮುನ್ನಡೆಯಲು ಸಾಧ್ಯವಿಲ್ಲ."

ಇಂಥ ಆಳವಾದ ಅಕ್ಕರೆಯ ಭಾವದಿಂದಾಗಿಯೇ ರಾಜೇಂದ್ರ ಬಾಬು ಮಹಾತ್ಮಾಗಾಂಧೀಜಿಯ ಅತುಲ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಅವರ ನಂಬುಗೆ, ನಿಷ್ಠೆಯ ಪ್ರಗಾಢತೆಯನ್ನು ಅನುಲಕ್ಷಿಸಿಯೇ ಗಾಂಧೀಜಿ, "ಒಂದು ಕಪ್ಪು ವಿಷ ಕುಡಿಯಬೇಕೆಂದು ನಾನು ರಾಜೇಂದ್ರರಿಗೆ ಸೂಚಿಸಿದರೆ, ಅವರು ಹಿಂದೆ ಮುಂದೆ ನೋಡದೆ ಆ ಕೆಲಸ ಮಾಡಬಲ್ಲರು" ಎಂದು ಉದ್ಗಾರವೆತ್ತಿದ್ದುಂಟು. ಬಾಪೂಜಿಯ ಸತ್ಯ, ಅಹಿಂಸೆಯ ತತ್ವದಲ್ಲಿ ರಾಜೇಂದ್ರರಿಗೆ ಅಚಲ ಶ್ರದ್ಧೆಯಿತ್ತು. 1934 ರಲ್ಲಿ ಕಾಂಗ್ರೆಸ್ ಅಧ್ಯಕ್ಷರಾದಾಗ ಡಾ|| ರಾಜೇಂದ್ರ ಪ್ರಸಾದರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಹೇಳಿದ ಮಾತುಗಳು ಗಮನಾರ್ಹವಾಗಿವೆ.

"ಸತ್ಯ, ಅಹಿಂಸೆಗಳಲ್ಲಿ ದೃಢವಾದ ನಂಬುಗೆಯಿಡುವುದಕ್ಕಿಂತಲೂ ದೊಡ್ಡದಾದ ತತ್ವ ಇನ್ನೊಂದಿಲ್ಲ. ನಮ್ಮ ದೇಶದ ಜನತೆಯನ್ನು ಶೋಷಿಸುವವರ ಶಕ್ತಿಯನ್ನು ನಿರ್ಮೂಲನೆಗೊಳಿಸಬೇಕಾಗಿದೆಯೇ ವಿನಹ ಶೋಷಕರನ್ನು ನಿರ್ನಾಮ ಮಾಡಬೇಕಾಗಿಲ್ಲ ಎಂಬುದು ನಮ್ಮ ದೇಶದ ಜನತೆಯ ದೃಢವಾದ ನಿರ್ಧಾರವಾಗಿದೆ."

ಬಾಪೂಜಿ ವಿವಿಧ ಕ್ಷೇತ್ರಗಳಲ್ಲಿ ಕೈಗೊಂಡಿದ್ದ ರಚನಾತ್ಮಕ ಕಾರ್ಯಗಳನ್ನು ಪ್ರಚುರಪಡಿಸುವುದಕ್ಕೆ ಡಾ|| ರಾಜೇಂದ್ರ ಪ್ರಸಾದರು ತಮ್ಮನ್ನು ತಾವು ಅರ್ಪಿಸಿಕೊಂಡಿದ್ದರು. ಅಂತೆಯೇ ಅವರು ಸರ್ವೋದಯ ಆಂದೋಲನದ ಕಟ್ಟಾ ಬೆಂಬಲಿಗರಾಗಿದ್ದರು. ಖಾದಿ ಮತ್ತು ಗ್ರಾಮೋದ್ಯೋಗಗಳ ಬೆಳವಣಿಗೆಗೆ ಇಂಬುಗೊಡುತ್ತ, ಆ ಚಟುವಟಿಕೆಯೇ ತಮ್ಮ ಸದಾಕತ್ ಆಶ್ರಮದ·ಆಶ್ರಯದಲ್ಲಿ ನಿರಂತರ ನಡೆಯುವಂತೆ ನೋಡಿಕೊಂಡರು. ಅವರ ಈ ಕೆಲಸದ ಬಗ್ಗೆ ಬಾಪೂ ತಮ್ಮ 'ನವಜೀವನ' ಪತ್ರಿಕೆಯಲ್ಲಿ ಬರೆದದ್ದು:

"ಬಿಹಾರ ರತ್ನ ರಾಜೇಂದ್ರ ಬಾಬು ಅವರು ಚರಕ ಮತ್ತು ಖಾದಿ ಪ್ರಚಾರದ ನನ್ನ ಕೆಲಸದಲ್ಲಿ ಸಹಾಯದ ಹಸ್ತ ಚಾಚುತ್ತಿರುವಂತೆ ಉಳಿದೆಲ್ಲಾ ಪ್ರಾಂತಗಳ ಮುಖಂಡರೂ ತಮ್ಮ ತಮ್ಮ ಸಹಾಯದ ಹಸ್ತ ಮುಂಚಾಚಿದರೆ, ಅನತಿ ಕಾಲದಲ್ಲೇ ನಾವು ಸ್ವರಾಜ್ಯವನ್ನು ಪಡೆಯಬಹುದೆಂದು ನಾನು ಆಶ್ವಾಸನೆ ನೀಡಬಯಸುತ್ತೇನೆ. ಸ್ವರಾಜ್ಯವನ್ನು ಪಡೆಯುವ ಉದ್ದೇಶಕ್ಕಾಗಿಯೇ ನಾವು ಬೇರೊಂದು ಆಂದೋಲನ ಹೂಡುವ ಅವಶ್ಯಕತೆ ಉಂಟಾಗಲಾರದು."

ಖಾದಿ ಮತ್ತು ಚರಕದ ಬಗ್ಗೆ ರಾಜೇಂದ್ರ ಬಾಬು ಅವರಿಗಿದ್ದ ಸಮರ್ಪಣೆಗೆ ಇದೊಂದೇ ಉದಾಹರಣೆ ಸಾಕೆನಿಸುತ್ತದೆ. ನಿಲುವಿನ ಮೇಲೆ ಬೆಳಕು ಚೆಲ್ಲಲು ರಾಷ್ಟ್ರಧ್ವಜದ ಬಗ್ಗೆ ನಿರ್ಣಯವೊಂದನ್ನು ತೆಗೆದುಕೊಳ್ಳಲು ರಚಿಸಲಾಗಿದ್ದ ಸಂವಿಧಾನ ಸಭೆಯ ಸಮಿತಿಗೆ ರಾಜೇಂದ್ರ ಬಾಬು ಅಧ್ಯಕ್ಷರಾಗಿದ್ದರು. ಅವರ ಪ್ರಯತ್ನದಿಂದಾಗಿಯೇ ರಾಷ್ಟ್ರೀಯ ಧ್ವಜವು ಅದು ಹತ್ತಿಯದಾಗಿರಲಿ, ಉಣ್ಣೆ ಅಥವಾ ರೇಶ್ಮೆಯದಾಗಿರಲಿ- ಯಾವುದೇ ಬಟ್ಟೆಯದಾಗಿದ್ದರೂ ಅದು

ಕೈಮಗ್ಗದ ಖಾದಿಯಾಗಿರಬೇಕು ಎಂದು ಸಂವಿಧಾನದಲ್ಲಿ ವಿಧಿಸಲಾಗಿದೆ. ಬಾಪೂಜಿಯ ರಾಷ್ಟ್ರೀಯ ಶಿಕ್ಷಣದ ಪರಿಕಲ್ಪನೆಯನ್ನು ಸಾಕಾರಗೊಳಿಸುವ ಉದ್ದೇಶದಿಂದ ರಾಜೇಂದ್ರರು ಬಿಹಾರ ವಿದ್ಯಾಪೀಠವನ್ನು ಸಂಸ್ಥಾಪಿಸಿದರು. ಹರಿಜನ ಮತ್ತು ಆದಿವಾಸಿ ಜನತೆಯ ಅಭಿವೃದ್ಧಿಯ ಬಗ್ಗೆ ಅಪಾರ ಆಸಕ್ತಿ ಹೊಂದಿದ್ದ ಅವರು 'ಆದಿಮ ಜಾತಿ ಸೇವಕ ಸಂಘದ ಅಧ್ಯಕ್ಷರೂ ಆಗಿದ್ದರು.

ಡಾ|| ರಾಜೇಂದ್ರ ಪ್ರಸಾದರು ಒಬ್ಬ ಕ್ರಿಯಾಶೀಲ ಹಾಗೂ ನಿರ್ಭೀತ ಹೋರಾಟಗಾರರಾಗಿದ್ದರು. ಚಂಪಾರಣ ಸತ್ಯಾಗ್ರಹದ ಸಂದರ್ಭದಲ್ಲಿ ಅವರು ಬಾಪೂಜಿಯ ಸಂಪರ್ಕಕ್ಕೆ ಬಂದ ಮೇಲೆ ರಾಷ್ಟ್ರೀಯ ಮಹತ್ಕಾರಣದ ಹೋರಾಟಕ್ಕಾಗಿ ತಮ್ಮ ತುಂಬಾ ಲಾಭದಾಯಕವಾಗಿದ್ದ ವಕೀಲಿ ವೃತ್ತಿಯನ್ನು ಬಿಟ್ಟುಕೊಟ್ಟರು. ಅಂದಿನ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದಲ್ಲದೆ, ಮುಂದೆ 1920 ರ ಅಸಹಕಾರ ಆಂದೋಲನ ಮತ್ತು 1940-41 ರ ಕಾಯ್ದೆ ಭಂಗ ಚಳುವಳಿ, ಮುಂತಾದ ಪ್ರಕ್ಷೋಭೆಯ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದಕ್ಕೆ ಅವರು ಅನೇಕ ಸಲ ಬಂಧಿಸಲ್ಪಟ್ಟು ಜೈಲಿಗೂ ಹೋದರು. ಅವರು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಒಂದು ಸಲವಲ್ಲ, ಮೂರುಸಲ ಅಧ್ಯಕ್ಷರಾಗಿದ್ದರೆಂಬುದು ಗಮನಾರ್ಹ/-ಸ್ವಾತಂತ್ರ್ಯ ಪೂರ್ವದಲ್ಲಿ 1934 ರಲ್ಲಿ ಮೊದಲ ಬಾರಿಗೆ; 1939 ರಲ್ಲಿ ಸುಭಾಷ್ಚಂದ್ರ ಬೋಸ್ ಅವರು ರಾಜೀನಾಮೆ ಕೊಟ್ಟ ನಂತರ; ಮತ್ತೊಮ್ಮೆ 1947 ರಲ್ಲಿ ದೇಶ ಸ್ವಾತಂತ್ರ್ಯ ಪಡೆದಾಗ ಮಗದೊಮ್ಮೆ. ಡಾ|| ರಾಜೇಂದ್ರ ಪ್ರಸಾದರು ಒಬ್ಬ ಅಜಾತ ಶತ್ರುವಾಗಿದ್ದರು. ಅಂದರೆ, ಅವರಿಗೆ ವೈರಿಗಳೇ ಇರಲಿಲ್ಲ. ಬಹುಶಃ ಆ ಕಾರಣಕ್ಕಾಗಿಯೇ ಅವರು ತಾವೊಬ್ಬ ಕಾಂಗ್ರೆಸ್ ಸಂಘಟನೆಯ ಯಶಸ್ವಿ ಅಧ್ಯಕ್ಷರೆಂಬುದನ್ನು ಸಾಬೀತುಗೊಳಿಸಿದ್ದರು. ಅವರ ನೇತೃತ್ವದಲ್ಲಿ ಪಕ್ಷ ಸುಸಂಘಟಿತವಾಗಿದ್ದಲ್ಲದೆ, ಸಶಕ್ತವೂ ಆಗಿ ಬೆಳೆಯಿತು. ಅವರು ರಾಜಕಾರಣದಲ್ಲಿಯೇ ಕ್ರಿಯಾಶೀಲರಾಗಿದ್ದರೂ ಯಾವಾಗಲೂ ಅವರ ಮನದಲ್ಲಿ ಜನಸಾಮಾನ್ಯರೇ ಮಹತ್ವದ ಸ್ಥಾನ ಪಡೆಯುತ್ತಿದ್ದರು. ಭೂ ಹಿಡುವಳಿಯ ಅಸಮಾನತೆ ಅವರಿಗೆ ಸದಾ ಕಾಡುತ್ತಿತ್ತು. ಅದಕ್ಕಾಗಿಯೇ ಕಾಂಗ್ರೆಸ್ ಅಧ್ಯಕ್ಷರಾಗಿ ಅವರು ಕುಮಾರಪ್ಪ ಸಮಿತಿಯನ್ನು (ಕಾಂಗ್ರೆಸ್ ರೈತರ ಸುಧಾರಣಾ ಸಮಿತಿ) ರಚಿಸಿದರು. ಅದರ ಉದ್ದೇಶ ರೈತರ ಭೂ ಹಿಡುವಳಿಗಳಲ್ಲಿನ ಅಸಮಾನತೆಗಳನ್ನು ತೊಲಗಿಸುವದಾಗಿತ್ತು. ಆ ಸಮಿತಿಯ ವರದಿಯ ಪರಿಣಾಮಗಳು ಬಹುದೂರಗಾಮಿಯಾಗಿದ್ದವು. ಕೇಂದ್ರದ ಆಹಾರ ಮತ್ತು ಕೃಷಿ ಸಚಿವರಾಗಿ ಅವರು 'ಹೆಚ್ಚು ಆಹಾರ ಬೆಳೆಯಿರಿ' ಎಂಬ ಘೋಷಣೆಯ ಮೂಲಕ ದೇಶಕ್ಕೆ ಕರೆಕೊಟ್ಟರು. ಇದು ಅವರ ದೂರದರ್ಶಿತ್ವಕ್ಕೆ ಪುರಾವೆಯಾಗಿದೆ.

ಡಾ|| ಬಾಬು ರಾಜೇಂದ್ರ ಪ್ರಸಾದರು ನಿಶಿತ ಸ್ಮೃತಿಯ ಪ್ರತಿಭಾವಂತ ಕಾಯ್ದೆಯ ತಜ್ಞರಾಗಿದ್ದರು. ಅವರು ಭಾರತದ ಸಂವಿಧಾನ ಸಭೆಯ ಅಧ್ಯಕ್ಷರಾಗಿ ಆಯ್ಕೆಯಾದಾಗ ಇಡೀ ದೇಶ ಅವರ ಪ್ರತಿಭೆಯ ಲಾಭ ಪಡೆಯುವಂತಾಯಿತು. ನಮ್ಮ ಸಂವಿಧಾನದಲ್ಲಿ ಸಾರ್ವಜನಿಕ ಕಲ್ಯಾಣದ ಪರಿಕಲ್ಪನೆಯನ್ನು ಸೇರಿಸಿ, ಅದು ಪರಿಪೋಷಿತವಾಗುವುದಕ್ಕೆ ಬಹುಶಃ ರಾಜೇಂದ್ರ ಬಾಬು ಅವರೇ ಮುಖ್ಯವಾಗಿ ಕಾರಣರಾಗಿದ್ದರು. 1950ರ ಜನವರಿ 26 ರಂದು ಅವರು ಭಾರತದ ಪ್ರಥಮ ರಾಷ್ಟ್ರಪತಿಯಾಗಿ ಪ್ರಮಾಣ ವಚನ ಸ್ವೀಕರಿಸಿದ ಮೇಲೆ ಆಡಿದ ಮಾತುಗಳು ನಮ್ಮ ಸಂವಿಧಾನದ ಈ ಮೂಲ ಪರಿಕಲ್ಪನೆಯನ್ನು ಸ್ಪಷ್ಟವಾಗಿ ವಿವರಿಸುತ್ತವೆ. ಅವರ ಸರಳ ಮತ್ತು ನಿಚ್ಚಳ ಮಾತುಗಳು ಇಂತಿವೆ:

"ನಮ್ಮ ಗಣ ರಾಜ್ಯದ ಉದ್ದೇಶ ಎಲ್ಲ ನಾಗರಿಕರಿಗೂ ನ್ಯಾಯ, ಸ್ವಾತಂತ್ರ್ಯ ಮತ್ತು ಸಮಾನತೆಯ ಅವಕಾಶಗಳನ್ನು ಕಲ್ಪಿಸಿಕೊಟ್ಟು ರಾಷ್ಟ್ರದ ವಿವಿಧ ರಾಜ್ಯಗಳಲ್ಲಿ ವಾಸಿಸುತ್ತಿರುವ, ವಿಭಿನ್ನ ಧರ್ಮಗಳನ್ನು ಅನುಸರಿಸುತ್ತಿರುವ, ಬೇರೆ ಬೇರೆ ಭಾಷೆಗಳನ್ನು ಮಾತಾಡುತ್ತಿರುವ ಮತ್ತು ಅನೇಕ ರೂಢಿ ಸಂಪ್ರದಾಯಗಳನ್ನು ಅನುಸರಿಸುತ್ತಿರುವ-ಈ ಎಲ್ಲ ಜನರಲ್ಲಿಯೂ ಭ್ರಾತೃತ್ವದ ಭಾವನೆಯನ್ನು ಕುದುರಿಸುವುದಾಗಿದೆ."

ಡಾ।। ರಾಜೇಂಜ್ರ ಬಾಬು ಅವರಿಗೆ ರಾಷ್ಟ್ರದ ಬಗ್ಗೆ ಇದ್ದ ಅಚಲ ಬದ್ಧತೆಯ ಕಾರಣಕ್ಕಾಗಿಯೇ ಅವರನ್ನು ಸ್ವತಂತ್ರ ಭಾರತದ ಮೊದಲ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಘೋಷಿಸಲಾಯಿತು. ಅವರು ರಾಷ್ಟ್ರದ ಈ ಅತ್ಯುನ್ನತ ಹುದ್ದೆಯಲ್ಲಿ ನಿರಂತರವಾಗಿ ಹನ್ನೆರಡು ವರ್ಷಗಳವರೆಗೆ ಸೇವೆ ಸಲ್ಲಿಸಿದರು. ಅಧ್ಯಕ್ಷರಾಗಿ ಅವರು ಅನೇಕ ಸಂವಿಧಾನಿಕ ಮತ್ತು ಪ್ರಜಾತಾಂತ್ರಿಕ ಸತ್‌ಸಂಪ್ರದಾಯಗಳನ್ನು ಸ್ಥಾಪಿಸಿದ್ದಾರೆ. ಸಂವಿಧಾನಿಕ ಅತ್ಯುನ್ನತ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತ ಅವರು ಸಂವಿಧಾನವನ್ನು ತಮ್ಮ ಆತ್ಮಾಸಾಕ್ಷಿಗನುಗುಣವಾಗಿ ಸಂರಕ್ಷಣೆ ಮಾಡಿದ್ದಾರೆ. ಅಂತೆಯೇ ರಾಷ್ಟ್ರದ ಪಾಲನೆ ಪೋಷಣೆಯಲ್ಲಿಯು ತಮ್ಮ ಆತ್ಮಸಾಕ್ಷಿಯ ಮುತುವರ್ಜಿಯನ್ನು ತೋರಿಸಿದ್ದಾರೆ. ಭಾರತೀಯ ಸಂಸ್ಕೃತಿ, ದರ್ಶನ ಮತ್ತು ರೀತಿ ನೀತಿಗಳ ಆಳವಾದ ಜ್ಞಾನ ಅವರಿಗಿತ್ತು. ಅವರ ಯಾವತ್ತೂ ಅಭಿಪ್ರಾಯಗಳು ನಮ್ಮ ದೇಶದ ನೀತಿ ನಿಯಮಗಳಿಗನುಗುಣವಾಗಿದ್ದವು. ತತ್ಫಲವಾಗಿ, ಅವು ಜಾತ್ಯಾತೀತತೆ, ಸಮಾಜವಾದ ಮತ್ತು ಪ್ರಜಾತಂತ್ರವನ್ನು ಪ್ರತಿಬಿಂಬಿಸುತ್ತಿದ್ದವು. 1959ರ ಡಿಸೆಂಬರ್ 25 ರಂದು ಮಥುರಾ ಮುನ್ಸಿಪಲ್ ಸಮಿತಿ ಸಂಘಟಿಸಿದ್ದ ಸ್ವಾಗತ ಕಾರ್ಯಕ್ರಮದಲ್ಲಿ ಅವರಾಡಿದ ಮಾತುಗಳಿವು:

" ನಮ್ಮದು ಒಂದು ವಿಶಾಲವಾದ ದೇಶ. ಇಲ್ಲಿ ಅನೇಕ ಧರ್ಮ, ಅನೇಕ ಭಾಷೆಗಳ ಜನರು ವಿವಿಧ ಪ್ರಾಂತಗಳಲ್ಲಿ ವಾಸಿಸುತ್ತಿದ್ದಾರೆ. ತೋರಿಕೆಗೆ ಅವರಲ್ಲೆಲ್ಲಾ ಭಿನ್ನ-ವಿಭಿನ್ನತೆ ಕಾಣುತ್ತಿದೆಯಾದರೂ ಅವರೆಲ್ಲರಲ್ಲಿಯೂ ಏಕತೆ ಅಂತರ್ಗತವಾಗಿದೆ. ಅದುವೇ ನಮ್ಮ ದೇಶದಲ್ಲಿ ಅನೇಕ ರಾಜಕೀಯ ಅಲ್ಲೋಲ ಕಲ್ಲೋಲಗಳು, ಕ್ಷೋಭೆ ಕ್ಷಾಮಗಳು ಕಾಣಿಸಿಕೊಂಡರೂ ಶತಶತಮಾನಗಳಿಂದ ಭಾರತವನ್ನು ಏಕತ್ರಗೊಳಿಸಿ ಹಿಡಿದಿಟ್ಟಿದೆ.... ನಾವು ಇಂದು ಈ ಏಕತೆಯನ್ನು ರಕ್ಷಿಸಿಕೊಳ್ಳಬೇಕಾಗಿದೆ."

ಅವರಿಗೆ ರಾಷ್ಟ್ರದ ಹಿತಾಸಕ್ತಿಗಳೇ ಪರಮೋಚ್ಚವಾಗಿದ್ದವು. ಅವರು ಭಾರತದ ಅಂದಂದಿನ ಸ್ಥಿತಿಗತಿಗಳ ಕುರಿತು ಆಗಾಗ ತಮ್ಮ ನಿಷ್ಪಕ್ಷಪಾತವೂ, ವಸ್ತುನಿಷ್ಠವೂ, ವಿವೇಚನಾಯುತವೂ ಆದ ಸಲಹೆ ಸೂಚನೆಗಳನ್ನು ಪಂಡಿತ ಜವಾಹರಲಾಲ ನೆಹರು ಹಾಗೂ ಇತರ ಮುಖಂಡರಿಗೆ ನೀಡುತ್ತಿದ್ದರು. ಬೇರೆ ಬೇರೆ ಸಮಸ್ಯೆಗಳ ಬಗ್ಗೆ ಅವರು ಕೊಡುತ್ತಿದ್ದ ಸಲಹೆ ಸೂಚನೆಗಳು ತುಂಬಾ ಮನನೀಯವಾಗಿರುತ್ತಿದ್ದವು. ಇತ್ತೀಚಿಗೆ ಪ್ರಕಟಗೊಂಡ ಡಾ।। ಪ್ರಸಾದರ ಪತ್ರಗಳನ್ನು ಓದಿದ ಮೇಲೆ ನನಗೆ ಅವರ ಬಗ್ಗೆಯಿದ್ದ ಗೌರವ ಇನ್ನೂ ಗಟ್ಟಿಗೊಂಡಿದೆ. "ನಮ್ಮ ಗಣರಾಜ್ಯದ ಮೊದಲ ಹನ್ನೆರಡು ವರ್ಷಗಳು ರಾಜೇಂದ್ರ ಯುಗವೆಂದು ನಮ್ಮ ಇತಿಹಾಸದಲ್ಲಿ ಸದಾ ಸ್ಮರಿಸಲಾಗುತ್ತದೆ", ಎಂದು ಸ್ವತಃ ಪಂಡಿತ ನೆಹರೂ ಅವರೇ ಹೇಳಿದ್ದಾರೆ. ನಮ್ಮ ರಾಷ್ಟ್ರೀಯ ಇತಿಹಾಸದ ಮೇಲೆ ರಾಜೇಂದ್ರ ಬಾಬು ಅವರ ಶ್ರೇಷ್ಠ ಸಾಧನೆಗಳು ಅಚ್ಚಳಿಯದ ಮುದ್ರೆ ಒತ್ತಬಲ್ಲವೆಂಬುದು ನಿಸ್ಸಂಶಯ.

## ರಾಷ್ಟ್ರಪತಿ ರಾಜೇಂದ್ರ ಪ್ರಸಾದರಿಗೊಂದು ನುಡಿಗಾಣಿಕೆ

ಪ್ರೊ॥ ಎನ್.ಜಿ. ರಂಗಾ*

ನಮ್ಮ ಗಣತಂತ್ರದ ಪ್ರಥಮ ಅಧ್ಯಕ್ಷರಾಗಿದ್ದ ರಾಜೇಂದ್ರ ಪ್ರಸಾದರು ಕಾಂಗ್ರೆಸ್ ಆಂದೋಲನದ ಫಲಶೃತಿಯಾಗಿದ್ದಾರೆ. 1952-62 ರವರೆಗೆ ಸತತವಾಗಿ ಎರಡು ಅವಧಿಗಳಿಗೆ ಅಧಿಕಾರದಲ್ಲಿದ್ದ ಅವರು ನಮ್ಮ ನೆಚ್ಚಿನ ರಾಷ್ಟ್ರಪತಿಗಳಾಗಿದ್ದರು. ಸ್ವಭಾವತಃ ಶಾಂತ ಗುಣದವರಾಗಿದ್ದ ಅವರು ಅಜಾತ ಶತ್ರುವೆಂದೇ ಖ್ಯಾತರಾಗಿದ್ದರು. ಆದಾಗ್ಯೂ ಎರಡನೇ ಜಾಗತಿಕ ಯುದ್ಧದ ಅವಧಿಯಲ್ಲಿ ಉದ್ಭವಿಸಿದ್ದ ಬಿಕ್ಕಟ್ಟನ್ನು ಅವರು ಬಹು ಕೆಚ್ಚಿನಿಂದ ಎದುರಿಸಿದ್ದರು.

ಗಾಂಧೀಜಿಯವರಿಂದ ಅಷ್ಟೇ ಅಲ್ಲ, ಎಲ್ಲ ಕಾಂಗ್ರೆಸ್ಸಿಗರಿಂದಲೂ ಅವರು ತುಂಬ ಪ್ರೀತಿಯಿಂದ 'ರಾಜೇನ್ ಬಾಬು' ಎಂದೇ ಸಂಬೋಧಿಸಲ್ಪಡುತ್ತಿದ್ದರು. 1917ರಷ್ಟು ಹಿಂದೆಯೇ ಗಾಂಧೀಜಿ ತಮ್ಮ ಪ್ರಥಮ ಹೋರಾಟವಾದ ಚಂಪಾರಣ ಸತ್ಯಾಗ್ರಹವನ್ನು ಆರಂಭಿಸಿದ್ದಾಗಲೇ ಡಾ॥ ರಾಜೇಂದ್ರ ಪ್ರಸಾದರು ಗಾಂಧೀಜಿಯವರ ಆಂದೋಲನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಸಾಮ್ರಾಜ್ಯಶಾಹಿ ಸರಕಾರದ ವಿರುದ್ಧ ಹೂಡಲಾಗಿದ್ದ ಆ ಸತ್ಯಾಗ್ರಹದ ಆರಭ್ಯದಿಂದಲೂ ಅವರು ತಮ್ಮ ಗುರು-ಮಾರ್ಗದರ್ಶಕರಾಗಿದ್ದ ಗಾಂಧೀಜಿ ಸ್ವರ್ಗಸ್ತರಾಗುವವರೆಗೂ ಅವರ ಅತ್ಯಂತ ನಂಬುಗೆಯ, ನಿಷ್ಠೆಯ ಶಿಷ್ಯರಾಗಿ ನಡೆದುಕೊಂಡರು. ಯಾವ ಸಂದರ್ಭದಲ್ಲಿಯೂ ಚಾಚು ತಪ್ಪದೆ ಮಹಾತ್ಮಾಜಿಯನ್ನು ಅನುಸರಿಸಿದರು.

1935 ರಲ್ಲಿ ನಾನು ಅಖಿಲ ಭಾರತ ಕಿಸಾನ್ ಕಾಂಗ್ರೇಸ್ಸನ್ನು ಸಂಘಟಿಸುವ ಪ್ರಯತ್ನದಲ್ಲಿರುವಾಗ ಸುದೈವದಿಂದ ನನಗೆ ಅವರ ಬೆಂಬಲ ದೊರೆತಿತ್ತು. ಆಮೇಲೆ ನಾನು ಆಲ್ ಇಂಡಿಯಾ ಕಿಸಾನ್ ಕಾಂಗ್ರೆಸ್‌ನ ಅಧ್ಯಕ್ಷನಾಗಿದ್ದಾಗ ರಾಜೇನ್ ಬಾಬು ಅವರು ಸಂಪುಟದ ಸಚಿವರಾಗಿದ್ದರು. ನಾವಿಬ್ಬರೂ ಜೊತೆಗೂಡಿ ರೈತರ ಸಮಸ್ಯೆಗಳಿಗಾಗಿ ದುಡಿಯುವುದನ್ನು ಮುಂದುವರಿಸಿದೆವು. ಎರಡನೇ ಮಹಾಯುದ್ಧದ ಅವಧಿಯಲ್ಲಿ ಆಹಾರ ಧಾನ್ಯಗಳ ಸಂಗ್ರಹಣೆಯ ನಿಯಂತ್ರಣ ಕುರಿತು ಸಮಸ್ಯೆ ಉದ್ಭವಿಸಿ, ಶ್ರೀ ಜವಾಹರಲಾಲ ನೆಹರೂ ಮತ್ತು ಕಿಸಾನ್ ಕಾಂಗ್ರೆಸ್ಸ್‌ನಲ್ಲಿದ್ದ ನಮ್ಮಲ್ಲನೇಕರ ಮಧ್ಯೆ ಬಹು ತುರುಸಿನ ಚರ್ಚೆ ನಡೆದಾಗ, ಗಾಂಧೀಜಿ ನಮ್ಮ ನಿಲುವನ್ನು ಬೆಂಬಲಿಸಿದರು. ನಾವು ಆಹಾರ ನಿಯಂತ್ರಣವನ್ನು ವಿರೋಧಿಸುತ್ತಿದ್ದೆವು. ಗಾಂಧೀಜಿಯ ಬಗ್ಗೆ ಅಪಾರ ನಿಷ್ಠೆ ಮತ್ತು ರೈತರ ಬಗ್ಗೆ ಅಮಿತ ಪ್ರೀತಿ ಹೊಂದಿದ್ದ ರಾಜೇನ್ ಬಾಬು ನಮ್ಮ ಬೆಂಬಲಕ್ಕೆ ನಿಂತರು. ಅಷ್ಟೇ ಅಲ್ಲ, ಆ ಒಂದು ಸಮಸ್ಯೆಯನ್ನಾಧರಿಸಿ ತಮ್ಮ ಸಚಿವ ಸ್ಥಾನಕ್ಕೂ ರಾಜೀನಾಮೆ ಕೊಡಲು ಸಿದ್ಧರಾಗಿದ್ದರು.

ರಾಜೇನ್ ಬಾಬು ಅವರಿಗೆ ಗಾಂಧೀಜಿಯ ರಚನಾತ್ಮಕ ಕಾರ್ಯಕ್ರಮಗಳೆಂದರೆ ಎಲ್ಲಿಲ್ಲದ ಪ್ರೀತಿ, ಭಕ್ತಿ. ಹಾಗೆಂದೇ ಅವರು ಖಾದಿ ಮತ್ತು ಕೈಮಗ್ಗವನ್ನು ಅತ್ಯಂತ ಪ್ರಾಮಾಣಿಕತೆಯಿಂದ ಭಾರತದ ಉದ್ದಗಲಕ್ಕೂ ಪ್ರಚಾರ ಮಾಡಿದರು. ಸದಾಕತ್ ಆಶ್ರಮದಲ್ಲಿಯ ಅವರ ಚಟುವಟಿಕೆಗಳು ಆಚಾರ್ಯ ಕೃಪಲಾನಿಯವರ ಮೀರತ್ತಿನ ಖಾದಿ ಕೇಂದ್ರದ ಚಟುವಟಿಕೆಗಳಷ್ಟೇ ಜನಪ್ರಿಯವಾಗಿದ್ದವು. ಅವರಿಬ್ಬರಿಗೂ ನಮ್ಮ ರೈತರ, ವಿವಿಧ ಕುಶಲಕರ್ಮಿಗಳ ಸ್ವಾವಲಂಬನೆಯಲ್ಲಿ ನಂಬುಗೆಯಿತ್ತು.

* ಪ್ರೊ॥ ರಂಗಾ ಅವರು ಸಂವಿಧಾನ ಸಭೆಯ ಸದಸ್ಯರಾಗಿದ್ದರು ಹಾಲಿ ಸಂಸತ್ (ಲೋಕಸಭೆ) ಸದಸ್ಯರಾಗಿದ್ದಾರೆ.

ಹಾಗೆಂದೇ ಸ್ವಯಂ ಉದ್ಯೋಗದ ಮೂಲಕ ಆರ್ಥಿಕ ಸ್ವಾತಂತ್ರ್ಯ" ಎಂಬ ನನ್ನ ಪ್ರಬಂಧವನ್ನು ಅವರಿಬ್ಬರೂ ಬಹಳ ಮೆಚ್ಚಿಕೊಂಡಿದ್ದರು.

ಸರ್ದಾರ್ ಪಟೇಲರು ಕಾಂಗ್ರೆಸ್ಸಿಗರಿಗೆ ವಿಧಿಸುತ್ತಿದ್ದ ಶಿಸ್ತು ಸಂಯಮದ ನೀತಿ ಸಂಹಿತೆಯನ್ನು ಅತ್ಯಂತ ಉತ್ತಮ ರೀತಿಯಲ್ಲಿ ಯಾರಿಗೂ ನೋವಾಗದಂತೆ ಚಾಚೂ ತಪ್ಪದೆ ಆಚರಣೆಗೆ ತಂದವರು ರಾಜೇನ್ ಬಾಬು. ಕಟ್ಟುನಿಟ್ಟಿನ ಪ್ರತಿಪಾದನೆಗೆ ಹೆಸರಾಗಿದ್ದ ಸರ್ದಾರ್ ಹಾಗೂ ಅಷ್ಟೇ ಕಟ್ಟುನಿಟ್ಟಿನ ಆಚರಣೆಯಿಂದ ಖ್ಯಾತರಾಗಿದ್ದ ರಾಜೇನ್ ಬಾಬು, ಇವರಿಬ್ಬರೂ ಮಹಾತ್ಮ ಗಾಂಧೀಜಿಯ ಕಟ್ಟಾ ಶಿಷ್ಯರೆಂದು ಪ್ರಖ್ಯಾತರಾದುದರಲ್ಲಿ ಆಶ್ಚರ್ಯವೇನಿಲ್ಲ.

ಕಾಂಗ್ರೆಸ್‌ನಲ್ಲಿದ್ದ ನಮ್ಮಲ್ಲಿ ಅನೇಕರಿಗೆ ದಿಗಿಲುಗೊಳಿಸಿದ ವಿಷಯವೆಂದರೆ, ವಿಶೇಷವಾಗಿ ರಾಜೇನ್‌ಬಾಬು ಅವರು ಸಚಿವ ಸ್ಥಾನದಲ್ಲಿದ್ದಾಗ ಗಾಂಧೀಜಿಯವರ ಅತ್ಯಂತ ಮೃದುವಾದ ಎಚ್ಚರಿಕೆಗಳನ್ನು ಅಷ್ಟೇ ಪರಿಣಾಮಕಾರಿಯಾದ ನಿಯಂತ್ರಕಗಳನ್ನಾಗಿ ಪರಿವರ್ತಿಸುತ್ತಿದ್ದುದಲ್ಲದೆ, ಮಿಲಿಯಾಂತರ ಕಾಂಗ್ರೆಸ್ಸಿಗರು ಅವುಗಳನ್ನು ನಿಷ್ಠೆಯಿಂದ ಪಾಲಿಸುತ್ತಿದ್ದರು.

ಸಂವಿಧಾನ ಸಭೆಯ ಅಧ್ಯಕ್ಷರಾಗಿ ಅವರು ಕಾಯ್ದೆಯ ಪಂಡಿತರಿಗೆ ನೀಡುತ್ತಿದ್ದ ಸ್ವದ್ವಿವೇಕದ ಸಲಹೆ, ಸೂಚನೆಗಳು ಕಂದಾಚಾರಿ ಮತ್ತು ಕ್ರಾಂತಿಕಾರಿಗಳ ಎಳೆತ, ಸೆಳೆತಗಳ ನಡುವೆ ಒಂದು ಹಿತಮಿತವಾದ ಸಾಮರಸ್ಯವನ್ನು ಸಾಧಿಸಲು ಸಹಾಯ ಮಾಡುತ್ತಿದ್ದವು. ಅವರು ಡಾ|| ಅಂಬೇಡ್ಕರ್‌ರೊಡಗೂಡಿ ಅನೇಕ ಚಾರಿತ್ರಿಕ ಮಿತಿಗಳ ಚೌಕಟ್ಟಿನ ಇಕ್ಕಟ್ಟಿನೊಳಗೂ ಪ್ರಗತಿಪರ ವಿಚಾರ ಮತ್ತು ಮಾರ್ಗಗಳನ್ನು ಸಮರಸಗೊಳಿಸಿ ಗತಿಶೀಲ ಸೂತ್ರಗಳನ್ನು ಸಿದ್ಧಗೊಳಿಸುತ್ತಿದ್ದದ್ದು ನಮಗೆ ಯಾವಾಗಲೂ ಒಂದು ಅದ್ಭುತ ಸಂಗತಿಯಾಗಿಯೇ ಕಾಣುತ್ತಿತ್ತು. ಒಟ್ಟಾರೆಯಾಗಿ ಹೇಳುವುದಾದರೆ, ಸಂವಿಧಾನ ಸಭೆಯಲ್ಲಿ ರಾಜೇನ್ ಬಾಬು ಅವರ ಮುಖಂಡತ್ವ ಡಾ|| ಅಂಬೇಡ್ಕರರಿಗೆ ಅಷ್ಟೇ ಅಲ್ಲ, ಸಮಾಜವಾದೀ ಧೋರಣೆಯ ಇನ್ನಿತರ ಸದಸ್ಯರಿಗೂ ಅನೇಕ ರೀತಿಯಲ್ಲಿ ಸಹಾಯ ಮಾಡಿದೆ ಎಂದು ಹೇಳಬಹುದು.

ನಮ್ಮ ಪ್ರಥಮ ರಾಷ್ಟ್ರಪತಿ ಯಾರಾಗಬೇಕೆಂಬುದನ್ನು ಅನೌಪಚಾರಿಕವಾಗಿ ನಿರ್ಧರಿಸಲು ಸಂವಿಧಾನ ಸಬೆಯ ಸದಸ್ಯರೆಲ್ಲಾ ಸಂವಿಧಾನ ಕ್ಲಬ್ಬಿನಲ್ಲಿ ಸೇರಿದ್ದಾಗ ರಾಜೇನ್ ಬಾಬು ಅವರ ಬೆಂಬಲಕ್ಕಾಗಿ ನಾನು ನಿರ್ವಹಿಸಿದ ಮಹತ್ವದ ಪಾತ್ರ ನನಗಿನ್ನೂ ಸಂತೋಷ, ಸಂತೃಪ್ತಿಯನ್ನು ತಂದುಕೊಡುತ್ತಿದೆ. ಯಾಕೆಂದರೆ, ಆಗ ಜವಾಹರಲಾಲ್ ನೆಹರೂ ಅವರು ರಾಜೇನ್ ಬಾಬು ಅವರನ್ನು ಬೆಂಬಲಿಸಲು ಹಿಂದೇಟು ಹಾಕುತ್ತಿದ್ದರು. ರಾಷ್ಟ್ರದ ಅತ್ಯುನ್ನತ ಹುದ್ದೆಗೆ ನಾನು ರಾಜೇನ್ ಬಾಬು ಅವರ ಹೆಸರು ಸೂಚಿಸಲು ಇದ್ದ ಕಾರಣಗಳನ್ನು ವಿವರವಾಗಿ ಮಂಡಿಸಿದ ಮೇಲೆ ತಮ್ಮ ಸೂಚನೆ ಕುರಿತು ಒತ್ತಾಯ ಮಾಡುವುದನ್ನು ನಿಲ್ಲಿಸಿದರು. ರಾಜೇನ್‌ಬಾಬು ರಾಷ್ಟ್ರದ ಪ್ರಥಮ ರಾಷ್ಟ್ರಪತಿಯಾಗಿ ತುಂಬ ಜಾಗರೂಕತೆಯ, ಅಂತೆಯೇ ಅಷ್ಟೇ ಪ್ರಗತಿಪರ, ಸಂವಿಧಾನಿಕ ಸಂಪ್ರದಾಯಗಳನ್ನು ಸಂಸ್ಥಾಪಿಸಿದ್ದಾರೆ. ಅವರ ಔಚಿತ್ಯವರಿತ ನಿಲುವು, ನೈತಿಕ ನಡವಳಿ, ಅವರ ನಂತರ ಬಂದ ಅನೇಕ ಅಧ್ಯಕ್ಷರಿಗೆ ದಾರಿದೀಪವಾಗಿ ಪರಿಣಮಿಸಿವೆ. ಕೆಲವೊಮ್ಮೆ ಜವಾಹರಲಾಲರು ಸುನಿರೂಪಿತ ನಿಯಮಗಳನ್ನು ಉಲ್ಲಂಘಿಸುತ್ತಿರುವಂತೆ ಕಂಡು ಬಂದಾಗ ರಾಜೇನ್ ಬಾಬು ಅವರು ತುಂಬಾ ನಾಜೂಕಾಗಿ ಅಂಥ ಸಂಗತಿಗಳನ್ನು ಸರ್ವೋಚ್ಚ ನ್ಯಾಯಾಲಯದ ಮುಂದೆ

ಮಂಡಿಸುವ ಮೂಲಕ, ಉದ್ಭವಿಸಬಹುದಾಗಿದ್ದ ಕಹಿ ಅನುಭವ, ಅಸಂತೋಷದ ಪ್ರಸಂಗಗಳನ್ನು ತಪ್ಪಿಸುವಲ್ಲಿ ತಮ್ಮ ಬುದ್ಧಿ ಕೌಶಲ್ಯವನ್ನು ತೋರುತ್ತಿದ್ದರು. ತಮ್ಮ ಮತ್ತು ಪ್ರಧಾನ ಮಂತ್ರಿಗಳ ನಡುವಿನ ಭಿನ್ನಾಭಿಪ್ರಾಯ ಬೆಳೆದು ಅವರ ನಿಲುವುಗಳು ನೇರವಾಗಿ ಡಿಕ್ಕಿ ಹೊಡೆಯುವುದಕ್ಕೆ ಅವರೆಂದೂ ಅವಕಾಶ ಮಾಡಿಕೊಡುತ್ತಿರಲಿಲ್ಲ. ಅವರ ನಂತರ ಬಂದ ಅನೇಕ ಅಧ್ಯಕ್ಷರಿಗೆ ಪೂರ್ವಾರ್ಜಿತವಾಗಿ ಲಭಿಸಿದ ಚಾಕಚಕ್ಯತೆಯ ನಿಲುವು, ನಿಟ್ಟುಗಳು ತುಂಬ ಉಪಯುಕ್ತಕರವಾಗಿ, ತೃಪ್ತಿಕರವಾಗಿ ಪರಿಣಮಿಸಿವೆ. ಅವು ಸ್ಫೂರ್ತಿಯ ಸೆಲೆಯಾಗಿವೆ ಎಂಬುದು ಬೇರೆ ಮಾತು.

ರಾಜೇನ್ ಬಾಬು ಅವರು ಗಾಂಧೀವಾದಿಗಳಲ್ಲಿಯೇ ನೆಹರೂಜಿ ಕಂಡಿದ್ದ ಅತ್ಯಂತ ಸಹನೀಯ ಸಹೋದ್ಯೋಗಿಯಾಗಿದ್ದರು. ರಾಜಾಜಿ ಒಬ್ಬ ಪ್ರಬುದ್ಧ ಬುದ್ಧಿಜೀವಿ ಆಡಳಿತಗಾರರಾಗಿದ್ದರೆ; ಪ್ರವೀಣ ವಾಕ್ಪಟುತ್ವದ ವಕ್ತಾರರಾಗಿದ್ದರೆ ರಾಜೇನ್‌ಬಾಬೂ ಗಾಂಧೀಜಿಯ ಆದರ್ಶಗಳನ್ನು ಸಮರ್ಥವಾಗಿ ಆಚರಣೆಗೆ ತರಲು ಮೌನವಾಗಿ ಶ್ರಮಿಸುತ್ತಿದ್ದ ಶ್ರದ್ಧಾಳುಗಳಾಗಿದ್ದರು. ಇಂತಿದ್ದ ಈ ಇಬ್ಬರೂ ಪರಸ್ಪರ ಸಂಗಾತಿಗಳಾಗಿದ್ದು ಗಾಂಧೀಜಿಯ ಮಹಾನ್ ವಿಶ್ವಾಸಿಗರಾಗಿದ್ದುದು ನಿಜವಾಗಿಯೂ ದೈವ ಪ್ರಣೀತವೆಂದೇ ತೋರುತ್ತದೆ.

## ಪುರುಷ ಪುಂಗವ: ಡಾ॥ ರಾಜೇಂದ್ರ ಪ್ರಸಾದ

-ಎಸ್. ನಿಜಲಿಂಗಪ್ಪ*

1941 ರಲ್ಲಿ ನಾನು ಡಾ॥ ರಾಜೇಂದ್ರ ಪ್ರಸಾದರ ಸಂಪರ್ಕಕ್ಕೆ ಬರುವ ಬಹು ಮುಂಚೆಯೇ ಅವರು ದೇಶದಾದ್ಯಂತ ಖ್ಯಾತನಾಮರಾಗಿದ್ದರು. ಚಂಪಾರಣ ಸತ್ಯಾಗ್ರಹದ ಕಾಲದಲ್ಲಿ ಗಾಂಧೀಜಿಯವರೊಂದಿಗೆ ಅದರಲ್ಲಿ ಪಾಲ್ಗೊಳ್ಳುವುದಕ್ಕಾಗಿ, ಅಂದು ಬಹು ಲಾಭದಾಯಕವಾಗಿದ್ದ ತಮ್ಮ ವಕೀಲಿ ವೃತ್ತಿಯನ್ನು ತ್ಯಜಿಸಿದ್ದ ರಾಷ್ಟ್ರದ ಮಹತ್ವದ ನಾಯಕರಲ್ಲಿ ಒಬ್ಬರಾಗಿದ್ದರು. ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನಿಂದ ಪ್ರತ್ಯೇಕವಾಗಿದ್ದ ಮೈಸೂರು ಕಾಂಗ್ರೆಸ್ 1941 ರಲ್ಲಿ ಚಿತ್ರದುರ್ಗ ಜಿಲ್ಲೆಯ ಹರಿಹರ ಪಟ್ಟಣದ ಸಮೀಪ ಒಂದು ಸಣ್ಣ ಹಳ್ಳಿಯಲ್ಲಿ ತನ್ನ ಮೂರನೇ ವಾರ್ಷಿಕ ಅಧಿವೇಶನವನ್ನು ನಡೆಸಿತ್ತು. 1939ರಲ್ಲಿ ಆರಂಭವಾಗಿದ್ದ ಅರಣ್ಯ ಸತ್ಯಾಗ್ರಹವು ಅನೇಕ ಕಾರ್ಯಕರ್ತರಲ್ಲಿ ಸ್ಫೂರ್ತಿ ತುಂಬಿತ್ತು. ರಾಜ್ಯದಾದ್ಯಂತ ಕಾರ್ಯಕರ್ತರು ಸ್ವಇಚ್ಛೆಯಿಂದ ಬಂಧನಕ್ಕೊಳಗಾಗಿದ್ದರು. ಮುಂದೆ ನಮ್ಮ ಬಿಡುಗಡೆಯಾದದ್ದು ಸೆಪ್ಟೆಂಬರ್ 1940 ರಲ್ಲಿ. ಆದ್ದರಿಂದ ಅದರ ಮರು ವರ್ಷ ನಡೆದ ಈ ತೃತೀಯ ಅಧಿವೇಶನವನ್ನು ಅಭೂತಪೂರ್ವವಾಗಿ ಯಶಸ್ವಿಗೊಳಿಸಲು ವಿಶೇಷವಾಗಿ ಜಿಲ್ಲೆಯ ಮತ್ತು ರಾಜ್ಯದ ಇತರೆಡೆಯ ಜನರು ಅಪಾರ ಹುಮ್ಮಸ್ಸಿನಿಂದ ಈ ಅಧಿವೇಶಕ್ಕಾಗಿ ದುಡಿಯುತ್ತಿದ್ದರು. ಒಟ್ಟಿನಲ್ಲಿ ಆ ಅಧಿವೇಶನ ಚರಿತ್ರಾರ್ಹವಾಗಬೇಕೆಂಬುದೇ ಅವರ ಬಯಕೆ. ನಾನು ಸ್ವಾಗತ ಸಮಿತಿಯ ಅಧ್ಯಕ್ಷನಾಗಿದ್ದೆ. ಅಧಿವೇಶನದ ಸಂದರ್ಭದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗದ ಒಂದು ಪ್ರಾತಿನಿಧಿಕ ಪ್ರದರ್ಶನವನ್ನು ಏರ್ಪಡಿಸಬೇಕೆಂಬುದು ನಮ್ಮ ಅಭಿಲಾಷೆಯಾಗಿತ್ತು. ಅಂತೆಯೇ ಅದೊಂದು ಅದ್ಭುತ ಪ್ರದರ್ಶನವೆಂದು ದಾಖಲೆಯೂ ಆಯಿತು. ಗಾಂಧೀಜಿಯ ಸೂಚನೆಯ ಮೇರೆಗೆ ನಾವು ನಮ್ಮ ಸಂಘಟನೆಗೆ 'ಮೈಸೂರು ಕಾಂಗ್ರೆಸ್' ಎಂದು ನಾಮಕರಣ ಮಾಡಿದ್ದೆವು. ಆದ್ದರಿಂದಲೇ ಈ ಕಾಂಗ್ರೆಸ್ ಅಧಿವೇಶನ ಮತ್ತು ಖಾದಿ ಪ್ರದರ್ಶನವನ್ನು ಉದ್ಘಾಟಿಸಲು ಡಾ॥ ರಾಜೇಂದ್ರ ಪ್ರಸಾದರನ್ನು ಕಳಿಸಿ ಕೊಡುವಂತೆ ಗಾಂಧೀಜಿಯವರಲ್ಲಿ ವಿನಂತಿಸಿಕೊಂಡಿದ್ದೆವು. ಗಾಂಧೀಜಿಗೆ ಅವರನ್ನು ಕಳುಹಿಸುವ ಮನಸ್ಸಿರಲಿಲ್ಲ. ಆದರೆ ಪ್ರದರ್ಶನಕ್ಕಾಗಿ ನಾವು ಮಾಡಿದ ಎಲ್ಲ ವ್ಯವಸ್ಥೆ ಕುರಿತು ಧೀರ್ಘವಾಗಿ ವಿವರಿಸಿದ ಮೇಲೆ ಅವರು ತಮ್ಮ ಒಪ್ಪಿಗೆ ನೀಡಿ, ಒಂದು ಎಚ್ಚರಿಕೆಯ ಮಾತನ್ನು ಹೇಳಿದ್ದರು: "ನಾನು ಒಬ್ಬ ಪುರುಷ ಪುಂಗವನನ್ನು ನಿಮ್ಮಲ್ಲಿಗೆ ಕಳಿಸುತ್ತಿದ್ದೇನೆ. ಅವರ ಆರೋಗ್ಯ ಅಷ್ಟು ಚೆನ್ನಾಗಿಲ್ಲವಾದ್ದರಿಂದ ನೀವು ಅವರ ಬಗ್ಗೆ ತುಂಬ ಕಾಳಜಿ ವಹಿಸಬೇಕು". ನಮ್ಮ ವಿನಂತಿಗೆ ಪ್ರತಿಯಾಗಿ ರಾಜೇನ್ ಬಾಬು ಹರಿಹರಕ್ಕೆ ಬಂದು ಕಾಂಗ್ರೆಸ್ ಅಧಿವೇಶನ ಮತ್ತು ಖಾದಿ ಪ್ರದರ್ಶನವನ್ನು ಉದ್ಘಾಟಿಸಿದರು. ವಿಶೇಷವಾಗಿ, ಖಾದಿ ಪ್ರದರ್ಶನದ ಉದ್ಘಾಟನೆ ಅವರಿಗೆ ಅತೀವ ಸಂತೋಷವನ್ನುಂಟು ಮಾಡಿತ್ತು. ಆ ಬೃಹತ್ ಮಟ್ಟದ ಖಾದಿ ಪ್ರದರ್ಶನವನ್ನು ನೋಡಿ ತಮ್ಮ ಆಶ್ಚರ್ಯವನ್ನು ವ್ಯಕ್ತಪಡಿಸಿದರು. ಅದರಿಂದ ಸಾಕಷ್ಟು ಪ್ರಭಾವಿತರಾಗಿದ್ದರಷ್ಟೇ ಅಲ್ಲ, ಸಂಪ್ರೀತರೂ ಆಗಿದ್ದರು. ಮೇಲಾಗಿ, ವಾತಾವರಣ ಬಿಸಿಯಾಗಿದ್ದುದರಿಂದ ಅವರ ಅಸ್ತಮಾ ಅವರಿಗೆ ತೊಂದರೆಯೇನೂ ಕೊಡಲಿಲ್ಲ. ಅನುಕೂಲಕರ ಹವಾಮಾನ ಅವರ ಮೇಲೆ ಹಿತಕರ

*ಶ್ರೀ ಎಸ್. ನಿಜಲಿಂಗಪ್ಪನವರು ಸಂವಿಧಾನ ಸಭೆಯ ಸದಸ್ಯರಾಗಿದ್ದರು ಮತ್ತು ಕರ್ನಾಟಕದ ಮಾಜಿ ಮುಖ್ಯ ಮಂತ್ರಿಗ

ಪ್ರಭಾವ ಬೀರಿತು. ಅವರಿಗೆ ಕುಡಿಯಲು ಯಥೇಚ್ಛ ಕಬ್ಬಿನ ಹಾಲು ತಂದು ಕೊಟ್ಟೆವು. ನಾಡಿನ ಉದ್ದಗಲಕ್ಕೂ ಪ್ರವಾಸ ಕೈಗೊಳ್ಳಬೇಕೆಂದು ಮಂಡಿಸಿದ್ದ ನಮ್ಮ ಬೇಡಿಕೆಯನ್ನು ಮನ್ನಿಸಿ ಅವರು ಹಾಗೆಯೇ ಮಾಡಿದರು. ಅದರಿಂದ ರಾಜ್ಯದಲ್ಲಿ ನಮ್ಮ ಜನಪ್ರಿಯತೆ, ಸ್ಥಾನಮಾನ, ಶಕ್ತಿ, ಸಾಮರ್ಥ್ಯ ಎಲ್ಲವೂ ಗಮನಾರ್ಹವಾಗಿ ಹೆಚ್ಚಾದವು. ಅದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿದ್ದೇವೆ.

1946 ರಲ್ಲಿ ನಾನು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷನಾದ ಮೇಲೆ ಬಾಂಬೆ ಪ್ರಾಂತದ ನಾಲ್ಕು ಕನ್ನಡ ಜಿಲ್ಲೆಗಳಲ್ಲಿ ಡಾ॥ ಪ್ರಸಾದರ ಪ್ರವಾಸವನ್ನು ಸಂಘಟಿಸುವ ಅಪರೂಪದ ಅವಕಾಶ ನನಗೆ ದೊರೆತಿತ್ತು. ಕಸ್ತೂರಬಾ ಟ್ರಸ್ಟಿಗೆ ನಿಧಿ ಕೂಡಿಸುವ ಉದ್ದೇಶದಿಂದ ಸಂಘಟಿಸಲಾಗಿದ್ದ ಆ ಪ್ರವಾಸ ಮುಂಬಯಿ ಪ್ರಾಂತದ ಧಾರವಾಡ, ಬೆಳಗಾಂವ, ಬಿಜಾಪುರ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಯಶಸ್ವಿಯಾಗಿ ನಡೆಯಿತು. ಸಣ್ಣ ಸಣ್ಣ ಹಳ್ಳಿಗಳಲ್ಲಿ ಸಹ ಅವರನ್ನು ಸ್ವಾಗತಿಸಲು ನೆರೆಯುತ್ತಿದ್ದ ಜನರ ಸಂಖ್ಯೆ, ಅವರು ತೋರುತ್ತಿದ್ದ ಉತ್ಸಾಹ ಕಂಡು ನಾನು ಹಿಗ್ಗಿನಿಂದ ಬೀಗಿ ಹೋಗಿದ್ದೆ. ಜನಸಾಮಾನ್ಯರು ತಮ್ಮ ಶಕ್ತಿಗೆ ಮೀರಿ ವಂತಿಗೆ ಸಲ್ಲಿಸುತ್ತಿದ್ದರು. ನನ್ನ ಪ್ರಕಾರ ಅದಕ್ಕೆ ಎರಡು ಕಾರಣಗಳಿದ್ದವು. ಒಂದು ಆ ನಿಧಿ ಸಂಗ್ರಹದ ಘನವಾದ ಉದ್ದೇಶ; ಎರಡು, ಆ ಸಂಗ್ರಹಣೆಗೆ ತೊಡಗಿದ್ದ ವ್ಯಕ್ತಿಯ ಬಗ್ಗೆ ಇದ್ದ ಅವರ ಉದಾತ್ತ ಭಾವನೆ.

ಅದೇ ವರ್ಷ ನಾನು ಸಂವಿಧಾನ ಸಭೆಗೆ ಚುನಾಯಿತನಾದೆ. ಡಾ॥ ಬಾಬು ರಾಜೇಂದ್ರ ಪ್ರಸಾದರು ಸಂವಿಧಾನ ಸಭೆಯ ಒಮ್ಮತದ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಅವರ ಆಯ್ಕೆ ಪ್ರಶ್ನಾತೀತವಾಗಿತ್ತು. ಮುಂದೆ 1946ರ ನವೆಂಬರಿನಿಂದ ಜನವರಿ 1950 ಅಂದರೆ, ಮೂರು ವರ್ಷಗಳವರೆಗೆ ಸತತವಾಗಿ ಚರ್ಚೆ, ಜಿಜ್ಞಾಸೆ ನಡೆಸಿ ಜಗತ್ತಿನಲ್ಲಿಯೇ ಅತ್ಯುತ್ತಮವಾಗಿರುವ ಭಾರತದ ಸಂವಿಧಾನವನ್ನು ರಚಿಸಲಾಯಿತು. ಸ್ವತಂತ್ರ ಭಾರತದ ಆಸೆ ಆಕಾಂಕ್ಷೆಗಳನ್ನು ಸಂಪೂರ್ಣವಾಗಿ ಪ್ರತಿನಿಧಿಸುವ ಸಂವಿಧಾನದ ರಚನೆಯಲ್ಲಿ ಅಂದು ರಾಷ್ಟ್ರದಲ್ಲಿ ಲಭ್ಯವಿದ್ದ ಅತ್ಯುತ್ತಮ ಬುದ್ಧಿಜೀವಿಗಳನ್ನು ಬಳಸಲಾಯಿತು. ಕರಡು ರಚನೆಯ ಕೆಲಸಕ್ಕೆ ನೇತೃತ್ವ ಕೊಟ್ಟವರು ಡಾ॥ ಬಿ.ಆರ್. ಅಂಬೇಡ್ಕರ್. ಗಾಂಧೀಜಿಯ ಕಟ್ಟಾ ಶಿಷ್ಯರಾಗಿದ್ದ ರಾಜೇಂದ್ರ ಪ್ರಸಾದರು ಅವರನ್ನು, ಅವರ ತತ್ವಗಳನ್ನು ಚೆನ್ನಾಗಿ ತಿಳಿದವರಲ್ಲಿ ಅಗ್ರಗಣ್ಯರಾಗಿದ್ದರು. ಜೊತೆಗೆ ಭಾರತವನ್ನು ನಖಸಿಖಾಂತವಾಗಿ ಬಲ್ಲವರಾಗಿದ್ದರು. ಭಾರತದ ಸಮಸ್ಯೆಗಳಿಗೆ ಗಾಂಧೀ ತತ್ವಗಳ ಅನ್ವಯದ ದಾರಿಯು ಅವರಿಗೆ ಚೆನ್ನಾಗಿ ತಿಳಿದಿತ್ತು. ಸಂವಿಧಾನ ಸಮಿತಿಯ ಅಧ್ಯಕ್ಷರಾಗಿ ಡಾ॥ ಪ್ರಸಾದರು ಸಂವಿಧಾನದ ರಚನೆಯುದ್ದಕ್ಕೂ ಬಹು ಜಾಗರೂಕತೆಯಿಂದ ನಡೆದುಕೊಂಡರು. ಚರ್ಚೆಗೆ ಬರುತ್ತಿದ್ದ ಯಾವುದೇ ವಿಷಯದ ಪರಿಪೂರ್ಣ ಗ್ರಹಿಕೆಗೆ ಅವರು ಹಂಬಲಿಸುತ್ತಿದ್ದರು. ಅವರು ಅಂದು ಮತ್ತು ಇಂದು ಅಸ್ತಿತ್ವದಲ್ಲಿರುವ ಅತ್ಯಂತ ನಿಶಿತ ಮತಿಯ ಕಾಯ್ದೆಯ ತಜ್ಞರಲ್ಲೊಬ್ಬರಾಗಿದ್ದರು. ಅವರ ವ್ಯಕ್ತಿತ್ವದ ಘನತೆ, ಸೌಜನ್ಯ ಮತ್ತು ನಿಷ್ಪಕ್ಷಪಾತ ನಿಲುವು ಅನುಕರಣೀಯ ಆದರ್ಶ ಪಾಠಗಳಾಗಿವೆ. ನೋಡಲು ಅವರೊಬ್ಬ ಬಿಹಾರಿನ ಒರಟು ಒಕ್ಕಲಿಗನಂತಿದ್ದರು. ಎತ್ತರವಾದ ನಿಲುವು, ದಷ್ಟಪುಷ್ಟವಾಗಿದ್ದ ಮೈಕಟ್ಟಿನ ಸುಂದರ ಸೌಷ್ಠವ ಅವರದು. ಆದರೆ ಅತ್ಯಂತ ಚುರುಕು ಬುದ್ಧಿಯ ಕಾನೂನು ತಜ್ಞ ಅವರಾಗಿದ್ದರು. ಸಂವಿಧಾನ ಸಭೆಯ ಅಧ್ಯಕ್ಷರಾಗಿ ಅದರ ನಡವಳಿಕೆಗಳನ್ನು ನಿಭಾಯಿಸುತ್ತಿದ್ದಾಗ, ಮತ್ತು ಮುಂದೆ ಸತತವಾಗಿ ಎರಡು ಅವಧಿಗಳವರೆಗೆ ಭಾರತದ ರಾಷ್ಟ್ರಪತಿಗಳಾಗಿ ಸೇವೆ ಸಲ್ಲಿಸುತ್ತಿದ್ದಾಗ, ನಾನು ಅನೇಕ ಸಲ ಅವರಲ್ಲಿಗೆ ಹೋಗುವ

ಸಂದರ್ಭಗಳೊದಗಿ ಬಂದಿದ್ದವು. ಅವರು ತುಂಬ ಕರುಣಾಮಯಿಯಾಗಿ, ಸೌಜನ್ಯಶೀಲರಾಗಿ ನಡೆದುಕೊಳ್ಳುತ್ತಿದ್ದರು. ಸಹಾನುಭೂತಿ ಅವರ ಪ್ರಧಾನ ಗುಣವಾಗಿತ್ತು. ನಾನು ಅವರನ್ನು ಕಾಣಲು ಹೋದಾಗಲೆಲ್ಲ ಸಂತೃಪ್ತಿಯಿಂದಲೇ ಹೊರಬಂದಿದ್ದೇನೆ. ಅವರ ಪ್ರತಿಯೊಂದು ಸಂಪರ್ಕವೂ ಅವರ ಬುದ್ಧಿಭಾವಗಳನ್ನು ಸಂವರ್ಧಿಸಿವೆ. ಹಾಗೆಂದೇ ನಾನು ಅವರೊಂದಿಗೆ ಕಳೆದ ಪ್ರತಿಯೊಂದು ಕ್ಷಣವೂ ನನಗೆ ಇವತ್ತಿಗೂ ಅಮೂಲ್ಯ ಕ್ಷಣಗಳಾಗಿವೆ.

1948 ರಿಂದ ಮೊದಲ್ಗೊಂಡು 1960ರವರೆಗೆ, ಅಂದರೆ ಕೇವಲ ಎರಡೇ ಎರಡು ವರ್ಷಗಳ ಹೊರತಾಗಿ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕಾಂಗ್ರೆಸ್ ಇಬ್ಭಾಗವಾಗುವವರೆಗೆ ನಾನು ಕಾಂಗ್ರೆಸ್ ಕಾರ್ಯಕಾರಿಣಿ ಸಮಿತಿಯ ಸದಸ್ಯನಾಗಿ ಕಾಂಗ್ರೆಸ್‌ನ ಎಲ್ಲ ನಾಯಕರ ಸಹಚರ್ಯದ ಸಂದರ್ಭವೊದಗಿ ಬರುತ್ತಿದ್ದವು. ಅವರಲ್ಲಿ ನಾಲ್ಕು ಪ್ರಮುಖ ನಾಯಕರ ಬಗೆಗಿನ ಅನಿಸಿಕೆ ಇಂತಿವೆ: ಗಾಂಧೀಜಿ ಪೂಜಾರ್ಹರಾಗಿದ್ದರೆ, ಸರ್ದಾರ್‌ರು ಭಯಂಕರರು/-ಎಷ್ಟೋ ಸಲ ಅನಾವಶ್ಯಕವಾಗಿ; ನೆಹರೂ ಪ್ರಿಯರಾಗಿದ್ದರೆ, ರಾಜೇಂದ್ರ ಪ್ರಸಾದರು ಗೌರವಾರ್ಹರಾಗಿದ್ದರು. ರಾಜೇಂದ್ರ ಪ್ರಸಾದರು ತಾಳ್ಮೆ ಕಳೆದುಕೊಂಡದ್ದನ್ನು ಒಂದೇ ಒಂದು ಸಲ ನೋಡಿದ್ದೇನೆ. ಅದು ಬಂಗಾಲ ಮತ್ತು ಬಿಹಾರ ನಡುವಿನ ವಿವಾದಿತ ಗಡಿರೇಖೆಯನ್ನು ನಿರ್ಧರಿಸುವ ಪ್ರಶ್ನೆ ಕುರಿತು ಚರ್ಚೆ ನಡೆದಾಗ. ಸರ್ದಾರ್ ಪಟೇಲ ಮತ್ತು ರಾಜೇಂದ್ರ ಪ್ರಸಾದರ ನಡುವೆ ಭಿನ್ನಾಭಿಪ್ರಾಯ ಉಂಟಾಗಿತ್ತು. ರಾಜೇಂದ್ರ ಪ್ರಸಾದರದು ಒಂದು ನಿಲುವಾಗಿದ್ದರೆ, ಪಟೇಲರದು ಮತ್ತೊಂದು ದೃಷ್ಟಿಯಾಗಿತ್ತು. ನನ್ನ ಅಭಿಪ್ರಾಯದಲ್ಲಿ ರಾಜೇಂದ್ರ ಪ್ರಸಾದರ ನಿಲುವು ಸರಿಯಾದುದಾಗಿತ್ತು. ದೀರ್ಘ ಚರ್ಚೆಯ ನಂತರವೂ ಅವರ ಅಭಿಪ್ರಾಯ ಸ್ವೀಕರಿಸಲಾಗಲಿಲ್ಲ. ಆಗ ಅವರು ಸಹನೆ ಕಳೆದುಕೊಂಡು ವ್ಯಗ್ರವಾಗಿ ನುಡಿದರು: "ಹಾಗಾದರೆ ಅದರ ಪರಿಣಾಮ ಭಯಂಕರವಾದೀತು".

ರಾಜೇಂದ್ರ ಬಾಬು ಅವರ ಬಾಯಿಂದ ಇಂಥ ಕಠಿಣ ನುಡಿಗಳು ಬರುತ್ತಿದ್ದಂತೆಯೇ ಇಡೀ ಸಮಿತಿ ಒಂದರಗಳಿಗೆ ನಿಶ್ಯಬ್ದವಾಯಿತು. ಅನಂತರ ಆ ವಿಷಯವನ್ನು ಅಲ್ಲಿಗೇ ಬಿಟ್ಟುಬಿಡಲಾಯಿತು. ಆಮೇಲೆ ಅದು ಅವರ ಇಚ್ಛೆಗನುಗುಣವಾಗಿಯೇ ಕೊನೆಗೊಂಡಿತ್ತೆಂದು ನನ್ನ ಅನಿಸಿಕೆ.

ಅವರು ಇನ್ನೊಮ್ಮೆ ತಾಳ್ಮೆ ಕಳೆದುಕೊಂಡು ತಮ್ಮ ಅಭಿಪ್ರಾಯವನ್ನು ಬಲವತ್ತರವಾಗಿ ಮಂಡಿಸಿದ್ದು ಚುನಾವಣಾ ಕ್ಷೇತ್ರಗಳ ದ್ವಿಸದಸ್ಯತ್ವದ ವಿಷಯ ಚರ್ಚೆಗೆ ಬಂದಿದ್ದಾಗ. ದ್ವಿಸದಸ್ಯತ್ವದ ನಿಯಮದ ಪ್ರಕಾರ ಒಬ್ಬ ಪರಿಶಿಷ್ಟ ಜಾತಿಯ ಅಭ್ಯರ್ಥಿ ಪರಿಶಿಷ್ಟೇತರ ಜಾತಿಯ ಅಭ್ಯರ್ಥಿಯೊಂದಿಗೆ ಜೊತೆಗೂಡಿ ಒಂದು ಚುನಾವಣಾ ಕ್ಷೇತ್ರದಲ್ಲಿ ಸ್ಪರ್ಧಿಸಬೇಕಾಗಿತ್ತು. ಕಾರ್ಯಕಾರಿಣಿ ಸಭೆಯಲ್ಲಿ ಈ ವಿಷಯ ಚರ್ಚೆಗೆ ಬಂದಾಗ ಬಾಬು ರಾಜೇಂದ್ರ ಪ್ರಸಾದರು ದ್ವಿಸದಸ್ಯತ್ವ ಮತ ಕ್ಷೇತ್ರದ ವಿರೋಧವಾಗಿ ಬಲವಾಗಿ ಮಂಡಿಸಿ, ವಾದಿಸಿದರು: "ಈ ನತದೃಷ್ಟ ಸಮುದಾಯದ ಜನ ಇನ್ನೆಷ್ಟು ಕಾಲದವರೆಗೆ ಬೇರೆ ಸಮುದಾಯದವರ ಬಾಲಂಗೋಚಿಗಳಾಗಿ ಮುಂದುವರಿಯಬೇಕು. ನಾವು ಅವರಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡಬೇಕು. ಅವರು ತಮ್ಮ ಕಾಲಿನ ಮೇಲೆಯೇ ನಿಂತು ಹೋರಾಡುವುದು ಸಾಧ್ಯವಾಗಬೇಕು." ಅವರ ಅಭಿಪ್ರಾಯಕ್ಕೆ ಎಲ್ಲರ ಮನ್ನಣೆ ದೊರೆಯಿತು.

ಭಾರತ ತನ್ನ ಸಂವಿಧಾನವನ್ನು ಅಂಗೀಕರಿಸಿ ಒಂದು ಸಾರ್ವಭೌಮ ಗಣತಾಂತ್ರಿಕ ದೇಶವಾಗಿ ಹೊರ ಹೊಮ್ಮಿದ ಮೇಲೆ ಲೋಕಸಭೆಯ ಚುನಾವಣೆಗಳು ನಡೆದವು. ಆಮೇಲೆ ಇತ್ಯರ್ಥಕ್ಕೆ ಕಾದು ಕುಳಿತಿದ್ದ ಎರಡನೆಯ ಪ್ರಶ್ನೆ ಭಾರತದ ರಾಷ್ಟ್ರಪತಿಯ ಚುನಾವಣೆಯದಾಗಿತ್ತು. ಆಗ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಹಜವಾಗಿಯೇ ಆಳುವ ಪಕ್ಷವಾಗಿತ್ತು. ಪಂಡಿತ ನೆಹರೂ ಪ್ರಧಾನ ಮಂತ್ರಿಗಳಾಗಿದ್ದರು.

ಸಂವಿಧಾನ ಅಂಗೀಕಾರವಾದ ಮೇಲೆ ಪಾರ್ಲಿಮೆಂಟಿನಲ್ಲಿ ಕಾಂಗ್ರೆಸ್ ಪಕ್ಷ ರಾಷ್ಟ್ರಪತಿಯನ್ನು ಚುನಾಯಿಸಬೇಕಾಗಿತ್ತು. ಈ ಉದ್ದೇಶಕ್ಕಾಗಿ ಕರೆಯಲಾಗಿದ್ದ ಪಕ್ಷದ ಸಭೆಯಲ್ಲಿ ಪ್ರಧಾನ ಮಂತ್ರಿ ಪಂಡಿತ ನೆಹರೂ, ರಾಜಾಜಿ (ಶ್ರೀ ಸಿ.ರಾಜಗೋಪಾಲಾಚಾರಿ) ಯ ಹೆಸರನ್ನು ಸೂಚಿಸುವ ಮೂಲಕ ನಮಗೆ ದಂಗುಬಡಿಸಿದ್ದರು. ರಾಷ್ಟ್ರದ ಅತ್ಯುನ್ನತ ಹುದ್ದೆಗೆ ರಾಜಾಜಿಯ ಸಮರ್ಥತೆಯನ್ನು ಕೊಂಡಾಡುತ್ತ ಸುಮಾರು ನಲವತ್ತೈದು ನಿಮಿಷಗಳ ವರೆಗೆ ವಾದಿಸಿದರು. ಆದರೆ ಹೆಚ್ಚೂ ಕಡಿಮೆ ಎಲ್ಲರೂ ಡಾ|| ರಾಜೇಂದ್ರ ಪ್ರಸಾದರ ಹೆಸರನ್ನು ಸೂಚಿಸಿ ಅಂದಿನ ಸಂದರ್ಭದಲ್ಲಿ ಆ ಮಹಾ ಸ್ಥಾನಕ್ಕೆ ಅವರೊಬ್ಬರೇ ಯೋಗ್ಯರೆಂದು ಅಭಿಪ್ರಾಯಿಸಿದರು. ಪಂಡಿತ್‌ಜೀಗೆ ತಮ್ಮ ಸೋಲನ್ನು ಹೇಗೆ ಸ್ವೀಕರಿಸಬೇಕು, ಯಾವಾಗ ಒಪ್ಪಿಕೊಳ್ಳಬೇಕೆಂಬುದು ಚೆನ್ನಾಗಿ ಗೊತ್ತಿತ್ತು. ನೆಹರೂ ಮತ್ತು ರಾಜೇಂದ್ರರ ನಡುವೆ 'ಎಲ್ಲವೂ' ಚೆನ್ನಾಗಿರಲಿಲ್ಲ ಎಂಬ ಸಾತ್ವಿಕ ಗುಮಾನಿ ನನ್ನದಾಗಿತ್ತು. ಬಹುಶಃ ಆ ವಿಷಮ ಸಂಬಂಧ ಡಾ|| ರಾಜೇಂದ್ರ ಪ್ರಸಾದರ ಸಾವಿನವರೆಗೆ ಮುಂದುವರಿದೇ ಇತ್ತು.

ಅಧ್ಯಕ್ಷರ ಮೊದಲ ಅವಧಿ ಮುಗಿದ ಮೇಲೆ ಕಾಂಗ್ರೆಸ್ ಪಕ್ಷ ಮತ್ತೆ ರಾಷ್ಟ್ರಪತಿಯನ್ನು ಚುನಾಯಿಸಬೇಕಾಗಿತ್ತು. ಆಗಲೇ ನೆಹರೂ ಮತ್ತು ರಾಜಾಜಿಯ ನಡುವೆ ಭಿನ್ನಾಭಿಪ್ರಾಯಗಳುಂಟಾಗಿದ್ದವೆಂದು ನನ್ನ ಅನಿಸಿಕೆ. ಆದ್ದರಿಂದ ಈ ಸಲ ಪಂಡಿತ ನೆಹರೂ ಅವರು ರಾಜಾಜಿಯ ಬದಲಾಗಿ ಡಾ|| ರಾಧಾಕೃಷ್ಣನ್ ಅವರ ಹೆಸರು ಎತ್ತಿ ಹಿಡಿದು ಸದಸ್ಯರಿಗೆ ವಿನಂತಿಸಿಕೊಂಡರು. ಆಗಲೂ ಕೂಡ ಡಾ|| ರಾಜೇಂದ್ರ ಪ್ರಸಾದರು ಜೀವಂತರಾಗಿರುವವರೆಗೆ ರಾಷ್ಟ್ರಪತಿಯ ಹುದ್ದೆಗೆ ಬೇರೆ ಯಾರದೆ ಹೆಸರನ್ನು ಸಹಿಸುವುದು ಸಾಧ್ಯವಿಲ್ಲವೆಂಬುದು ಎಲ್ಲಾ ಸದಸ್ಯರ ಸಾಮಾನ್ಯ ಅಭಿಪ್ರಾಯವಾಗಿತ್ತು. ಮತ್ತು ಅದನ್ನವರು ಮುಚ್ಚುಮರೆಯಿಲ್ಲದೆ ವ್ಯಕ ಮಾಡಿದರು. ತತ್ಕಾರಣವಾಗಿ, ಡಾ|| ರಾಜೇಂದ್ರ ಪ್ರಸಾದರು ಮೊದಲಿನಂತೆಯೇ ಎರಡನೆಯ ಸಲಕ್ಕೂ ಅತ್ಯಂತ ಉತ್ಸಾಹದಿಂದ ಚುನಾಯಿಸಲ್ಪಟ್ಟರು. ನಾಮಪತ್ರ ಇತ್ಯಾದಿ ಸಲ್ಲಿಸಲು ಕೊಡಲಾಗಿದ್ದ ಅಲ್ಪಕಾಲಾವಧಿಯಲ್ಲಿ ನಾನು ಡಾ|| ಪ್ರಸಾದರಲ್ಲಿಗೆ ಹೋಗಿ ಯಾವುದೇ ಸಂದರ್ಭದಲ್ಲಿಯೂ ಅವರು ತಮ್ಮ ನಾಮಪತ್ರವನ್ನು ಹಿಂತೆಗೆದುಕೊಳ್ಳಬಾರದೆಂದು ಒತ್ತಾಯಿಸಿ ಬಂದೆ. ಅವರು ನಾಮಪತ್ರ ಸಲ್ಲಿಸಲೂ ಹಿಂದೆ ಮುಂದೆ ನೋಡುತ್ತಿದ್ದರು. ಅನೇಕ ಗೆಳೆಯರ, ಹಿತೈಷಿಗಳ ಒತ್ತಾಯದ ಮೇರೆಗೆ ಕೊನೆಗೂ ಅವರು ನಾಮಪತ್ರ ಸಲ್ಲಿಸಿದ್ದಾಯಿತು. ವಾಸ್ತವವಾಗಿ ಅವರಿಗೆ ಇನ್ನೊಂದು ಅವಧಿಗೆ ಮುಂದುವರೆಯುವ ಮನಸ್ಸಿರಲಿಲ್ಲ. ಅವರ ಒಲವು ನಿವೃತ್ತಿ ಪರವಾಗಿತ್ತು. ಇದೆಲ್ಲವನ್ನೂ ಅವರು ವಿವರವಾಗಿ ನನಗೆ ಹೇಳಿದರು. ಆದರೂ ನಾನು, ಇನ್ನಿತರ ಅನೇಕರು ಅವರಿಗೆ ನಮ್ಮ ಮನವಿ ಮನ್ನಿಸಲು ಒತ್ತಾಯಿಸಿದೆವು. ಏತನ್ಮಧ್ಯೆ ಪಂಡಿತ ನೆಹರೂ ಕೂಡ ಅವರನ್ನು ಭೆಟ್ಟಿಯಾದರೆಂದು ಕಾಣುತ್ತದೆ. ಅವರಿಬ್ಬರ ಮಧ್ಯ ಏನು ನಡೆಯಿತು ಎಂದು ನಮಗೆ ಗೊತ್ತಾಗಲಿಲ್ಲ. ಕೇಳಿದ್ದೆಲ್ಲವೂ ವದಂತಿಗಳಾಗಿದ್ದವು.

ಅವರೊಂದಿಗಿನ ಎಂದೂ ಮರೆಯಲಾಗದ ಇನ್ನೊಂದು ಸಂದರ್ಭ-1956 ರಲ್ಲಿ ರಾಜ್ಯಗಳ ಪುನರ್‌ಸಂಘಟನೆ ಮಸೂದೆ ಸಂಸತ್ತಿನಲ್ಲಿ ಪಾಸಾಗಿ ಭಾಷಾವಾರು ಪ್ರಾಂತಗಳ ರಚನೆಯಾದಾಗ ಅವರು ಹೊಸ ಕರ್ನಾಟಕ ರಾಜ್ಯದ ಉದಯವನ್ನು ಉದ್ಘಾಟಿಸಲು ಬೆಂಗಳೂರಿಗೆ ಬಂದಿದ್ದರು. ಆಗ ನಾನು ಮುಖ್ಯ ಮಂತ್ರಿಯಾಗಿದ್ದೆ; ಶ್ರೀ ಜಯಚಾಮರಾಜ ಒಡೆಯರ್ ಮೈಸೂರಿನ ಮಾಜಿ ಮಹಾರಾಜರು ರಾಜ್ಯದ ರಾಜಪಾಲರಾಗಿದ್ದರು. ಡಾ।। ಪ್ರಸಾದರ ಶುಭಾಶೀರ್ವಾದದಿಂದ ನವ ಕರ್ನಾಟಕ ರಾಜ್ಯದ ಶುಭೋದಯವಾಯಿತೆಂಬ ನಂಬುಗೆ ನನ್ನದು.

ರಾಷ್ಟ್ರಪತಿಯಾಗಿ ಅವರು ಸಲ್ಲಿಸಿದ ಸೇವೆ ಇತಿಹಾಸದಲ್ಲಿ ಅವಿಸ್ಮರಣೀಯ ಸಂಗತಿಯಾಗಿ ದಾಖಲೆಯಾಗಿದೆ. ಮುಂಬರುವ ಅಧ್ಯಕ್ಷರು ಸಂವಿಧಾನ ಬದ್ಧವಾಗಿ ಅನುಸರಿಸಬಹುದಾದ ಅನೇಕ ಸತ್‌ಸಂಪ್ರದಾಯಗಳಿಗೆ ಅವರು ಬುನಾದಿ ಹಾಕಿದ್ದರು. ಪ್ರಧಾನ ಮಂತ್ರಿ ಮತ್ತು ತಮ್ಮ ಮಧ್ಯ ಕೆಲವು ಭಿನ್ನಾಭಿಪ್ರಾಯಗಳಿದ್ದರೂ ಅವರು ರಾಷ್ಟ್ರದ ಅತ್ಯುನ್ನತ ಸ್ಥಾನದ ಘನತೆ ಗೌರವಾದಿಗಳನ್ನು ತುಂಬ ಜಾಗರೂಕತೆಯಿಂದ ಕಾಪಾಡಿದರು.

ಡಾ।। ಪ್ರಸಾದರ ನಂತರ ಆ ಸ್ಥಾನಕ್ಕೆ ಯೋಗ್ಯವಾಗಿದ್ದವರು ಡಾ।। ರಾಧಾಕೃಷ್ಣನ್. ಸಹಜವಾಗಿಯೇ ಅವರನ್ನು ಆ ಹುದ್ದೆಗೆ ಚುನಾಯಿಸಲಾಯಿತು. ಅದೂ ಅತ್ಯುತ್ತಮ ಆಯ್ಕೆಯಾಗಿತ್ತು. ತಮ್ಮ ಅಧಿಕೃತ ಪೂರ್ವಿಕರಾಗಿದ್ದ ಡಾ।। ರಾಜೇಂದ್ರ ಪ್ರಸಾದರಂತೆ ಡಾ।। ರಾಧಾಕೃಷ್ಣನ್ನರೂ ಆ ಸ್ಥಾನಕ್ಕೆ ಯಥೋಚಿತ ಸತ್ಕೀರ್ತಿ ಸಂಪಾದಿಸಿಕೊಟ್ಟರು.

ನಿರೀಕ್ಷಿಸಿದಂತೆಯೇ ನಿವೃತ್ತಿಯ ನಂತರ ಡಾ।। ಪ್ರಸಾದರು ತಮ್ಮ ಸದಾಖತ್ ಆಶ್ರಮಕ್ಕೆ ತೆರಳಿದರು. ಅಲ್ಲಿ ತಮ್ಮ ಬದುಕಿನ ಕೊನೆಯ ಉಸಿರಿನವರೆಗೆ ಅವರು ನಡೆಸಿದ ಜೀವನ ಸರಳವಾಗಿತ್ತು; ಅಷ್ಟೇ ಶ್ರೇಷ್ಠವಾಗಿತ್ತು. ಗಾಂಧೀಜಿಯ ನೇತೃತ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕೆಲವೇ ಮಹಾನ್ ನೇತಾರರಲ್ಲಿ ಅವರೂ ಒಬ್ಬರಾಗಿದ್ದರು. ಗಾಂಧೀಜಿಯನ್ನು ಅವರಷ್ಟು ಅರಿತು ಅನುಸರಿಸಿದವರು ವಿರಳವೆಂದೇ ಹೇಳಬೇಕು.

ಬಾಬು ರಾಜೇಂದ್ರ ಪ್ರಸಾದರದ್ದು ಶ್ರೇಷ್ಠವಾದ ಜೀವನ. ಅವರು ಭಾರತ ಮಾತೆಯ ಒಬ್ಬ ಮಹಾನ್ ಪುತ್ರ; ಗಾಂಧೀಜಿ ಹೇಳಿದಂತೆ, ಅವರು ಒಬ್ಬ 'ಪುರುಷ ಪುಂಗವ'.

## ರಾಜೇನ್ ಬಾಬು

-ಡಾ॥ ಬಲರಾಮ ಜಾಖಡ್*

ಬಿಹಾರಿನ ಅಪರಿಚಿತ ಹಳ್ಳಿಯೊಂದರಲ್ಲಿ ಜನಿಸಿದ್ದ ಡಾ॥ ರಾಜೇಂದ್ರ ಪ್ರಸಾದರು ಸರಳತೆ ಸೌಜನ್ಯದ ಸಾಕಾರ ರೂಪವಾಗಿದ್ದರು. ಗಾಂಧೀವಾದಿ ಮೌಲ್ಯಗಳ ಮೂರ್ತ ರೂಪದಂತಿದ್ದ ಅವರು ನಮ್ಮ ಸಂಸ್ಕೃತಿಯ ಅತ್ಯುತ್ತಮ ಅಂಶಗಳ ಪ್ರತಿನಿಧಿಯಾಗಿದ್ದರು. ಮಗಧ್‌ದ ಚಾರಿತ್ರಿಕ ನೆಲದಲ್ಲಿ ಹುಟ್ಟಿ ಬಂದ ಅವರು ಕ್ರಮೇಣ ಮೇಲೇರುತ್ತ ನಮ್ಮ ಸ್ವಾತಂತ್ರ್ಯ ಹೋರಾಟದ ಅಗ್ರಗಣ್ಯ ನಾಯಕರಲ್ಲೊಬ್ಬರಾದರು. ಆಮೇಲೆ ಅದೇ ದಾರಿಯಲ್ಲಿ ಮುಂದುವರೆದು ನಮ್ಮ ಗಣರಾಜ್ಯದ ಪ್ರಪ್ರಥಮ ಅಧ್ಯಕ್ಷರೂ ಆದರು.

ಪ್ರೀತಿಯಿಂದ ರಾಜೇನ್ ಬಾಬು ಎಂದೇ ಕರೆಯಲ್ಪಡುತ್ತಿದ್ದ ಅವರು ನಮ್ಮ ಸ್ವಾತಂತ್ರ್ಯ ಹೋರಾಟದ ಗಾಂಧೀವಾದಿ ನೇತಾರ-ತ್ರಿಮೂರ್ತಿಗಳಲ್ಲಿ ಒಬ್ಬರಾಗಿದ್ದರು. ಉಳಿದಿಬ್ಬರೆಂದರೆ, ಪಂಡಿತ ನೆಹರೂ ಮತ್ತು ಸರ್ದಾರ್ ಪಟೇಲರು. ಗಾಂಧೀಜಿಯ ನೇತೃತ್ವದಲ್ಲಿ ನಡೆದ ನಮ್ಮ ಸ್ವಾತಂತ್ರ್ಯ ಸಂಗ್ರಾಮಕ್ಕೆ ರಾಜೇನ್ ಬಾಬು ನೀಡಿದ ಕೊಡುಗೆ ಅಮೂಲ್ಯವಾದದ್ದು. ಆ ಮಹಾನ್ ಸಂಘರ್ಷದ ಸಂದರ್ಭದಲ್ಲಿ ಅವರು ತೋರಿದ ಶ್ರದ್ಧೆ, ತ್ಯಾಗ ಭಾವ ಆದರ್ಶಪ್ರಾಯವಾಗಿವೆ. ಗಾಂಧೀಜಿಯ ಅನುಯಾಯಿಗಳಲ್ಲಿ ಬಹುಶಃ ಅವರೇ ಅತ್ಯಂತ ಹೆಚ್ಚಿನ ನಿಷ್ಠೆ ಮತ್ತು ಶ್ರದ್ಧೆಯ ಶಿಷ್ಯರಾಗಿದ್ದರು. ಈ ಸಂಗತಿ ಬಾಪೂಜಿಯ ಈ ಮಾತಿನಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು:

"ನನ್ನ ಕೈಯಿಂದ ಒಂದು ಬಟ್ಟಲು ವಿಷ ಕೊಟ್ಟರೂ ಹಿಂದೆ ಮುಂದೆ ನೋಡದೆ ಅದನ್ನು ಸ್ವೀಕರಿಸುವ ವ್ಯಕ್ತಿಯೊಬ್ಬನಿದ್ದಾನೆ."

1908 ರಷ್ಟು ಹಿಂದೆ ಕಲ್ಕತ್ತಾ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯಾಗಿದ್ದಾಗಲೇ ರಾಜೇನ್ ಬಾಬು ಬಿಹಾರ ವಿದ್ಯಾರ್ಥಿಗಳ ಸಮ್ಮೇಳನವನ್ನು ಸಂಘಟಿಸಿದ್ದರು. ಅದು ಅಖಿಲ ಭಾರತದಲ್ಲಿಯೇ ಅಂಥ ಪ್ರಕಾರದ ಪ್ರಥಮ ಸಮ್ಮೇಳನವಾಗಿತ್ತು. ಆ ಸಂಘಟನೆಯ ಹಿರಿಮೆಯೇನೆಂದರೆ, ಅನಂತರ ಹೊರ ಹೊಮ್ಮಿದ್ದ ಇಡೀ ಬಿಹಾರಿನ ರಾಜಕೀಯ ನೇತಾರರು ಮುಖ್ಯವಾಗಿ ಆ ಸಂಘಟನೆಯಿಂದಲೇ ಬಂದವರಾಗಿದ್ದರು. ಆ ಸಂಘಟನೆ ರಾಜನ್ ಬಾಬು ಅವರ ಸಂಘಟನಾ ಚಾತುರ್ಯಕ್ಕೆ ಮೊದಲ ನಿದರ್ಶನವಾಗಿತ್ತು. ಆರಂಭದ ಸಾಂಸ್ಥಿಕ ಸಂಘಟನೆಯ ಈ ಕೌಶಲ್ಯ ಕಾಲ ಕಳೆದಂತೆ ಅವರಲ್ಲಿ ರಾಜಕೀಯ ಮುತ್ಸದ್ದಿತನದ ಅತ್ಯುತ್ತಮ ಗುಣಗಳನ್ನು ಅಳವಡಿಸಿಕೊಳ್ಳಲು ಸಹಾಯ ಮಾಡಿತು. ರಾಜಕೀಯ ನೇತಾರ, ಪ್ರಕಾಂಡ ಪಂಡಿತ, ಚರಿತ್ರಕಾರ, ಶಿಕ್ಷಣ ತಜ್ಞ, ಸಮಾಜ ಸುಧಾರಕ ಇವೆಲ್ಲಕ್ಕೂ ಮಿಗಿಲಾಗಿ, ಒಬ್ಬ ರಚನಾತ್ಮಕ ಚಿಂತಕ ಮತ್ತು ದಾರ್ಶನಿಕ /- ಇವರೆಲ್ಲರ ಸಮರಸ ಮೇಳವಾಗಿತ್ತು ಅವರ ವ್ಯಕ್ತಿತ್ವ.

ಡಾ॥ ರಾಜೇಂದ್ರ ಪ್ರಸಾದರು ನಮ್ಮ ದೇಶದ ಮುನ್ನಡೆಯ ದಾರಿ-ದಿಶೆ-ದಿಕ್ಕನ್ನು ತುಂಬ ಸಮರ್ಥವಾಗಿ ನಿರ್ಧರಿಸಿದ್ದಾರೆ. ವಿಶೇಷವಾಗಿ, ಸ್ವಾತಂತ್ರ್ಯದ ನಿಕಟಪೂರ್ವ ಮತ್ತು ಸ್ವಾತಂತ್ರ್ಯಾನಂತರ ಅವರು ರಾಷ್ಟ್ರಕ್ಕೆ ನೀಡಿದ ಮಾರ್ಗದರ್ಶನ ಅಪೂರ್ವವಾದದ್ದು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅವರು ಒಂದಲ್ಲ, ಮೂರು ಸಲ ಕಾಂಗ್ರೆಸ್ ಅಧ್ಯಕ್ಷರಾಗಿ

*ಡಾ॥ ಜಾಖಡ್ ಅವರು ಲೋಕಸಭೆಯ ಮಾಜಿ ಅಧ್ಯಕ್ಷರು.

ಚುನಾಯಿತರಾಗಿದ್ದರು. 1946 ರಲ್ಲಿ ಭಾರತದ ಸಂವಿಧಾನವನ್ನು ರಚಿಸುವ ಉದ್ದೇಶದಿಂದ ಸಂವಿಧಾನ ಸಭೆ ರಚನೆಯಾದಾಗ ರಾಜೇನ್ ಬಾಬು ಅದರ ಅಧ್ಯಕ್ಷರಾಗಿ ಚುನಾಯಿತರಾದರು. 1950ರಲ್ಲಿ ಭಾರತ ಗಣರಾಜ್ಯದ ಮೊದಲ ಅಧ್ಯಕ್ಷರಾಗಿ ಆಯ್ಕೆಯಾಗಿದ್ದ ಅವರು ಮುಂದೆ ಹದಿಮೂರು ವರ್ಷಗಳವರೆಗೆ ಆ ಉನ್ನತ ಸ್ಥಾನವನ್ನು ಅಲಂಕರಿಸಿ 1962 ರಲ್ಲಿ ನಿವೃತ್ತಿ ಹೊಂದಿದರು.

ಸಂವಿಧಾನ ಸಭೆಯನ್ನು ಮುನ್ನಡೆಸಿಕೊಂಡು ಹೋಗುವಲ್ಲಿ ಅವರು ತೋರಿದ ನೈಪುಣ್ಯ ಅವರ ಉದಾತ್ತ ಗುಣಗಳಿಗೆ ಉಜ್ವಲ ಸಾಕ್ಷಿಯಾಗಿದೆ. ಅದರ ಅಧ್ಯಕ್ಷರಾಗಿ ಅವರು ನೀಡಿದ ಮಾರ್ಗದರ್ಶನ ಅದರ ನಡವಳಿಕೆಗಳನ್ನು ನಿರ್ವಹಿಸುವಲ್ಲಿ, ನಿಯಂತ್ರಿಸುವಲ್ಲಿ ತೋರಿದ ಚಾಕಚಕ್ಯತೆ, ತಾಳ್ಮೆ ಹಾಗೂ ದೂರದೃಷ್ಟಿ ಅನುಕರಣೀಯವಾಗಿವೆ. ಸಂವಿಧಾನ ಸಭೆಯ ಚರ್ಚೆ, ವಾದ-ವಿವಾದಗಳ ಸಂದರ್ಭದಲ್ಲಿ ಯಾರೊಬ್ಬರಿಗೂ ನೋವುಂಟಾಗದಂತೆ, ಯಾರ ಭಾವನೆಗೂ ಚ್ಯುತಿಬರದಂತೆ ತುಂಬ ಸಂಯಮದಿಂದ, ಸಮಭಾವದಿಂದ ನಡೆದುಕೊಳ್ಳುತ್ತಿದ್ದ ಅವರ ಜಾಣ್ಮೆಯಿಂದಾಗಿ ಅಲ್ಲಿಯ ಎಲ್ಲ ಚರ್ಚೆ, ಜಿಜ್ಞಾಸೆಗಳು ಮುಕ್ತವಾಗಿ, ನಿರ್ಭೀತವಾಗಿ ನಡೆಯುತ್ತಿದ್ದವು. ಸಂವಿಧಾನ ಸಭೆಯ ಮೊದಲ ಗೋಷ್ಠಿಯ ಅವಧಿಯಲ್ಲಿಯೇ ಅವರು ಸ್ಪಷ್ಟವಾಗಿ ಘೋಷಿಸಿದ್ದರು: "ಈ ಸಭೆ ಅನೇಕ ಮಿತಿಗಳೊಂದಿಗೆ ಜನ್ಮ ತಳೆದಿದೆಯಾದರೂ, ಅದು ತನ್ನೆಲ್ಲ ಮಿತಿಗಳನ್ನು ಮೀರಿ, ಹೊರಗಿನ ಯಾವುದೇ ಅಧಿಕಾರವನ್ನು ಮನ್ನಿಸದೆ, ತಾನೇ ಒಂದು ಪರಮ ನಿಕಾಯವಾಗಿ (Sovereign body) ಕಾರ್ಯವೆಸಗಲಿದೆ" ಭಾರತ ಗಣರಾಜ್ಯದ ಸೃಷ್ಟಿಯಲ್ಲಿ ಅಷ್ಟೇ ಅಲ್ಲ, ಅದನ್ನು ಪಾಲಿಸಿ ಪೋಷಿಸುವುದರಲ್ಲಿಯೂ ಅವರು, ಒಬ್ಬ ನಿಜವಾದ ತಾಯಿಯಂತೆ, ಅದಕ್ಕೆ ಅಪಾರ ಪ್ರೀತಿ ಧಾರೆಯೆರೆದಿದ್ದಾರೆ; ಅದನ್ನು ಅಭಿಮಾನದಿಂದ ಕಂಡು ಬೀಗಿದ್ದಾರೆ.

> ಸಂವಿಧಾನ ಸಭೆಯ ಅಧ್ಯಕ್ಷರಾಗಿ ಅದರ ಅಂತಿಮ ಗೋಷ್ಠಿಯಲ್ಲಿ ರಾಜೇನ್ ಬಾಬು ಆಡಿದ ಮಾತುಗಳಿವು: "ಸಂವಿಧಾನವು ಏನಾದರೂ ವಿಧಿಸಬಹುದು, ವಿಧಿಸದೆಯೂ ಇರಬಹುದು, ಆದರೆ ಒಟ್ಟಾರೆಯಾಗಿ ರಾಷ್ಟ್ರದ ಆಡಳಿತದ ವ್ಯವಹಾರ ನಡೆಸಲಾಗುವ ವಿಧಾನದ ಮೇಲೆಯೇ ಅದರ ಏಳ್ಗೆ ಅವಲಂಬಿಸಿರುತ್ತದೆ. ಯಾರು ಆಡಳಿತ ನಡೆಸುತ್ತಾರೆಯೋ ಅವರನ್ನೇ ಅದು ಅವಲಂಬಿಸಿರುತ್ತದೆ. ನಮ್ಮಲ್ಲಿ ಕೋಮು ಭೇದಗಳಿವೆ, ಜಾತಿ-ಭಿನ್ನತೆಗಳಿವೆ, ಭಾಷಾ ವ್ಯತ್ಯಾಸಗಳಿವೆ; ಪ್ರಾಂತೀಯ ಪ್ರಭೇದ ಮುಂತಾದವುಗಳಿವೆ. ದೇಶದ ಕಲ್ಯಾಣ ಸಾಧನೆಗೆ, ಅದರ ಚುಕ್ಕಾಣಿ ಹಿಡಿಯುವವರು ಸಚ್ಚಾರಿತ್ರವಂತರಾಗಿರಬೇಕು; ದೃಷ್ಟಾರರಾಗಿರಬೇಕು; ಸಂಕುಚಿತ ಭಾವನೆ ಮತ್ತು ಸ್ವಾರ್ಥ ಹಿತಾಸಕ್ತಿಗಾಗಿ ರಾಷ್ಟ್ರದ ಹಿತವನ್ನು ಬಲಿಗೊಡಲಾರದ ಧೀರ, ಧೀಮಂತರಾಗಿರಬೇಕು. ಈ ವಿಭಿನ್ನ ಭೇದ ಭಾವಗಳಿಂದ ಹೊರ ಹೊಮ್ಮಬಹುದಾದ ಪೂರ್ವಾಗ್ರಹಗಳನ್ನು ಮೆಟ್ಟಿ ಮೀರಿ ನಿಲ್ಲಬಲ್ಲ ತಾಕತ್ತಿನವರಾಗಿರಬೇಕು. ಮುಂಬರುವ ದಿನಗಳಲ್ಲಿ ನಮ್ಮ ದೇಶದಲ್ಲಿ ಇಂಥಾ ವ್ಯಕ್ತಿಗಳು ಹೇರಳವಾಗಿ ಕಾಣಿಸಿಕೊಳ್ಳಲೆಂದು ಆಶಿಸೋಣ."

ಭಾರತದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದ ಅವರು ತಮ್ಮ ಉದಾತ್ತ ಆದರ್ಶ, ನಿಷ್ಪಹ ಉದ್ದೇಶ ಹಾಗೂ ಸಚ್ಚಾರಿತ್ರ್ಯದ ಮೂಲಕ ಎಲ್ಲರ ಹೃದಯವನ್ನು ಗೆದ್ದಿದ್ದರು. ಸಂವಿಧಾನದ ಪ್ರಕಾರ ಅವರು ರಾಷ್ಟ್ರದ ನಾಮಮಾತ್ರಕ್ಕೆ ಮುಖ್ಯಸ್ಥರಾಗಿದ್ದರೂ ಆಗಾಗ ತಮ್ಮ ಸಂಯಮ ಸಹಿತ

ಸತ್ವಭಾವದ ಮೂಲಕ ಸರಕಾರದ ಧೋರಣೆಗಳನ್ನು ತಿದ್ದುವ, ತೀಡುವ ಕೆಲಸ ಮಾಡುತ್ತಿದ್ದರು. ಇಂಥ ಯಾವುದೇ ಸಂದರ್ಭದಲ್ಲಿಯೂ ಸದ್ದುಗದ್ದಲವಿಲ್ಲದೆ, ಯಾವ ಬಾಹ್ಯಾಡಂಬರಕ್ಕೂ ಅವಕಾಶ ಕೊಡದೆ ರಾಷ್ಟ್ರದ ಅತ್ಯುನ್ನತ ಹುದ್ದೆಯ ಘನತೆ ಗೌರವವನ್ನು ಎತ್ತಿ ಹಿಡಿಯುವ, ಕಾಪಾಡುವ ಕೆಲಸ ಮಾಡಿದ್ದರು.

ಭಾರತದ ರಾಜಕೀಯ ಮತ್ತು ಸಾರ್ವಜನಿಕ ಜೀವನಕ್ಕೆ ರಾಜೇನ್ ಬಾಬು ಮಾಡಿದ ಸೇವೆ ನೀಡಿದ ಕಾಣಿಕೆ ಎದ್ದು ಕಾಣುವಂಥವು. ಅವರ ಬುದ್ಧಿ, ಭಾವದ ಸದ್ಗುಣಗಳು ಚಿರಸ್ಮರಣೀಯ. ಆದರಲ್ಲಿಯೂ ವಿಶೇಷವಾಗಿ, ಅವರ ಶ್ರೇಷ್ಠ ಸಂಪರ್ಕ, ಸಾನಿಧ್ಯದಲ್ಲಿ ಒಂದಿಷ್ಟು ಕಾಲ ಕಳೆಯುವ ಅವಕಾಶ ದೊರೆತವರ ಮನದಲ್ಲಿ ಅವರು ಚಿರಸ್ಥಾಯಿಯಾಗಿ ಉಳಿದಿದ್ದಾರೆ. ಅವರು ವಿನಯ, ಸದ್ಗುಣಗಳ ಸಾಕಾರವಾಗಿದ್ದರು. ಅವರಲ್ಲಿ ಅಧಿಕಾರ ಮತ್ತು ಬುದ್ಧಿ, ಪ್ರತಿಷ್ಠೆ ಮತ್ತು ವಿನಯ ಸಮರಸವಾಗಿ ಶ್ರುತಿಗೊಂಡಿದ್ದವು. ಹರಿತ ಬುದ್ಧಿಯ, ಅದ್ಭುತ ಸ್ಮರಣ ಶಕ್ತಿಯ, ಆಂತರಿಕ ಅದ್ವಂದ್ವದ ಪರಿಶುದ್ಧ ಚಾರಿತ್ರ್ಯದ ವ್ಯಕ್ತಿತ್ವ ಅವರದಾಗಿತ್ತು. ಶ್ರದ್ಧೆ , ಸದ್ವಿನಯ ಅವರ ವ್ಯಕ್ತಿತ್ವದ ಮುಖ್ಯಾಂಶಗಳಾಗಿದ್ದವು. ಇದೆಲ್ಲಕ್ಕೂ ಮಿಗಿಲಾಗಿ, ಅವರೊಬ್ಬ ನೈಜ ಮಾನವ ಪ್ರೇಮಿಯಾಗಿದ್ದರು.

ಈ ಎಲ್ಲ ಅಪರೂಪದ ಗುಣಗಳಿಂದಾಗಿ, ಅವರ ವ್ಯಕ್ತಿತ್ವಕ್ಕೆ ಮೇರು ಸದೃಶ ಗುಣ ಬಂದಿತ್ತು. ಹೀಗಾಗಿ ಅವರು ನಿಜವಾಗಿಯೂ ಒಬ್ಬ ರಾಜರ್ಷಿಯಾಗಿದ್ದರು; ಅಜಾತ ಶತ್ರುವಾಗಿದ್ದರು. ರಾಜೇನ್‌ಬಾಬು ಅವರೊಂದಿಗಿನ ಸುಮಾರು ಐದು ದಶಕಗಳ ಕಾಲದ ತಮ್ಮ ಸಹಚರ್ಯವನ್ನು ನೆನಪಿಸಿಕೊಳ್ಳುತ್ತ ಪಂಡಿತ ಜವಾಹರಲಾಲ ನೆಹರೂ ಒಮ್ಮೆ ಹೀಗೆ ಅಭಿಪ್ರಾಯಿಸಿದ್ದರು:

> "ಅವರು ಒಬ್ಬ ಸಾಮಾನ್ಯ ವ್ಯಕ್ತಿಯ ಸ್ತರದಿಂದ ಭಾರತದ ಅತ್ಯುನ್ನತ ಹುದ್ದೆಗೆ ಏರಿದರೂ ಅದು ಅವರ ಬದುಕಿನ ವಿಧಾನದ ಮೇಲೆ ಯಾವುದೇ ಪರಿಣಾಮವನ್ನು ಬೀರಲಿಲ್ಲ. ಅವರೊಬ್ಬ ಮಹಾತ್ಮರಾಗಿದ್ದರೂ ಸರಳತೆ, ಸವಿನಯದ ಮೂರ್ತ ರೂಪದಂತಿದ್ದರು. ಭಾರತದ ಘನತೆ-ಗೌರವವನ್ನು ಹೆಚ್ಚಿಸಿದ ಮಾದರಿಯೊಂದನ್ನು ಅವರು ನಮ್ಮ ಮುಂದೆ ಮಂಡಿಸಿದ್ದಾರೆ....... ನಿಜವೆಂದರೆ, 'ಭಾರತ'ವೆಂಬುದಕ್ಕೆ ಅವರೊಂದು ಸಂಕೇತವಾಗಿದ್ದಾರೆ".

ಧರ್ಮದ ಬಗೆಗಿದ್ದ ಅವರ ನಂಬುಗೆ, ನಿಲುವು, ಅದು ಸಮಾಜದಲ್ಲಿ ಆಡುವ ಪಾತ್ರದ ಕುರಿತು ಅವರಿಗಿದ್ದ ಶ್ರದ್ಧೆ., ಮುಂತಾದವುಗಳನ್ನು ಪ್ರಸ್ತಾಪಿಸದಿದ್ದರೆ ರಾಜೇನ್‌ಬಾಬು ಅವರ ಬಹುಮುಖ ವ್ಯಕ್ತಿತ್ವದ ಚರ್ಚೆ ಅಪೂರ್ಣವಾಗಿಯೇ ಉಳಿಯುತ್ತದೆ. ವಾಸ್ತವವೆಂದರೆ, ರಾಜೇನ್ ಬಾಬು ಒಬ್ಬ ಗಾಢ ಧಾರ್ಮಿಕ ಶ್ರದ್ಧೆಯ ಸಂಪ್ರದಾಯವಾದೀ ಹಿಂದುವಾಗಿದ್ದರು. ಆದರೆ ಧರ್ಮದ ಬಾಹ್ಯ ವಿಧಿವಿಧಾನಗಳಿಗೆ ಜೋತುಬಿದ್ದು ಅವರೆಂದೂ ಪಥ ಭ್ರಷ್ಟರಾಗಲಿಲ್ಲ. ಅವರ ಧಾರ್ಮಿಕ ನಂಬುಗೆಯ ನೆಲೆ ಆಧ್ಯಾತ್ಮಿಕ ಸ್ವರೂಪದ್ದಾಗಿತ್ತೇ ಹೊರತು ಭೌತಿಕ ಸ್ವಭಾವದ್ದಾಗಿರಲಿಲ್ಲ. ಧರ್ಮದ ಸೂಕ್ಷ್ಮರೂಪ ಮನುಷ್ಯನ ಆಂತರಿಕ ಅನುಭವಗಳಿಗೆ ಸಂಬಂಧಿಸಿರುತ್ತದೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಈ ಆಂತರಿಕ ಅನುಭವಗಳೇ ಮಾನವನ ಮನಸ್ಸಿನಲ್ಲಿ ಧಾರ್ಮಿಕ ಶ್ರದ್ಧೆಯ ಉದ್ಭವಕ್ಕೆ ಕಾರಣವಾಗಿರುತ್ತವೆ ಎಂಬುದು ಅವರ ವಾದವಾಗಿತ್ತು. ಧರ್ಮದ ಇನ್ನೊಂದು

ರೂಪವೇ ವ್ಯಕ್ತಿಯ ದೈನಂದಿನ ಬದುಕಿನ ವರ್ತನೆ, ಕ್ರಿಯ ಪ್ರಕ್ರಿಯೆಗಳಲ್ಲಿ ಹೊರ ಹೊಮ್ಮುತ್ತದೆ. ವಿಶಾಲವಾದ ಅರ್ಥದಲ್ಲಿ ಧರ್ಮವೆಂಬುದು ಬದುಕಿನ ಮೂಲ ಸ್ರೋತದ ನಿಗೂಢತೆಗೆ ಮತ್ತು ಆತ್ಮ-ಪರಮಾತ್ಮಗಳ ನಡುವಿನ ಸಂಬಂಧದ ರಹಸ್ಯದ ಖಜಾನೆಗೆ ಕೀಲಿ ಕೈಯಾಗಬಲ್ಲ ಶ್ರದ್ಧೆ, ನಂಬುಗೆಗಳ ಒಂದು ಭಾವ ಸಮುಚ್ಚಯವಾಗಿರುತ್ತದೆ. ಅವರ ದೃಷ್ಟಿಯಲ್ಲಿ ಮಹಾನ್ ದೃಷ್ಟಾರರ ಸಮಚಿತ್ತಕ್ಕೆ ನಿಜವಾದ ನೆಲೆ ಒದಗಿ ಬಂದದ್ದೂ ಧರ್ಮದಿಂದಲೇ. ಅಷ್ಟೇ ಅಲ್ಲ, ಎಲ್ಲ ಸಾಹಿತ್ಯಿಕ ಚಟುವಟಿಕೆಗಳ ಅಂತಿಮ ಗುರಿಯೂ ಧರ್ಮವೇ ಆಗಿರುತ್ತದೆ. ಹೀಗಾಗಿ ಮನುಷ್ಯನ ವೈಯಕ್ತಿಕ ಬದುಕು ಮತ್ತು ಸಾಮಾಜಿಕ ಅಸ್ತಿತ್ವಕ್ಕೆ ಧರ್ಮ ಅವಶ್ಯಕವಷ್ಟೇ ಅಲ್ಲ, ಅನಿವಾರ್ಯವೂ ಹೌದು ಎಂದು ಅವರು ಒತ್ತಿ ಹೇಳಿದ್ದರು.

ಭಾರತದ ಸಂವಿಧಾನದಲ್ಲಿ ಧಾರ್ಮಿಕ ಸ್ವಾತಂತ್ರ್ಯ, ನಂಬುಗೆ, ಆರಾಧನೆಯ ಸ್ವಾತಂತ್ರ-ಮುಂತಾದ ಶ್ರದ್ಧೆಗೆ ಸಂಬಂಧಿಸಿದ ನಾಗರಿಕರ ಮೂಲಭೂತಹಕ್ಕುಗಳನ್ನು ಅಡಕಗೊಳಿಸಿದ್ದು ರಾಜೇನ್ ಬಾಬು ಅವರಿಗೆ ಬಹು ಹೆಮ್ಮೆಯ ಸಂಗತಿಯಾಗಿತ್ತು. ಇದಕ್ಕೆ ಕಾರಣವೆಂದರೆ, ನಮ್ಮ ಪೂರ್ವಜರಾಗಿದ್ದ ಅನೇಕ ಸಂತರು, ಫಕೀರರು ಮತ್ತು ಇತರ ಧಾರ್ಮಿಕ ನೇತಾರರು ಚರಿತ್ರೆಯ ಆದಿಯಿಂದಲೂ ಸಹನೆ ಸಹಬಾಳ್ವೆಯ ಆದರ್ಶಗಳನ್ನೂ, ಇತರರ ಧರ್ಮಶ್ರದ್ಧೆಗಳ ಬಗ್ಗೆ ತೋರಬೇಕಾದ ಗೌರವದ ನಿಲುವನ್ನೂ ಪ್ರತಿಪಾದಿಸುತ್ತ ಬಂದಿದ್ದರು. ನಾವು ಜಾತ್ಯಾತೀತ ಧರ್ಮನಿರಪೇಕ್ಷವಾದ ಪ್ರಭುತ್ವವನ್ನು ಕಟ್ಟಿಕೊಂಡಿದ್ದೇವೆ; ಆದ್ದರಿಂದ ನಮಗೆ ಯಾವುದೇ ಧರ್ಮ ಅಥವಾ ಆಧ್ಯಾತ್ಮಿಕ ಮೌಲ್ಯಗಳಲ್ಲಿ ನಂಬುಗೆಯಿಲ್ಲ ಎಂಬ ಪ್ರಶ್ನೆಯನ್ನು ಕೆಲವರು ಆಗಾಗ ಎತ್ತುತ್ತಿದ್ದುದುಂಟು. ಅಂಥವರಿಗೆ ಅವರು ಹೇಳುತ್ತಿದ್ದರು: "ಇದು ಸತ್ಯಕ್ಕೆ ದೂರವಾದದ್ದು. ಅದಕ್ಕೆ ತದ್ವಿರುದ್ಧವಾಗಿ, ವಾಸ್ತವದಲ್ಲಿ ಅದರ ಅರ್ಥವೆಂದರೆ, ಈ ದೇಶದಲ್ಲಿ ಪ್ರತಿಯೊಬ್ಬರೂ ತಮಗೆ ಇಷ್ಟವಾದ ಧರ್ಮಶ್ರದ್ಧೆಗಳನ್ನು ಉದ್ಘೋಷಿಸುವ ಅಥವಾ ಉಪದೇಶಿಸುವ ಸ್ವಾತಂತ್ರ್ಯ ಪಡೆದಿದ್ದಾರೆ. ಎಲ್ಲ ಧರ್ಮಗಳಿಗೂ ನಾವು ಸಮಾನ ಒಳಿತು ಬಯಸುವೆವು. ಅವೆಲ್ಲವೂ ಯಾವುದೇ ಅಡ್ಡಿ-ಅಡಚಣೆಗಳಿಲ್ಲದೆ ತಮ್ಮದೇ ರೀತಿಯಲ್ಲಿ ಸುಪುಷ್ಟವಾಗಿ ಬೆಳೆಯಲು ಅವಕಾಶ ಮಾಡಿಕೊಡುವದೇ ನಮ್ಮ ಹಿರಿಯಾಶೆಯಾಗಿದೆ."

ಪ್ರಗಾಢ ಧಾರ್ಮಿಕ ಶ್ರದ್ಧೆಯ ವ್ಯಕ್ತಿಯಾಗಿದ್ದ ರಾಜೇನ್ ಬಾಬು, ಒಬ್ಬ ವ್ಯಕ್ತಿಯ ಧರ್ಮಾಚರಣೆಗೆ ಸಂಬಂದಿಸಿದಂತೆ ಯಾವುದೇ ಕಟ್ಟುಪಾಡುಗಳನ್ನು ಹೇರಬಯಸುವುದಿಲ್ಲ. ಇದನ್ನು ಅವರು ಈ ಕೆಳಗಿನ ಮಾತುಗಳಲ್ಲಿ ಸ್ಪಷ್ಟಪಡಿಸಿದ್ದಾರೆ:

"ಅನಾದಿ ಕಾಲದಿಂದಲೂ ಮನುಷ್ಯನ ಸಂಘಟಿತ ಹಾಗೂ ನಿಯಂತ್ರಿತ ಬದುಕಿಗೆ ಕಾರಣೀಭೂತವಾದ ಎಲ್ಲಾ ವಿಧಿ ನಿಷೇಧಗಳಿಂದ, ಸಾಮಾಜಿಕ ಕಟ್ಟುಪಾಡುಗಳಿಂದ ಮನುಷ್ಯ ಸಂಪೂರ್ಣವಾಗಿ ಮುಕ್ತನೆಂದು ಬಗೆಯಬೇಕೆಂದು ಇದರ ಅರ್ಥವಲ್ಲ. ಈ ವಿಧಿ-ನಿಷೇಧ, ಕಟ್ಟುಪಾಡುಗಳೇ ಮುಂತಾದ ನಿಯಂತ್ರಕಗಳು ವ್ಯಕ್ತಿಯ ಬೆಳವಣಿಗೆಗೆ ಎಂತೋ, ಅಂತೆಯೇ ಆದರ್ಶ ಸಾಮಾಜಿಕ ವ್ಯವಸ್ಥೆಯ ವಿಕಾಸಕ್ಕೂ ಅನಿವಾರ್ಯವಾಗಿರುತ್ತವೆ. ಅಂದರೆ ಯಾವೊಬ್ಬ ವ್ಯಕ್ತಿ ಅಥವಾ ಸಮಾಜವು ಇತರ ವ್ಯಕ್ತಿಗಳ ಅಥವಾ ಸಮಾಜದ ಮೇಲೆ ಸವಾರಿ ಮಾಡಬಾರದು; ಅವುಗಳನ್ನು ತೊತ್ತಳ ತುಳಿಯುವ ಸಾಹಸಕ್ಕೆ ಕೈಹಾಕಬಾರದು. ಬದಲಾಗಿ, ಪ್ರತಿಯೊಬ್ಬನ ಬೆಳವಣಿಗೆಗೂ ಮುಕ್ತ ಅವಕಾಶ ದೊರೆಯುವಂತಾಗಬೇಕು. ಪ್ರತಿಯೊಬ್ಬ ವ್ಯಕ್ತಿ ಮತ್ತು ಪ್ರತಿಯೊಂದು

ಸಮಾಜ ಇತರರ ಭಾವನೆ, ಹಿತಾಸಕ್ತಿಗಳಿಗೆ ಗೌರವ ತೋರುವುದನ್ನು ಕಲಿತಾಗ ಮಾತ್ರ ಅದು ಸಾಧ್ಯವಾಗುತ್ತದೆ. ಮತ್ತೊಬ್ಬರ ಮೇಲಿನ ದಬ್ಬಾಳಿಕೆಯು ನ್ಯಾಯಸಮ್ಮತ ತತ್ವಗಳಿಗೆ ವಿರುದ್ಧವಾದುದಷ್ಟೇ ಅಲ್ಲ, ಅದು ಒಬ್ಬ ವ್ಯಕ್ತಿಯ ಸ್ವಂತದ ಹಿತಾಸಕ್ತಿಗೂ ಅಸಂಬದ್ಧವಾಗಿರುತ್ತದೆ. ಈ ರೀತಿಯಾಗಿ ಮಾತ್ರ ನೈಜ ಪ್ರೇಮದ ಭಾವ ಬಂಧುರತೆ, ಸಹನೆ ಸಹಿಷ್ಣುತೆಗಳನ್ನು ಸೃಷ್ಟಿಸಬಹುದು. ಇವುಗಳ ವಿನಃ ವ್ಯಕ್ತಿ ಮತ್ತು ಸಮಾಜದಲ್ಲಿ ನಿಜವಾದ ಶಾಂತಿ ಸಂತೋಷಗಳು ನೆಲೆಗೊಳ್ಳಲಾರವು. ಪ್ರತಿಯಾಗಿ ಅವು ಎಂದೂ ಕೈಗೆಟುಕದ ಮರೀಚಿಕೆಗಳಾಗಿಯೇ ಉಳಿಯುತ್ತವೆ."

ರಾಜೇನ್ ಬಾಬು ಭಾರತದ ವೈವಿಧ್ಯತೆಯ ಬಗ್ಗೆ ಸಂಪೂರ್ಣವಾಗಿ ಅರಿತವರಾಗಿದ್ದರು. ಭಾರತದಲ್ಲಿ 15-16 ಪ್ರಮುಖ ಆಡು ಭಾಷೆಗಳಿವೆಯೆಂಬುದು ಅವರಿಗೆ ಗೊತ್ತಿತ್ತು. ಜೊತೆಗೆ ದೇಶದ ವಿಶಾಲ ಉದ್ದಗಲಕ್ಕೂ ಬಹುದೊಡ್ಡ ಸಂಖ್ಯೆಯ ಭಾಷಾ-ಪ್ರಭೇದಗಳು ಅಸ್ತಿತ್ವದಲ್ಲಿದ್ದದ್ದೂ ಅವರಿಗೆ ಚೆನ್ನಾಗಿ ಗೊತ್ತಿತ್ತು. ಬಾರತದಲ್ಲಿ ಮಿಲಿಯಾಂತರ ಜನ ಅನುಯಾಯಿಗಳನ್ನು ಹೊಂದಿರುವ ಜಗತ್ತಿನ ಎಲ್ಲ ಧರ್ಮಗಳೂ ಇಲ್ಲಿವೆ. ನಮ್ಮದು "ಒಂದು ಸಂಕೀರ್ಣ ಸಂಸ್ಕೃತಿ. ಅದು ತಮ್ಮ ಸಂಪರ್ಕಕ್ಕೆ ಬಂದವರಿಂದ ಪ್ರಭಾವಿತವಾಗಿದೆ. ಪ್ರಭಾವಿಸಿದೆ. ಈ ದೇಶ, ವಿದೇಶೀಯರಿಗೆ ಎಂದೂ ತನ್ನ ಬಾಗಿಲನ್ನು ಮುಚ್ಚಿಕೊಂಡಿಲ್ಲ: ನಮ್ಮ ಇಡೀ ಚರಿತ್ರೆಯಲ್ಲಿ ನಾವು ಎಂದೂ ಇನ್ನೊಂದು ರಾಷ್ಟ್ರದ ಮೇಲೆ ದುರಾಕ್ರಮಣದ ಸಂಗ್ರಾಮ ಸಾರಿಲ್ಲ. ನಮ್ಮ ಮೇಲೆಯೇ ಅನೇಕ ದಾಳಿಗಳು ನಡೆದಿವೆಯಾದರೂ ನಾವೆಂದೂ ಯಾರ ಮೇಲೂ ದಾಳಿಯಿಟ್ಟಿಲ್ಲ." 1947 ಆಗಸ್ಟ್ 14 ರಂದು ತ್ರಿವೇಂದ್ರಂನಲ್ಲಿ ಹುತಾತ್ಮರ ಸ್ತಂಭ ಅನಾವರಣಗೊಳಿಸಿ ರಾಜೇನ್ ಬಾಬು ಆಡಿದ ಮಾತುಗಳು ಗಮನಾರ್ಹವಾಗಿವೆ:

> " ಭಾರತ ಅನೇಕ ಸಂಸ್ಕೃತಿ ಭಾಷೆ ಧರ್ಮಗಳ ಬದುಕಿನ, ರೀತಿ ನೀತಿಗಳ ಒಂದು ಸಮುಚ್ಚಯವಾಗಿದೆ. ತೋರಿಕೆಗೆ ಕಾಣುವ ಈ ವಿವಿಧತೆಯಲ್ಲಿ ಏಕತೆಯ ಸೂತ್ರವೊಂದು ಕಾಣಸಿಗುತ್ತದೆ. ಈ ವೈವಿಧ್ಯಮಯ ಸಂಗತಿಗಳನ್ನು ಮೀರಿ ಏಕತ್ರಗೊಂಡ ವಾಸ್ತವವೊಂದು ತನಗೆದುರಾದ ಎಲ್ಲ ಸಂಕಟಗಳನ್ನು ದಾಟುತ್ತ ಇವತ್ತಿಗೂ ಉಳಿದು ಬಂದಿರುವುದನ್ನು ನೋಡುತ್ತೇವೆ. ನಿಸರ್ಗ ಮತ್ತು ಮನುಷ್ಯ ಸೃಷ್ಟಿಸಿದ ಎಲ್ಲ ಎಡರು ತೊಡರುಗಳನ್ನು ದಾಟಿ ಬಂದ ಈ ದೇಶದ ಏಕತೆಯ ಸೂತ್ರ ಅದ್ಭುತವಾದದ್ದು. ಭಾರತದಂಥ ಬೃಹತ್ ರಾಷ್ಟ್ರದಲ್ಲಿ ಇಂಥ ವೈವಿಧ್ಯತೆ ಅಸ್ತಿತ್ವದಲ್ಲಿರುವದು ಆಶ್ಚರ್ಯದ ಮಾತೇನಲ್ಲ. ಇಂದಿನ ನಮ್ಮ ಒಟ್ಟು ಜನಸಂಖ್ಯೆ ರಶಿಯಾವನ್ನುಳಿದು ಇಡೀ ಯೂರೋಪ್ ಖಂಡದ ಜನಸಂಖ್ಯೆಗೆ ಸಮಾನವಾಗಿರುವುದನ್ನು ನೆನೆಸಿಕೊಂಡರೆ, ಈ ದೇಶದ ವೈವಿಧ್ಯತೆ ಮತ್ತು ಏಕತೆಯ ಮಹತ್ತು ಅರ್ಥವಾಗಬಲ್ಲದು. ಒಂದರಿಂದ ಮತ್ತೊಂದು ಭಿನ್ನವಾಗಿ ಪ್ರತ್ಯೇಕಗೊಂಡ, ಪರಸ್ಪರ ಬಿರುಕಿಗೆ ಅವಕಾಶಕೊಟ್ಟ ಅನೇಕ ರಾಷ್ಟ್ರಗಳು ಯೂರೋಪಿನಲ್ಲಿವೆ. ನಾವೆಂದೂ ನೂರು ವರ್ಷ ಅಥವಾ ಮೂವತ್ತು ವರ್ಷ ಅಥವಾ ಏಳು ವರ್ಷದ ಯುದ್ಧದಲ್ಲಿ ತೊಡಗಲಿಲ್ಲ. ಆಗಾಗ ನಮ್ಮನಮ್ಮೊಳಗೇ ಬಡಿದಾಡಿದ್ದುಂಟು. ಆದರೆ ಈ ಕಾದಾಟ ಯೂರೋಪಿನ ಯುದ್ಧಗಳಷ್ಟು ವಿಧ್ವಂಸನಕಾರಿಯಾಗಿರಲ್ಲ. ರಾಜಕೀಯ ಭಿನ್ನವಿಭಿನ್ನತೆಯ ಹೊರತಾಗಿಯೂ ನಮ್ಮ ಜನತೆಯ ಸಾಂಸ್ಕೃತಿಕ ಬದುಕು ನಿರಂತರವಾಗಿ ಮುಂದರಿಯುತ್ತ ಬಂದಿದೆ. ಯಾವ ತೊಡರು ತೊಡಕುಗಳೂ ಅದರ ಮುನ್ನಡೆಗೆ ಅಡ್ಡಿಯಾಗಿಲ್ಲ. ಈ ಮಹಾನ್ ಐಕ್ಯತೆ ಸಾಧ್ಯವಾಗಿರುವುದಕ್ಕೆ ಕಾರಣ:ಅನಾದಿಕಾಲದಿಂದಲೂ ನಮ್ಮ ಜನತೆ ಪರಸ್ಪರ ತೋರಿದ ತಾಳ್ಮೆ ಆಧುನಿಕ ಭಾಷೆಯಲ್ಲಿ ಹೇಳುವುದಾದರೆ, ಸಹಬಾಳುವೆಯ ಸಹಿಷ್ಣುತೆ ಮತ್ತು 'ಜೀವಿಸಿರಿ ಜೀವಿಸಲು ಅವಕಾಶ ಮಾಡಿಕೊಡಿ' ಎಂಬ ತತ್ವವನ್ನು ಹೃದ್ಗತ ಮಾಡಿಕೊಂಡದ್ದು."

ನಮ್ಮ ಪ್ರಾಚೀನ ಜನತೆಯ ಕುರಿತು ಮಾತಾಡುತ್ತ ರಾಜೇನ್ ಹೇಳಿದ್ದು:"ಅವರು ಸಂಯಮ ಸಮಭಾವಕ್ಕೆ ಹೆಸರಾಗಿದ್ದರು; ಅವರು ಭೌತಿಕ ಬದುಕಿನ ಭೋಗ ಭಾಗ್ಯದ ಆಕರ್ಷಣೆಗಳ ಸಮ್ಮುಖದಲ್ಲಿ ಬದುಕಿನ ಆಧ್ಯಾತ್ಮಿಕ ಆಯಾಮವನ್ನು ನಿರ್ಲಕ್ಷಿಸಲಿಲ್ಲ. ಅಂತೆಯೇ ಆಧ್ಯಾತ್ಮಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಭರದಲ್ಲಿ ಐಹಿಕ ಬದುಕಿನ ಅವಶ್ಯಕತೆಗಳನ್ನು ಅಲಕ್ಷಿಸಲಿಲ್ಲ. ಬದುಕಿನ ಈ ಎರಡೂ ಆಯಾಮಗಳನ್ನು ಸಮರಸವಾಗಿ ಹೊಸೆದು ಸಂಶ್ಲೇಷಿಸುವ ಗುರಿ ಯತ್ನ ಅವರದಾಗಿದ್ದವು. ಅವರು ಇದರಲ್ಲಿ ತಕ್ಕ ಮಟ್ಟಿನ ಯಶಸ್ಸನ್ನು ಸಾಧಿಸಿದ್ದರು." ನಿಜವಾಗಿಯೂ ಪ್ರವಾದೀ ವಾಣಿಯಂತಿವೆ. ಆದ್ದರಿಂದ ಈ ಸಾಮರಸ್ಯ ಮತ್ತು ಸಂಶ್ಲೇಷಣೆಯ ಭಾವವನ್ನು ಮತ್ತೊಮ್ಮೆ ಉಜ್ಜೀವನಗೊಳಿಸಿ ತನ್ಮೂಲಕ ಸಮೃದ್ಧ ಭಾರತದ ನಿರ್ಮಾಣಕ್ಕೆ ನೆಲೆಯೊದಗಿಸುವುದು ಜೊತೆಗೆ ನಮ್ಮ ಜನತೆಯ ನೈತಿಕ ಮಟ್ಟವನ್ನು ಎತ್ತರಿಸುವುದು ಅಪೇಕ್ಷಣೀಯವಲ್ಲವೇ?

ಇನ್ನೊಂದು ಸಂದರ್ಭದಲ್ಲಿ ರಾಜೇನ್ ಬಾಬು ಹೇಳಿದ ಮಾತುಗಳಿವು: "ಪರರ ಆಸಕ್ತಿ ಅನಿಸಿಕೆಗಳಿಗೆ ನಾವು ತೋರುತ್ತಿದ್ದ ಸಹನೆಯೇ ನಮ್ಮ ದೇಶದಲ್ಲಿ ಇಷ್ಟು ವೈವಿಧ್ಯಮಯವಾದ ಚಿಂತನ ಕ್ರಮಗಳು, ದಾರ್ಶನಿಕ ಪ್ರಭೇದಗಳು ಅಂಕುರಿಸಿ ಅರಳಲು ಸಾಧ್ಯವಾಗಿಸಿದೆ. ಈ ಎಲ್ಲ ಚಿಂತನ ವಿಧಾನ ಮತ್ತು ತತ್ವಗಳು ಅನೇಕ ಸಲ ಪರಸ್ಪರ ವಿರುದ್ಧವಾಗಿದ್ದವು. ತಾರ್ಕಿಕವಾಗಿ ವಿಭಿನ್ನ ನೆಲೆಯುಳ್ಳವಾಗಿದ್ದವು. ಹೀಗಿದ್ದೂ ಅವುಗಳ ಪ್ರಸಾರ, ಪೋಷಣೆಗೆ ಯಾವುದೇ ಚ್ಯುತಿಯುಂಟಾಗಲಿಲ್ಲ. "ಈ ಎಲ್ಲ ಚಿಂತನ ಪಂಥಗಳ ಸಂಸ್ಥಾಪಕರನ್ನು ನಾವು ಋಷಿಗಳೆಂದು ಮನ್ನಿಸಿ ಮರ್ಯಾದಿಸುತ್ತೇವೆ. ಅಷ್ಟೇ ಅಲ್ಲ, ಕೆಲವೊಮ್ಮೆ ಅವರನ್ನು ದೈವೀಕರಿಸಿದ್ದೂ ಉಂಟು......... ಈ ಸಾಮರಸ್ಯಕ್ಕೆ ಒಂದು ಅದ್ಭುತ ನಿದರ್ಶನವೆಂದರೆ, ಆಧುನಿಕ ಭಾರತದಲ್ಲಿ ಬೌದ್ಧ ಧರ್ಮ ಸಾಂಸ್ಥಿಕ ರೂಪದಲ್ಲೆಲ್ಲೂ ಕಾಣಸಿಗದು. ಆದರೆ ಭಗವಾನ್ ಬುದ್ಧನ ತತ್ವದರ್ಶಗಳು ನಮ್ಮ ಬದುಕಿನ ಹಾಸು ಹೊಕ್ಕಾಗಿವೆ; ಪ್ರತಿಯೊಬ್ಬ ಹಿಂದೂವಿನ ವ್ಯಕ್ತಿತ್ವದ ಅವಿಭಾಜ್ಯ ಅಂಗಗಳಾಗಿವೆ." ಅವರು ಮುಂದುವರೆದು ಹೇಳುತ್ತಾರೆ: "ನಮ್ಮ ಇಂದಿನ ರಾಜಕೀಯ ತತ್ವವಾದ ಪಂಚಶೀಲ ಇದೇ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯ ಸಹಜ ಬೆಳವಣಿಗೆಯಾಗಿದೆ. ಮೇಲಾಗಿ, ಇದು ನಮಗೆ ಕೇವಲ ಒಂದು ರಾಜಕೀಯ ಸೂತ್ರವಾಗಿರದೆ, ನಮ್ಮ ಸಕ್ರಿಯ ಶ್ರದ್ಧೆಯ ಜೀವ ಜೀವಾಳವಾಗಿದೆ. ಅಷ್ಟೇ ಅಲ್ಲ, ನಮ್ಮ ಇಂದಿನ ಆಸಕ್ತಿಯ ಮಹತ್ವದ ಭಾಗವಾಗಿದೆ; ನಮ್ಮ ಸಹಬಾಳ್ವೆಯ ತತ್ವವನ್ನು ನಿರೂಪಿಸುವ, ನಿರ್ದೇಶಿಸುವ ಸೂತ್ರವೂ ಆದಾಗಿದೆ."

ರಾಜೇನ್ ಬಾಬು ಒಬ್ಬ ಮಹಾನ್ ದೇಶಭಕ್ತರಾಗಿದ್ದರು; ನಿಜವಾದ ಅರ್ಥದಲ್ಲಿ ರಾಜರ್ಷಿಯಾಗಿದ್ದರು. ಅವರ ಈ ಮಾತುಗಳು ಮನನೀಯವಾಗಿವೆ:

"ನಾವು ನಮ್ಮ ಸಮೃದ್ಧಿ ಶ್ರೇಯೋಭಿವೃದ್ಧಿಯನ್ನು ಬಯಸುತ್ತೇವೆ, ಆದರೆ ಮತ್ತೊಬ್ಬರ ಸಮೃದ್ಧಿಯನ್ನು ಬಲಿಗೊಡುವ ಮೂಲಕವಲ್ಲ. ನಾವು ನಮ್ಮ ಏಳ್ಗೆಯನ್ನು ಬಯಸುತ್ತೇವೆ, ಆದರೆ ಮತ್ತೊಬ್ಬರನ್ನು ನಿರ್ನಾಮ ಮಾಡಿ ಅಲ್ಲ. ನಾವು ಪ್ರಗತಿಯನ್ನು ಬಯಸುತ್ತೇವೆ, ಆದರೆ ಮತ್ತೊಬ್ಬರನ್ನು ದುರ್ಗತಿಗೆ ತಳ್ಳುವ ದುರ್ದಾಳಿಯ ಮೂಲಕವಲ್ಲ. ನಾವು ಸ್ವತಂತ್ರರಾಗಿರಬಯಸುತ್ತೇವೆ, ಜೊತೆಗೆ ಎಲ್ಲರ ಸ್ವಾತಂತ್ರ್ಯವೂ ಸಾಧ್ಯವಾಗುವಂತೆ ಎಚ್ಚರವಹಿಸಬಯಸುತ್ತೇವೆ.ಇದುವೇ ಅಹಿಂಸಾ ತತ್ವದ ಪರಮಾರ್ಥವಾಗಿದೆ. ಇಂಥ ಅಹಿಂಸಾ ತತ್ವವೇ ನಮ್ಮ ಇಡೀ ಸಂಸ್ಕೃತಿ ಮತ್ತು ಬದುಕಿನ ಭದ್ರ ನೆಲೆಯಾಗಿದೆ. ರಾಜಕೀಯ, ಧಾರ್ಮಿಕ ಮತ್ತು ನೈತಿಕ ವಿಚಾರಧಾರೆಗೆ, ಅಷ್ಟೇಯೇಕೆ, ಇಡೀ ಜಗತ್ತಿಗೆ ನಾವು ನೀಡಿದ ಮಹತ್ತರ ಕಾಣಿಕೆ ಇವು ಆಗಿವೆ."

## 'ದೇಶರತ್ನ' ಡಾ|| ರಾಜೇಂದ್ರ ಪ್ರಸಾದ್

## ಸತ್ಯ ಹಾಗೂ ಸರಳತೆಯ ಒಂದು ವಿರಳ ಉದಾಹರಣೆ

-ಭಗವತ್ ಝಾ ಅಜಾದ್*

ಯಾವುದೇ ಒಂದು ದೇಶದ ವಿಷಯದಲ್ಲಷ್ಟೇ ಅಲ್ಲ, ಇಡೀ ಜಗತ್ತಿನ ವಿಷಯದಲ್ಲಿಯೂ ಹೇಳಬಹುದಾದ ಒಂದು ಸಂಗತಿಯೆಂದರೆ, ಭೌತಿಕ ಸಂಪತ್ತಿಗಿಂತಲೂ ಬೌದ್ಧಿಕ ಮತ್ತು ಸಾಂಸ್ಕೃತಿಕ ಬಳುವಳಿಯೇ ಹೆಚ್ಚು ಮಹತ್ವದ್ದು. ಈ ಸಂದರ್ಭದಲ್ಲಿ ಭಾರತ ಗಣರಾಜ್ಯದ ಪ್ರಥಮ ರಾಷ್ಟ್ರಪತಿ ದೇಶರತ್ನ ಡಾ|| ರಾಜೇಂದ್ರ ಪ್ರಸಾದ್ ನೆನಪು ಅವರು ಅನುಸರಿಸಿದ ಅನೇಕ ವಿಧಾಯಕ ಮಾರ್ಗಗಳನ್ನು ನಮ್ಮ ಮುಂದೆ ಸಾದರ ಪಡಿಸುತ್ತದೆ. ಉದಾತ್ತ ಸೇವಾಭಾವದ ಮೌಲ್ಯಗಳು, ಸಮರ್ಪಣೆಯ ನಿಲುವು, ಸಾಧುವಿನಯ ಅವರ ವ್ಯಕ್ತಿತ್ವವನ್ನು ರೂಪಿಸಿದ ಸಂಗತಿಗಳಾಗಿದ್ದವು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನಮ್ಮ ಜನತೆ ತಮ್ಮ ಮಾರ್ಗದರ್ಶನಕ್ಕಾಗಿ ಡಾ|| ರಾಜೇಂದ್ರ ಪ್ರಸಾದರಂಥ ಉಜ್ವಲ ವ್ಯಕ್ತಿಯ ಅಮೂಲ್ಯಮಾರ್ಗದರ್ಶನ ಪಡೆದದ್ದು ಅವರ ಭಾಗ್ಯ ವಿಶೇಷ. ಅಂತೆಯೇ ಅವರ ಸೇವೆ ಪಡೆದ ನಮ್ಮ ರಾಷ್ಟ್ರವೂ ಸುದೈವೀ ಎಂದೇ ಹೇಳಬೇಕು. ಡಾ|| ರಾಜೇಂದ್ರ ಪ್ರಸಾದರನ್ನು ಪ್ರಥಮ ರಾಷ್ಟ್ರಪತಿಯಾಗಿ ಪಡೆದದ್ದು ನಮ್ಮ ರಾಷ್ಟ್ರಕ್ಕೆ ದೊರೆತ ದಿವ್ಯ ಆಶೀರ್ವಾದವಾಗಿತ್ತು. ಬುದ್ಧಿ ಭಾವದ ಎದ್ದು ಕಾಣುವ ಗುಣಗಳ ಸಾಕಾರವಾಗಿದ್ದ ಅವರು ನಮ್ಮ ರಾಷ್ಟ್ರದ ಗೊತ್ತುಗುರಿಗಳನ್ನು ಹತ್ತು - ಹನ್ನೆರಡುವರ್ಷಗಳವರೆಗೆ ರೂಪಿಸಿದ, ನಿರೂಪಿಸಿದ ವಿಧಾತರಾಗಿದ್ದರು.

ಡಾ|| ರಾಜೇಂದ್ರ ಪ್ರಸಾದರು ಭಾರತೀಯ ಸಂಸ್ಕೃತಿಯ ಸತ್ವಸಾರವಾಗಿರುವ ಸತ್ಯ ಸರಳತೆ ಮತ್ತು ಔದರ್ಯದಂಥ ಶ್ರೇಷ್ಠ ಗುಣಗಳ ಮಾರ್ತರೂಪವಾಗಿದ್ದರು ಮಹಾನ್ ಕವಿಯತ್ರಿ ಮಹಾದೇವಿ ವರ್ಮಾ ಡಾ|| ಪ್ರಸಾದರ ಸರಳತೆಯುನ್ನು ಸ್ಮರಿಸಿಕೊಳ್ಳುತ್ತ ಆಡಿದ ಮಾತುಗಳಿವು:

> "ಡಾ|| ಬಾಬು ರಾಜೇಂದ್ರ ಪ್ರಸಾದರು ಒಬ್ಬ ನೈಜ ಭಾರತೀಯರಾಗಿದ್ದರು. ಹೊರನೋಟದಲ್ಲಷ್ಟೇ ಅಲ್ಲ, ಅವರ ಒಳ ವ್ಯಕ್ತಿತ್ವವೂ ಅಪ್ಪಟ ಭಾರತೀಯನದಾಗಿತ್ತು. ಆದ್ದರಿಂದಲ್ಲೇ ಅವರನ್ನು ಮೊದಲಬಾರಿಗೆ ನೋಡಿದ ಯಾವುದೇ ವ್ಯಕ್ತಿಗೆ ಅವರನ್ನು ಹಿಂದೊಮ್ಮೆ ಎಲ್ಲಿಯೋ ನೋಡಿದಂತೆ ಭಾಸವಾಗುತ್ತಿತ್ತು. ನೋಟ ಊಟ ಉಡಿಗೆಗಳಲ್ಲಿ ಅವರು ಒಬ್ಬ ಸಾಮಾನ್ಯ ಭಾರತೀಯನನ್ನು ವಿಶೇಷವಾಗಿ, ಭಾರತೀಯ ರೈತನನ್ನು ಹೋಲುತ್ತಿದ್ದರು. ಆದರೆ ಅವರ ಪ್ರತಿಭಾಸಂಪನ್ನವಾದ ಸಂವೇದನಾಶೀಲತೆ ಮತ್ತು ತೀಕ್ಷಣ ಮತಿಯಿಂದಾಗಿ, ಅವರು ಸಾಮಾನ್ಯ ಜನರಿಗಿಂತ ಭಿನ್ನವಾಗಿ ತೋರುತ್ತಿದ್ದರು ಹೃದಯ ವೈಶಾಲ್ಯ ಸರಳತೆಯ ಅವಶ್ಯಕಾಂಗವಾಗಿದ್ದರು."

ಇಂದು 'ನೇತಾ', 'ಸೇವೆ' ಮುಂತಾದ ಶಬ್ದಗಳು ತಮ್ಮ ಸುವಿರೂಪಿತ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಪ್ರಾಚೀನ ಭಾರತದ ಮೂಲಭೂತ ಮೌಲ್ಯಗಳ ದೃಷ್ಟಿಯಿಂದ ಒಬ್ಬ ನಿಜವಾದ

* ಶ್ರೀ ಭಾಗವತ್ ಝಾ ಅಜಾದ್ ಕೇಂದ್ರದ ಮಾಜಿ ಮಂತ್ರಿಗಳು ಹಾಗೂ ಬಿಹಾರಿನ ಮುಖ್ಯ ಮಂತ್ರಿಗಳು

ಭಾರತೀಯನನ್ನು ಪ್ರತಿಬಿಂಬಿಸುವ ವ್ಯಕ್ತಿತ್ವವನ್ನು ಪಡೆದವನು ಮಾತ್ರ ಒಬ್ಬ 'ನೇತಾರ' ನಾಗಲು ಸಾಧ್ಯ ಒಬ್ಬ ನಿಜವಾದ ರಾಷ್ಟ್ರೀಯವಾದಿಯಾಗಿ ಅವನಲ್ಲಿ ತನ್ನ ತಾಯ್ನಾಡಿನ ಬಗ್ಗೆ, ಸಮೃದ್ಧ ನಿಸರ್ಗ ಸಂಪನ್ಮೂಲಗಳಿಂದೊಡಗೂಡಿದ ತಾಯ್ನಾಡಿನ ಬಗ್ಗೆ, ಅಪಾರ ಗೌರವ ಪ್ರೀತಿ ಇರಬೇಕು. (ಸುಜಲಾಂ ಸುಫಲಾಂ ಸಸ್ಯಶಾಮಲ ಮಾತರಂ).

ರಾಷ್ಟ್ರ ನಿರ್ಮಾಣದ ಪ್ರಕ್ರಿಯೆಯಲ್ಲಿ ಡಾ।। ಪ್ರಸಾದರು ನಿರ್ವಹಿಸಿದ ಪಾತ್ರ ಚರಿತ್ರರ್ಹವಾದುದ್ದು. ಬಹುಮುಖಿಯಾದದ್ದು. ತನ್ನ ಸುಪುತ್ರರೆಲ್ಲ ಸಮರ್ಪಣಾಭಾವದಿಂದ ಸೇವೆಗೈಯಲು ಟೊಂಕ ಕಟ್ಟಿ ನಿಲ್ಲಬೇಕೆಂದು ತಾಯಿ ಭಾರತಿ ಅಪೇಕ್ಷಿಸಿದಾಗ ಡಾ।। ಪ್ರಸಾದರು ಅದೊಂದು ಪವಿತ್ರ ಕಾರ್ಯಭಾರವೆಂದು ಪರಿಗಣಿಸಿ ರಾಷ್ಟ್ರಸೇವೆಗೆ ನಿಂತು. ಆ ದಾರಿಯಲ್ಲಿ ಪರಮೋನ್ನತ ಪ್ರಯತ್ನಗಳನ್ನು ಮಾಡಿದ್ದುಂಟು ಭಾರತದ ಸಂವಿಧಾನವನ್ನು ರಚಿಸಲು ಡಾ।। ಪ್ರಸಾದರು ನೀಡಿದ ಕಾಣಿಕೆಯಿಂದ ಅವರ ವ್ಯಕ್ತಿತ್ವದ ಸ್ವರೂಪವನ್ನು ಅಳೆಯಬಹುದು. ಅವರ ಅಧ್ಯಕ್ಷಿಯ ಭಾಷಣಗಳಲ್ಲಿ ಅವರು ಯಾವಾಗಲೂ ಜನತೆ ಅಹಿಂಸೆ ಶಾಂತಿ ಮತ್ತು ಸ್ನೇಹದ ಮಾರ್ಗ, ಮೌಲ್ಯಗಳನ್ನು ಅನುಸರಿಸಬೇಕೆಂದು ಕರೆ ಕೊಡುತ್ತಿದ್ದರು. ಬುದ್ಧ ಅಶೋಕರ ನಾಡಿನಿಂದ, ಮಾನವತೆಯ ಸ್ವಾತಂತ್ರ್ಯಕ್ಕಾಗಿ ಕರೆಕೊಟ್ಟ ಮೊದಲ ವ್ಯಕ್ತಿ ಅವರಾಗಿದ್ದರು. ಮನುಷ್ಯ ವಿನಾಶದ ಭೀತಿಯನ್ನು ಕಳೆದುಕೊಂಡು, ದ್ವೇಷ ಅಸೂಯೆಯಿಂದ ದೂರಾಗಿ, ಈ ಗೃಹವನ್ನು ಹಿಂಸೆಯಿಂದ, ಭಯದಿಂದ ಮುಕ್ತಮಾಡಲು ಅವರು ಮನವಿ ಸಲ್ಲಿಸುತಿದ್ದರು. ಈ ಗೃಹ ಸುಂದರವಾದ ಆವಾಸ ಸ್ಥಾನವಾಗಬೇಕೆಂಬುದು ಅವರ ಮನೋಭಿಲಾಷೆಯಾಗಿತ್ತು. ಶಾಂತಿಯ ಹರಿಕಾರರಾಗಿದ್ದ ಡಾ।। ಪ್ರಸಾದರು ಜಗತ್ತಿನ ಎಲ್ಲ ಬೃಹತ್ ಶಕ್ತಿ ರಾಷ್ಟ್ರಗಳು ಏಕಪಕ್ಷೀಯವಾಗಿ ನಿಶ್ಶಸ್ತ್ರೀಕರಣ ಕೈಗೊಳ್ಳಬೇಕೆಂದು  ನ್ಯೂಕ್ಲಿಯರ್ ಶಸ್ತ್ರಾಸ್ತ್ರ ಪೈಪೋಟಿಯನ್ನು ನಿಲ್ಲಿಸಬೇಕೆಂದೂ ಪುನರ್‌ಮನವಿ ಮಂಡಿಸುತ್ತಿದ್ದರು.

ರಾಜೇಂದ್ರ ಬಾಬು ಮಹಾತ್ಮಾ ಗಾಂಧೀಜಿಯ ನಿಜವಾದ ಅನುಯಾಯಿಯಾಗಿದ್ದರೂ ಅಂತೆಯೇ ಅವರು ತಮ್ಮ ಬದುಕಿನುದ್ದಕ್ಕೂ ಸತ್ಯ ಅಹಿಂಸೆಯ ಮಾರ್ಗವನ್ನು ಯಶಸ್ವಿಯಾಗಿ ಸವೆಸಿದ್ದರು. ಹಿಂಸಾ ಮಾರ್ಗದಿಂದ ಪಡೆದ ಸ್ವಾತಂತ್ರ್ಯ ನಿಜವಾದ ಅಥವಾ ಸ್ಥಿರವಾದ ಸ್ವಾತಂತ್ರ್ಯ ವಾಗಿರಲಾರದೆಂಬುದು ಗಾಂಧೀಜಿಯ ಅಭಿಪ್ರಾಯವಾಗಿತ್ತು. ಅಹಿಂಸೆಯೆಂದರೆ, ಇಡೀ ಮಾನವ ಕುಲಕೋಟಿಯಬಗ್ಗೆ ಅಪಾರ ಪ್ರೇಮ. ಸತ್ಯದ ಮಹಾನತೆ ಕುರಿತು ವಿವೇಚಿಸುತ್ತ ಮಹಾತ್ಮಾಜಿ ಹೇಳಿದ ಮಾತುಗಳಿವು : "ಒಬ್ಬ ಕುಂಬಾರ ಒಂದು ಕುರೂಪಿ ಗಡಿಗೆಯನ್ನು ಮಾಡಿದರೆ ಅದರ ತಪ್ಪು ಯಾರದು ? ಆ ಕುರೂಪಿ ಗಡಿಗೆಯದ್ದೋ ಅಥವಾ ಅದನ್ನು ರಚಿಸಿದ ಕುಂಬಾರನದೋ? ಒಬ್ಬ ಸತ್ಯಾಗ್ರಹಣಿ ಸತ್ಯದ ಶಕ್ತಿಯುತ ಬೆಂಬಲವಿರಬೇಕು" ಬಾಪೂಜಿಯ ಇಂಥ ಮಾತುಗಳನ್ನು ಸದಾ ಗಮನದಲ್ಲಿರಿಸಿಕೊಳ್ಳುತ್ತಿದ್ದ ಡಾ।। ಪ್ರಸಾದರು ಸತ್ಯ ಅಹಿಂಸೆ ಮತ್ತು ಪ್ರೇಮದ ಮೌಲ್ಯಗಳಿಗೆ ಅತ್ಯುನ್ನತ ಪ್ರಾಶಸ್ತ್ಯ ಕೊಡುತ್ತಿದ್ದರು ಒಬ್ಬ ಸ್ವಾತಂತ್ರ್ಯ ಹೋರಾಟಗಾರರಾಗಿ ಅಷ್ಟೇ ಅಲ್ಲ, ಭಾರತದ ರಾಷ್ಟ್ರಪತಿಯಾಗಿ ಸಂವಿಧಾನ ರಚನಾ ಸಮಿತಿಯಲ್ಲಿ ಒಬ್ಬರಾಗಿ ಅವರು ನೀಡಿದ ಸೇವೆ ಅನುಪಮವಾದದ್ದು. ನಾವು ಭಾರತದ ಸಂವಿಧಾನ ರಚನಾ ಸಮಿತಿಯಲ್ಲಿ ಒಬ್ಬರಾಗಿ ಅವರು ನೀಡಿದ ಸೇವೆ ಅನುಪಮವಾದದ್ದು. ನಾವು ಭಾರತದ ಸಂವಿಧಾನದ ವಿಧಿ ನಿಯಮಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿ ಅವಲೋಕಿಸಿದರೆ ಅಲ್ಲಿ ಮನುಷ್ಯನ ಸ್ವಾತಂತ್ರ್ಯ ಮತ್ತು ಘನತೆ ಹಾಗೂ

ಭ್ರಾತೃತ್ವದ ಮೇಲೆ ಮುಖ್ಯವಾಗಿ ಒತ್ತು ಕೊಟ್ಟಿರುವದನ್ನು ಕಾಣಬಹುದು. ವಾಸ್ತವವಾಗಿ ನಮ್ಮ ಪ್ರಜಾ ಪ್ರಭುತ್ವದ ಸಾರ ಸರ್ವಸ್ವವಾಗಿರುವ ಇಂಥ ಉದಾತ್ತ ವಿಚಾರಗಳಿಗೆ ಒತ್ತು ದೊರೆತದ್ದು ಡಾ।। ರಾಜೇಂದ್ರ ಪ್ರಸಾದರಿಂದಲೇ.

ಮಹಾತ್ಮಾಗಾಂಧೀಜಿಯ ನೈಜ ಅನುಚರರಾಗಿ ಜಾಗತಿಕ ಶಾಂತಿಯ ಮಹಾನ್ ದೂತರಾಗಿ ಡಾ।। ರಾಜೇಂದ್ರ ಪ್ರಸಾದರು ನಮ್ಮ ದೇಶದ ಎಲ್ಲ ಜನವಿಭಾಗಗಳಿಗಾಷ್ಟೇ ಅಲ್ಲ, ಇಡೀ ಜಗತ್ತಿನ ಜನಕೋಟಿಗೆ ಹಿಂಸೆ ತೊರೆಯುವಂತೆ, ಯುದ್ಧ ತ್ಯೆಜಿಸುವಂತೆ, ದುರ್ಭಾವದಿಂದ ದೂರವಿರುವಂತೆ ಕಳಕಳಿಯ ಮನವಿಮಾಡಿಕೊಂಡಿದ್ದರು. ಜಗತ್ತಿನಾದ್ಯಂತ ಶಾಂತಿ ಸ್ನೇಹ ಪ್ರೀತಿ ಪಲ್ಲವಿಸುವದಕ್ಕೆ ಅನುಕೂಲಕರವಾದ ವಾತಾವರಣ ಸೃಷ್ಟಿಸಲು ಅವರು ಕೋರುತ್ತಿದ್ದರು.

ಜಗತ್ತಿನ ಬೃಹತ್ ಶಕ್ತಿ ರಾಷ್ಟ್ರಗಳು ಏಕಪಕ್ಷೀಯವಾಗಿ ನಿಶ್ಯಸ್ತ್ರೀಕರಣ ಆರಂಭಿಸಿ, ಪ್ರಪಂಚವನ್ನು ಯುದ್ಧೋನ್ಮಾದದ ಪ್ರಳಯದಿಂದ ರಕ್ಷಿಸಬೇಕೆಂದು ಅವರು ಒಂದು ಚರಿತ್ರಾರ್ಹ ಪ್ರಸ್ತಾವನೆಯನ್ನು ಮುಂದಿಟ್ಟಿದ್ದರು. ಡಾ।। ಪ್ರಸಾದರು ಶಾಂತಿ ಮತ್ತು ಅಹಿಂಸೆಯ ಮೌಲ್ಯಗಳಿಗೆ ಎಷ್ಟು ಗೌರವ ಕೊಡುತ್ತಿದ್ದರೆಂಬುದು ಈ ಮಾನವೀಯ ಪ್ರಸ್ತಾವನೆಯಿಂದ ಕಂಡುಬರುತ್ತದೆ. ಅಹಿಂಸೆ ಒಂದು ಅಜೇಯವಾದ ಸಶಕ್ತಿ ಶಸ್ತ್ರವೆಂಬುದು ನಿಸ್ಸಂಶಯ. ಸತ್ಯದ ನಂತರ ಅಹಿಂಸೆಯೇ ಅತ್ಯಂತ ಶಕ್ತಿಯುತ ಸಾಧನ. ಅದು ಎಂದೆಂದಿಗೂ ದುರ್ದಮ್ಯಎನ್ನುವದು ಬಾಪೂಜಿಯ ಅಭಿಪ್ರಾಯವಾಗಿತ್ತು. ಇದಕ್ಕೆ ಪ್ರತಿಯಾಗಿ, ಹಿಂಸೆಯ ಸಾಧನಗಳು ಕೇವಲ ಯಶಸ್ವಿಯಾಗಿರುವಂತೆ ತೋರುತ್ತವೆ. ಹೌದು ಅವುಗಳ ಯಶಸ್ಸು ತೋರಿಕೆಗೆ ಮಾತದು ಈ ಉದಾತ್ತ ದೃಷ್ಟಿಯಿಂದಾಗಿಯೇ ಡಾ।। ರಾಜೇಂದ್ರಬಾಬು ತಮ್ಮ ಗುರುವಾಗಿದ್ದ ಮಹಾತ್ಮ ಗಾಂಧೀಜಿಯ ನಿರಂತರ ಶಿಷ್ಯರಾಗಿ ಮುಂದುವರೆಯುತ್ತ, ಯಾವಾಗಲೂ ಶಕ್ತಿ ಅಧಿಕಾರಕ್ಕಿಂತಲೂ ಸತ್ಯವನ್ನೇ ಆಯ್ಕೆಮಾಡಿಕೊಳ್ಳುತ್ತಿದ್ದರು.

ರಾಜೇಂದ್ರ ಬಾಬು ಸರಳ ಬದುಕಿನ ಉದಾತ್ತ ವಿಚಾರದ ಒಬ್ಬ ಆದರ್ಶ ವ್ಯಕ್ತಿಯಾಗಿದ್ದರು. ಹೀಗಾಗಿ, ಅವರ ಇಡೀ ಬದುಕು ಅನುಕರಣೆ ಯೋಗ್ಯವಾಗಿದೆ. ಅವರ ನಿರ್ಭೆಡೆಯ ನೇರ ನಡವಳಿಕೆ, ಸರಳತೆ ಮತ್ತು ವಿನಯಶೀಲತೆ ಅವರ ಮಾತು ಮತ್ತು ಕೃತಿಗಳಲ್ಲಿ ಸ್ಪಷ್ಟವಾಗಿ ಪ್ರತಿಬಿಂಬಿತವಾಗುತ್ತಿದ್ದವು. ಅವರ ಚಿಂತನೆ ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿತ್ತು. ಅವರ ಸಂಪರ್ಕಕ್ಕೆ ಬಂದ ಪ್ರತಿಯೊಬ್ಬ ವ್ಯಕ್ತಿಯೂ ಅವರ ಮೇಲು ಸದೃಶ ವ್ಯಕ್ತಿತ್ವದಿಂದ ಪ್ರಭಾವಿತನಾಗಿ ಹೊಸ ಸ್ಪೂರ್ತಿ ಪಡೆಯುತ್ತಿದ್ದ ಅವರ ವ್ಯಕ್ತಿತ್ವದ ಪ್ರಭಾವದಡಿಯಲ್ಲಿ ಸಂಕುಚಿತ ದೃಷ್ಟಿ, ಕ್ಷುಲ್ಲಕ ವಿಚಾರಗಳನ್ನು ತ್ಯಜೀಸಿ, ಉದಾತ್ತತೆಯನ್ನು ಅಂತರ್ಗತ ಮಾಡಿಕೊಳ್ಳುತ್ತಿದ್ದ. ರಾಷ್ಟ್ರೀಯ ಮಟ್ಟದ ಅವರ ಸಾರ್ವಜನಿಕ ಬದುಕಿನಲ್ಲಿಯೂ ರಾಜೇಂದ್ರ ಬಾಬು ಕೇವಲ ಒಬ್ಬ 'ಅಜಾತ ಶತ್ರು' ವಾಗಿದ್ದರಷ್ಟೇ ಅಲ್ಲ, ಹೃದಯದ ತುಂಬ ಸರ್ವರ ಬಗ್ಗೆಯೂ ಪ್ರೀತಿ ಪ್ರೇಮ ತುಂಬಿಕೊಂಡಿದ್ದ ವ್ಯಕ್ತಿ ಅವರಾಗಿದ್ದರೂ ಉದಾತ್ತ ರಾಷ್ಟ್ರೀಯ ವ್ಯಕ್ತಿತ್ವವನ್ನು ಅಳೆಯುವ ಮಾನದಂಡವೇನಾದರೂ ಇದ್ದರೆ ಡಾ।। ರಾಜೇಂದ್ರ ಪ್ರಸಾದರದ್ದು ಅದಕ್ಕೊಂದು ಅತ್ಯುನ್ನತ ನಿದೇರ್ಶನವಾಗಿತ್ತು ಪರಸ್ಪರ ಚಾರಿತ್ರ್ಯ ಹನನ ಒರಟು ಅಸಡ್ಡಾಳ ವರ್ತನೆ, ಸುಳ್ಳು ಸೆಟ್ಟಿ, ಪರಸ್ಪರ ದ್ವೇಷ ಅಸೂಯೆಗಳಂಥ ಸಂಗತಿಗಳೇ ತುಂಬಿತುಳುಕುತ್ತಿರುವ ನಮ್ಮ ಇಂದಿನ ವಾತಾವರಣದಲ್ಲಿ ರಾಜೇಂದ್ರ ಬಾಬು ಅವರ ವ್ಯಕ್ತಿತ್ವದ ಪ್ರತಿಷೆ ನಮ್ಮ ನೆನಪಿನಂಗಳದಲ್ಲಿಯ ದೀಪಸ್ತಂಭದಂತೆ ಕಾಣುತ್ತಿದೆ. ಇಂದು

ನಮ್ಮ ದೇಶ ಅನೇಕ ಬಿಕಟ್ಟುಗಳನ್ನು ಎದುರಿಸುತ್ತಿದೆ. ಅವುಗಳಲ್ಲೆಲ್ಲಾ ಅತ್ಯಂತ ದಾರುಣ ಬಿಕ್ಕಟ್ಟೆಂದರೆ ಸಚ್ಚಾರಿತ್ರ್ಯದ ಕೊರತೆ ಅಭಿವೃದ್ಧಿಶೀಲ ರಾಷ್ಟ್ರವಾಗಿರುವ ಭಾರತದಂಥ ದೇಶಕ್ಕೆ 'ಸೂಪರ್ ಥರ್ಮಲ್ ಪವರ್ ಪ್ಲ್ಯಾಂಟುಗಳು, ಫ್ಯಾಕ್ಟರಿಗಳು, ಅತಿವೇಗದ ವಾಹನಗಳು, ಕಂಪ್ಯೂಟರ್ ಮತ್ತು ಸಂಕೀರ್ಣ ಸಮಸ್ಯೆಗಳಿಗೆ ಶೀಘ್ರಾತಿ ಶೀಘ್ರ ಉತ್ತರ ದೊರಕಿಸಿಕೊಡಬಲ್ಲ ಯಂತ್ರ ಸೂಕ್ಷ್ಮಗಳು ತುಂಬ ತುರ್ತಾಗಿ ಬೇಕಾಗಿವೆಯೆಂಬುದೇನೋ ಸರಿ. ಆದರೆ ಇದಕ್ಕಿಂತಲೂ ಮಹತ್ವದ ವಿಷಯವೆಂದರೆ, ಈ ಯಂತ್ರ ಸಾಧನ ಸಾಮಗ್ರಿಗಳನ್ನು ನಿರ್ವಹಿಸುವ, ನಿಯಂತ್ರಿಸುವ ವ್ಯಕ್ತಿಗಳಲ್ಲಿ ಮಾನವೀಯ ಗುಣ, ದೃಷ್ಟಿ ತುಂಬಿ ತುಳುಕುತ್ತಿರಬೇಕು. ಇಂದು ಭಾರತದ ಅತ್ಯಂತ ತುರ್ತಿನ ಅವಶ್ಯಕತೆಯೆಂದರೆ, ಪರಮೋನ್ನತ ಚಾರಿತ್ರ್ಯವುಳ್ಳ ಸಶಕ್ತ ನಾಗರಿಕರ ಪಡೆ. ರಾಜೇಂದ್ರ ಬಾಬು ಇಂಥ ಚಾರಿತ್ರ್ಯ, ಸತ್ಯಸಂಧತೆ ಹಾಗೂ ಸರಳತೆಯ ಸಂಕೇತವಾಗಿದ್ದರು. ಹಾಗೇಂದೆ ಅವರು ಮಾನವೀಯ ಮತ್ತು ಅಧ್ಯಾತ್ಮಿಕ ಮೌಲ್ಯಗಳ ಜೀವಂತ ಐತಿಹ್ಯವಾಗಿ ಉನ್ನತ ಮಟ್ಟದಲ್ಲಿ ಸದಾ ಉಳಿಯಲಿದ್ದಾರೆ.'

## ಮಹಾನ್ ರಾಷ್ಟ್ರದ ಶ್ರೇಷ್ಠ ರಾಷ್ಟ್ರಪತಿ

-ಆರ್. ರಾಮನಾಥನ್ ಚೆಟ್ಟಿಯಾರ್*

1949ರ ಕೊನೆಯ ವೇಳೆಗೆ ಮದ್ರಾಸಿನಲ್ಲಿ ನಡೆದ ಅಖಿಲ ಭಾರತ ಕೃಷಿ ಆರ್ಥಿಕತೆಯ ಸಮ್ಮೇಳನ ನಡೆದಾಗ, ರಾಜೇಂದ್ರ ಪ್ರಸಾದರು ಅದರ ಅಧ್ಯಕ್ಷತೆ ವಹಿಸಿದ್ದರು. ನಾನು ಸ್ವಾಗತ ಸಮಿತಿಯಲ್ಲಿ ಒಬ್ಬನಾಗಿದ್ದು ಡಾ|| ರಾಜೇಂದ್ರ ಪ್ರಸಾದರ ಮಹಾನ್ ವ್ಯಕ್ತಿತ್ವದ ಪರಿಚಯ ಮಾಡಿಕೊಳ್ಳುವ ಅವಕಾಶ ಪಡೆದಿದ್ದೆ. ವಾಸ್ತವವಾಗಿ ಒಂದು ವಾರದಷ್ಟು ದೀರ್ಘಕಾಲ ಅವರ ಜೊತೆಗೂಡಿ ಕೆಲಸ ಮಾಡಿದ್ದೆ. ಆಗ ನಾನು ಮದ್ರಾಸಿನ ಷರೀಫನಾಗಿದ್ದೆ. ಆಮೇಲೆ 1951ರಲ್ಲಿ ನಾನು ಮದ್ರಾಸಿನ ಮೇಯರ್‌ನಾಗಿದ್ದಾಗ ನವದೆಹಲಿಗೆ ಹೋಗಿದ್ದೆ. ಆಗ ಅವರನ್ನು ಕಂಡು, ಅವರು ಭಾರತದ ರಾಷ್ಟ್ರಪತಿಯಾಗಿ ಮದರಾಸಿಗೆ ದಯಮಾಡಿಸಿದಾಗ ಮದರಾಸಿನ ರಿಪ್ಪನ್ ಬಿಲ್ಡಿಂಗ್‌ನಲ್ಲಿ ನಮ್ಮ ಸ್ವಾಗತವನ್ನು ಸ್ವೀಕರಿಸಬೇಕೆಂದು ನನ್ನ ವಿನಯಪೂರ್ವಕ ಆಮಂತ್ರಣವನ್ನು ನೀಡಿದ್ದೆ. ಅವರು ಆ ಕಾರ್ಯಕ್ರಮವನ್ನು ಬಯಲಿನಲ್ಲಿ ಮಾಡಬೇಕೆಂದು, ಅಲ್ಲಿ ನೆರೆಯಬಹುದಾದ ಜನಸಾಮಾನ್ಯರು ತಮಗೆ ಭೆಟ್ಟಿಯಾಗಲು ಸಾಧ್ಯವಾಗುವಂತಿರಬೇಕೆಂದು ಹೇಳಿದರು. ನಾನು ಒಂದು ನೃತ್ಯಪ್ರದರ್ಶನದ ಕುರಿತು ಅವರ ಮುಂದೆ ಪ್ರಸ್ತಾಪಿಸಿದಾಗ, ಆ ಪ್ರದರ್ಶನ ಸಂಪೂರ್ಣವಾಗಿ ವೃತ್ತಿಯೇತರ ಹವ್ಯಾಸೀ ಯುವ ಕಲಾವಿದರಿಂದ ಕೂಡಿರಬೇಕೆಂದೂ ಹೇಳಿದ್ದರು. ನನ್ನ ಕೆಲವು ಗೆಳೆಯರ ಸಹಾಯದಿಂದ ನಾನು ಅಂಥದೊಂದು ಪ್ರದರ್ಶನವನ್ನು ಏರ್ಪಡಿಸಲು ಸಾಧ್ಯವಾಯಿತು.

ಡಾ||. ರಾಜೇಂದ್ರ ಪ್ರಸಾದರು, ಅಂದಿನ ಮದ್ರಾಸಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಪಿ.ಎಸ್. ಕುಮಾರಸ್ವಾಮಿ ರಾಜಾ ಅವರೊಂದಿಗೆ ರಿಪ್ಪನ್ ಬಿಲ್ಡಿಂಗಿನಲ್ಲಿ ನಮ್ಮ ಜೊತೆ ಚಹ ಕುಡಿಯಲು ಬಂದರು. ಮದ್ರಾಸ್ ಕಾರ್ಪೋರೇಶನ್ನಿನ ಕೌನ್ಸಿಲರ್‌ಗಳು ಮತ್ತು ಮಹಾನಗರದ ಇತರ ಗಣ್ಯರು ಆಗ ಉಪಸ್ಥಿತರಿದ್ದರು. ಡಿ.ಎಂ. ಕೆಯ ಇಬ್ಬರು ಕೌನ್ಸಿಲರುಗಳು ಆ ಸಂದರ್ಭದಲ್ಲಿ ಹಾಜರಿರಲು ಇಷ್ಟಪಡಲಿಲ್ಲ. ಯಾಕೆಂದರೆ, ಅವರು ರಾಷ್ಟ್ರಪತಿಗಳಿಗೆ ಮುಜುಗರ ಉಂಟು ಮಾಡಲು ಬಯಸಲಿಲ್ಲ. ಅದರ ಹಿನ್ನೆಲೆ ಹೀಗಿತ್ತು: ಸಂವಿಧಾನ ಸಭೆಯ ಅಧ್ಯಕ್ಷರಾಗಿ ರಾಜೇಂದ್ರ ಪ್ರಸಾದರು ಹಿಂದಿಯನ್ನು ರಾಷ್ಟ್ರ ಭಾಷೆಯಾಗಿ ಗೊತ್ತುವಳಿ ಸ್ವೀಕರಿಸಿದ್ದಕ್ಕೆ ಡಿ.ಎಂ.ಕೆ. ಪಕ್ಷ ರಾಷ್ಟ್ರಪತಿಗಳೆದುರು ಕಪ್ಪು ಬಾವುಟ ಪ್ರದರ್ಶನದ ಪ್ರತಿಭಟನೆ ಮಾಡಲಿತ್ತು. ನಾನು ರಾಷ್ಟ್ರಪತಿಯವರನ್ನು ತೆರೆದ ಕಾರಿನಲ್ಲಿ ಕಾರ್ಪೋರೇಶನ್ ಕ್ರೀಡಾಂಗಣಕ್ಕೆ ಕರೆದುಕೊಂಡು ಹೋದೆ. ಅಲ್ಲಿ ಇಪ್ಪತ್ತು ಸಾವಿರಕ್ಕಿಂತಲೂ ಹೆಚ್ಚಿನ ಜನ ಕಿಕ್ಕಿರಿದು ನೆರೆದಿದ್ದರು. ಅವರು ರಾಷ್ಟ್ರಪತಿಯವರಿಗೆ ನೀಡಿದ ಸ್ವಾಗತ ಅದ್ಭುತವಾಗಿತ್ತು. ರಾಷ್ಟ್ರಪತಿಯವರು ಭರತ ನಾಟ್ಯ ಪ್ರದರ್ಶನ ನೀಡಿದ ಕಲಾವಿದರಿಗೆ ಕಾರ್ಪೋರೇಶನ್ ಪರವಾಗಿ ಸ್ಮರಣಿಕೆಗಳನ್ನು ವಿತರಿಸಿದರು.

ಡಾ|| ರಾಜೇಂದ್ರ ಪ್ರಸಾದರ ರಾಷ್ಟ್ರಾಧ್ಯಕ್ಷತೆಯ ಎರಡನೆಯ ಅವಧಿಯಲ್ಲಿ (1957-62) ನಾನು ಲೋಕಸಭೆಯ ಸದಸ್ಯನಾಗಿ ಅವರನ್ನು ಆಗಾಗ ಭೆಟ್ಟಿ ಮಾಡುತ್ತಿದ್ದೆ. ನನ್ನ ಬಗ್ಗೆ ಅವರಿಗೆ ತುಂಬ ಕರುಣೆ. ಅವರೊಬ್ಬ ಮಹಾನ್ ವಿದ್ವಾಂಸರಾಗಿದ್ದರು. ಅಂತೆಯೇ ಒಂದು ಮಹಾನ್ ರಾಷ್ಟ್ರದ ಮಹಾನ್ ರಾಷ್ಟ್ರಪತಿಯಾಗಿದ್ದರು. ಅವರು 1962ರಲ್ಲಿ, ತಮ್ಮ ಅಧಿಕಾರ ತ್ಯಜಿಸಿ, ವಿಶೇಷ ರೈಲಿನಲ್ಲಿ, ಪಾಟ್ನಾಕ್ಕೆ ಪ್ರಯಾಣ ಬೆಳೆಸುತ್ತಿದ್ದಾಗ ಅವರನ್ನು ನವದೆಹಲಿಯ ರೈಲ್ವೆ ನಿಲ್ದಾಣದಲ್ಲಿ ಬೀಳ್ಕೊಡಲು ನೆರೆದಿದ್ದವರಲ್ಲಿ ನಾನೂ ಒಬ್ಬನಾಗಿದ್ದೆ. ನಿಜವಾಗಿಯೂ ಅದೊಂದು ಹೃದಯಸ್ಪರ್ಶಿ ದೃಶ್ಯವಾಗಿತ್ತು.

---

*ಶ್ರೀ ಚೆಟ್ಟಿಯಾರ್ ಮಾಜಿ ಸಂಸತ್ ಸದಸ್ಯರು (ಲೋಕಸಭೆ).

## ಡಾ|| ರಾಜೇಂದ್ರ ಪ್ರಸಾದಃ ಬಾಲ್ಯ ಮತ್ತು ಗ್ರಾಮೀಣ ಬದುಕು

-ವಾಲ್ಮೀಕಿ ಚೌಧರಿ*

ರಾಜೇಂದ್ರ ಪ್ರಸಾದರ ಮುತ್ತಜ್ಜನಿಗೆ ಇಬ್ಬರು ಗಂಡು ಮಕ್ಕಳಿದ್ದರು. ಚೌಧುರಲಾಲ ಹಿರಿಯ ಮಗ; ಮಿಸ್ರಿಲಾಲ ಕಿರಿಯ ಮಗ, ಮಿಸ್ರಿಲಾಲರಿಗೆ ಒಬ್ಬನೇ ಒಬ್ಬ ಮಗನಿದ್ದ. ಅವನ ಹೆಸರು ಮಹಾದೇವ ಸಹಾಯ್. ಮಹಾದೇವ ಸಹಾಯ್ ಅವರೇ ರಾಜೇಂದ್ರ ಪ್ರಸಾದರ ತಂದೆ.

ಮಹಾದೇವ ಸಹಾಯ ಅವರಿಗೆ ಮೂರೂ ಜನ ಹೆಣ್ಣು ಮಕ್ಕಳು ಮತ್ತು ಇಬ್ಬರು ಗಂಡುಮಕ್ಕಳು, ಭಗವತಿದೇವಿ ಜೇಷ್ಟ ಪುತ್ರಿ. ಎರಡನೆಯ ಮಗಳು ಅನಾರ್ಕಲೀ ಮತ್ತು ಮೂರನೆಯ ಮಗಳು ಬಾಲ್ಯದಲ್ಲಿಯೇ ತೀರಿಕೊಂಡಳು. ಆಮೇಲೆ ಹುಟ್ಟಿದವರು ಮಹೇಂದ್ರ ಪ್ರಸಾದ. ರಾಜೇಂದ್ರ ಪ್ರಸಾದರೇ ಎಲ್ಲರಿಗಿಂತ ಕಿರಿಯ ಮಗುವಾಗಿದ್ದರು.

ಚೌಧುರಲಾಲರು ಹಥುವಾ ಸಂಸ್ಥಾನದ ದಿವಾನರಾಗಿದ್ದರು. ಹಥುವಾ ಸಂಸ್ಥಾನದ ರಾಜನಾಗಿದ್ದ ರಾಜೇಂದ್ರ ಸಾಹಿ, ದಿವಾನ್ ಚೌಧುರಲಾಲರನ್ನು ತನ್ನ ತಂದೆಯಂತೆಯೇ ತುಂಬ ಗೌರವಿಸುತ್ತಿದ್ದನು. ಇದು ಎಷ್ಟರ ಮಟ್ಟಿಗೆಂದರೆ, ದಿವಾನರ ಸಮ್ಮುಖದಲ್ಲಿ ರಾಜನು ಹುಕ್ಕಾ ಸೇದುತ್ತಿರಲಿಲ್ಲ. ಒಮ್ಮೊಮ್ಮೆ ಸೇದುವಾಗ ಆಕಸ್ಮಿಕವಾಗಿ ದಿವಾನರು ಬರುತ್ತಿದ್ದ ಸುದ್ದಿ ತಿಳಿದೊಡನೆಯೇ ಹುಕ್ಕಾ ಎತ್ತಿ ಬೇರೆಡೆ ಮುಚ್ಚಿಡಲು ಆದೇಶ ನೀಡುತ್ತಿದ್ದನು. ಅತ್ಯಂತ ಗೌರವದಿಂದ ದಿವಾನರನ್ನು ತನ್ನ ಬಳಿ ಕುಳ್ಳಿರಿಸಿಕೊಳ್ಳುತ್ತಿದ್ದ. ಅನೇಕ ವಿಷಯಗಳನ್ನು, ವಿಶೇಷವಾಗಿ ಸಂಸ್ಥಾನದ ಆಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು, ಕುರಿತು ಅವರ ಸಲಹೆ ಸೂಚನೆಗಳನ್ನು ಕೇಳುತ್ತಿದ್ದ.

ರಾಜೇಂದ್ರ ಪ್ರಸಾದರ ಮುತ್ತಜರಾಗಿದ್ದ ಮಿಸ್ರಿಲಾಲ್ ಒಬ್ಬ ವೈದ್ಯರಾಗಿದ್ದರು. ಪರೋಪಕಾರದ ಬುದ್ಧಿ ಅವರ ಸ್ವಭಾವವಾಗಿತ್ತು. ಹೀಗಾಗಿ ಅವರು ಗ್ರಾಮಸ್ಥರಿಗೆಲ್ಲ ಉಚಿತ ಔಷಧೋಪಚಾರ ನೀಡುತ್ತಿದ್ದರು.

ಗಿಡಮೂಲಿಕೆಗಳ ಬಗ್ಗೆ ಚೆನ್ನಾಗಿ ತಿಳಿದಿದ್ದ ಅವರು ಅವುಗಳನ್ನು ಸಂಗ್ರಹಿಸಿ ಕುಟ್ಟಿ ಅರೆದು ಅವಶ್ಯವಿದ್ದ ಔಷಧಗಳನ್ನೆಲ್ಲ ಮನೆಯಲ್ಲಿಯೇ ತಯಾರಿಸಿಕೊಳ್ಳುತ್ತಿದ್ದರು. ತಮ್ಮ ಗ್ರಾಮದವರಷ್ಟೇ ಅಲ್ಲ, ನೆರೆಹೊರೆಯ ಗ್ರಾಮದ ಅನೇಕ ರೋಗಿಗಳು ಉಪಚಾರ ಬಯಸಿ ಅವರಲ್ಲಿಗೆ ಬರುತ್ತಿದ್ದರು. ಅವರೆಲ್ಲರ ಬಗ್ಗೆಯೂ ಅವರಿಗೆ ಸಮಾನ ದೃಷ್ಟಿ, ಸಮಾನ ಕಾಳಜಿ. ಬಡಬಗ್ಗರಿಗೆ ಅವರು ನೀಡುತ್ತಿದ್ದ ಔಷದೋಪಚಾರ ಉಚಿತವಾಗಿರುತ್ತಿತ್ತು. ಯಾರೇ ಬರಲಿ ಇವರ ಉಪಚಾರದಿಂದ ಗುಣ ಹೊಂದುವುದು ಖಾತ್ರಿಯಾಗಿತ್ತು.

ಮಿಸ್ರಿಲಾಲರ ಏಕೈಕ ಪುತ್ರ ಮಹಾದೇವ್ ಸಹಾಯ್ ಒಬ್ಬ ಆರೋಗ್ಯ ದೃಢಕಾಯನಾಗಿದ್ದ. ಸಚ್ಚಾರಿತ್ರ್ಯ, ಸಂಯಮಕ್ಕೆ ಇನ್ನೊಂದು ಹೆಸರಾಗಿದ್ದ. ಅವರಿಗೆ ಬಡಬಗ್ಗರಿಗೆ ಸಹಾಯ ಮಾಡುವುದೆಂದರೆ ಎಲ್ಲಿಲ್ಲದ ಸಂತೋಷ. ತಮ್ಮ ಊರಿನ ಮತ್ತು ನೆರೆಹೊರೆಯ ಊರಿನ ಅನೇಕ ಯುವಕರನ್ನು ಹುರಿದುಂಬಿಸಿ ಅವರನ್ನು ವ್ಯಾಯಾಮ, ಗದೆ, ಇತ್ಯಾದಿ ವರಸೆಗಳಲ್ಲಿ

---

*ಶ್ರೀ ಚೌಧರಿ, ಮಾಜಿ ಸಂಸತ್ ಸದಸ್ಯರು (ಲೋಕಸಭೆ). ಅವರು ಡಾ|| ರಾಜೇಂದ್ರ ಪ್ರಸಾದರ ಖಾಸಗೀ ಕಾರ್ಯದರ್ಶಿಗಳಾಗಿಯೂ ಸೇವೆ ಸಲ್ಲಿಸಿದ್ದಾರೆ.

ತರಬೇತಿ ನೀಡುತ್ತಾ ಶಾರೀರಿಕ ಬಲ ಸಂವರ್ಧನೆಗೆ ತೊಡಗಿಸುತ್ತಿದ್ದರು. ಅವರನ್ನು ಕುಸ್ತಿ ಪಟುಗಳನ್ನಾಗಿ ತಯಾರಿಸುವುದು ಅವರ ಅಕ್ಕರೆಯ ಹವ್ಯಾಸವಾಗಿತ್ತು. ರಾಜೇಂದ್ರ ಪ್ರಸಾದರ ತಂದೆ ಮಹಾದೇವ ಸಹಾಯ್ ವ್ಯವಹಾರ ಚತುರರಾಗಿದ್ದರು. ರೇಶ್ಮೆ ಕೃಷಿ, ತೋಟಗಾರಿಕೆ ಅವರ ನೆಚ್ಚಿನ ಹವ್ಯಾಸವಾಗಿತ್ತು. ಅವರಂದು ನೆಟ್ಟ ಗಿಡಗಳು ಇಂದಿಗೂ ಫಲ ನೀಡುತ್ತಿವೆ. ತಮ್ಮ ಕಠಿಣ ಪರಿಶ್ರಮದ ಮೂಲಕ ಅವರು ತಮ್ಮ ಕುಟುಂಬದ ಆಸ್ತಿಪಾಸ್ತಿಯನ್ನು ಹೆಚ್ಚಿಸಿ ಅದರ ಸಂಪತ್ತು ಉತ್ತರೋತ್ತರವಾಗಿ ಬೆಳೆಯುವಂತೆ ನಿಗಾ ವಹಿಸಿದರು. ತಮ್ಮ ಕುಟುಂಬವನ್ನು ಒಂದು ಆದರ್ಶ ಕುಟುಂಬವನ್ನಾಗಿ ಮಾಡುವುದಕ್ಕಾಗಿಯೇ ತಮ್ಮೆಲ್ಲ ಪ್ರಯತ್ನಗಳನ್ನು ಮೀಸಲಿರಿಸಿದರು.

ರಾಜೇಂದ್ರ ಪ್ರಸಾದರ ಸಹೋದರಿ ಭಗವತೀ ದೇವಿ ಪ್ರಸಾದರಿಗಿಂತ 15 ವರ್ಷ ಹಿರಿಯಳು. ಅವಳನ್ನು ತುಂಬ ಅಚ್ಚುಮೆಚ್ಚಿನಿಂದ ಬೆಳೆಸಿ, ಅತ್ಯಂತ ಅದ್ದೂರಿಯಿಂದ ಮದುವೆ ಮಾಡಿಕೊಟ್ಟರು. ಯಾಕೆಂದರೆ, ಅದು ಮಹಾದೇವ್ ಸಹಾಯ್ ಅವರ ಕುಟುಂಬದಲ್ಲಿಯ ಮೊದಲ ಮದುವೆಯಾಗಿತ್ತು. ಆದರೆ ದುರ್ದೈವವಶಾತ್ ಶ್ರೀಮತಿ ಭಗವತಿದೇವಿ ತನಗೆ 15 ತುಂಬುವುದರೊಳಗೆ ವಿಧವೆಯಾದಳು. ಕುಟುಂಬದ ಮನಸ್ಸಿನ ಮೇಲೆ ಇದೊಂದು ಗಂಭೀರ ಆಘಾತವಾಗಿತ್ತು.

ಗಂಡನನ್ನು ಕಳೆದುಕೊಂಡು ಅಕಾಲ ವಿಧವೆಯಾದ ಆಕೆ ತಿರುಗಿ ತವರಿಗೆ ಬಂದಳು. ದೇವರ ಪೂಜೆ ಪುನಸ್ಕಾರ, ಉಪವಾಸ, ತೀರ್ಥ ಯಾತ್ರೆಗಳಲ್ಲಿ ತನ್ನ ಮನಸ್ಸನ್ನು ತೊಡಗಿಸಿ ಕಾಲಯಾಪನೆ ಮಾಡತೊಡಗಿದಳು. ಬದುಕಿನುದ್ದಕ್ಕೂ ಕುಟುಂಬದಲ್ಲಿ ಭಗವತಿದೇವಿಗೆ ಉನ್ನತ ಮನ್ನಣೆ, ಮರ್ಯಾದೆ ನೀಡಲಾಗುತ್ತಿತ್ತು. ಕುಟುಂಬದ ಜೇಷ್ಠ ಪುತ್ರಿಯಾಗಿದ್ದ ಭಗವತೀದೇವಿ ಅಲ್ಲಿ ಕುಟುಂಬದ ಮುಖ್ಯಸ್ಥಳಂತೆಯೇ ಬಾಳಿ ಬದುಕಿದಳು. ಯಾರೊಬ್ಬರಿಗೂ ಅವಳ ಅಧಿಕಾರನ್ನು ಪ್ರಶ್ನಿಸುವ ಧೈರ್ಯವಾಗಲೀ, ಅವಿಧೇಯತೆಯನ್ನು ತೋರುವ ಎದೆಗಾರಿಕೆಯಾಗಲೀ ಇರಲಿಲ್ಲ.

ರಾಜೇಂದ್ರ ಪ್ರಸಾದರ ಕುಟುಂಬದಲ್ಲಿ ಒಬ್ಬ ವಿಧವೆಗೆ ಅತ್ಯುನ್ನತ ಗೌರವ ದೊರೆಯುತ್ತಿತ್ತು. ಹಾಗಾಗಿ, ಬಾಲ ವಿಧವೆಯಾಗಿದ್ದ ಭಗವತಿದೇವಿಯನ್ನು ಎಲ್ಲರೂ ತುಂಬ ಗೌರವದಿಂದ ಕಾಣುತ್ತಿದ್ದರು. ಅಷ್ಟೇ ಯಾಕೆ, ಕುಟುಂಬದ ಇತರ ಸದಸ್ಯರಿಗಿಂತ ಭಗವತಿದೇವಿಯವರ ಸ್ಥಾನಮಾನ ಯಾವುದೇ ರೀತಿಯಿಂದ ಕಡಿಮೆಯಿರಲಿಲ್ಲ.

ರಾಜೇಂದ್ರ ಪ್ರಸಾದರು ಭಾರತದ ರಾಷ್ಟ್ರಪತಿಯಾದಾಗ ಭಗವತಿದೇವಿ ಕೂಡ ರಾಷ್ಟ್ರಪತಿ ಭವನದಲ್ಲಿ ವಾಸಿಸತೊಡಗಿದರು. 1956ರ ಜನವರಿ 26 ಮುಂಜಾನೆ ಅವರು ತಮ್ಮ ಕೊನೆಯುಸಿರೆಳೆಯುವವರೆಗೂ ಅಲ್ಲಿಯೇ ಉಳಿದುಕೊಂಡಿದ್ದರು.

ಭಗವತಿದೇವಿ ಕುರಿತು ಇಷ್ಟು ವಿವರವಾಗಿ ಪ್ರಸ್ತಾಪಿಸುವ ಉದ್ದೇಶವೆಂದರೆ, ರಾಜೇಂದ್ರ ಪ್ರಸಾದರ ಕುಟುಂಬದಲ್ಲಿ ಸಮಾಜದ ಇತರ ಕುಟುಂಬಗಳಲ್ಲಂತಲ್ಲದೆ, ವಿಧವೆಯರಿಗೆ ಉನ್ನತ ಸ್ಥಾನಮಾನ ದೊರೆಯುತ್ತಿತ್ತು ಎಂಬುದನ್ನು ತೋರಿಸುವುದೇ ಆಗಿದೆ. ಹಿಂದೂ ಕುಟುಂಬದಲ್ಲಿ, ವಿಶೇಷವಾಗಿ ಸಂಪ್ರದಾಯಸ್ಥ ಸನಾತನೀ ಕುಟುಂಬದಲ್ಲಿ, ಒಬ್ಬ ವಿಧವೆ ಅನೇಕ ಅವಮಾನಗಳನ್ನು ಸಹಿಸುತ್ತಾ ಕಷ್ಟಪರಂಪರೆಗಳಿಗೆ ಗುರಿಯಾಗಬೇಕಾಗುತ್ತದೆ. ಬದುಕಿನ ಪ್ರತಿಯೊಂದು ಹೆಜ್ಜೆಯೂ ಮಾನಸಿಕ ಯಾತನೆ ಬಲಿಪಶುವನ್ನಾಗಿ ಮಾಡುತ್ತದೆ. ಶುಭ ಸಂದರ್ಭಗಳಲ್ಲಿ ವಿಧವೆಯ ಉಪಸ್ಥಿತಿ

ಅಮಂಗಳಕರವೆಂದು ಬಗೆಯಲಾಗುತ್ತದೆ. ಆದರೆ ರಾಜೇಂದ್ರ ಪ್ರಸಾದರ ಕುಟುಂಬದಲ್ಲಿ ವಿಧವೆಗೆ ತುಂಬ ಗೌರವ ದೊರೆಯುತ್ತಿತ್ತು. ಕುಟುಂಬದ ಎಲ್ಲರಿಂದಲೂ ತನ್ನ ಮೇಲೆ ಧುಮ್ಮಿಕ್ಕಿ ಹರಿಯುತ್ತಿದ್ದ ಗೌರವಾದರಗಳ ಭರದಲ್ಲಿ ಆಕೆ ತನ್ನ ವೈಧ್ಯವ್ಯದ ವೇದನೆಯನ್ನು ಪೂರ್ತಿಯಾಗಿ ಮರೆತಿದ್ದಳು.

ಮಹಾದೇವ್ ಸಹಾಯ್‌ಗೆ ಇಬ್ಬರು ಗಂಡು ಮಕ್ಕಳು. ಹಿರಿಯ ಮಗ ಮಹೇಂದ್ರ ಪ್ರಸಾದ; ಕಿರಿಯಮಗ ರಾಜೇಂದ್ರ ಪ್ರಸಾದ. ಮಹೇಂದ್ರ ಮತ್ತು ರಾಜೇಂದ್ರ ಇಬ್ಬರೂ ಆದರ್ಶ ಸಹೋದರರಾಗಿದ್ದರು. ಮಹೇಂದ್ರ ಪ್ರಸಾದ ರಾಜೇಂದ್ರ ಪ್ರಸಾದರಿಗಿಂತ ಎಂಟು ವರ್ಷ ಹಿರಿಯ. ವಾಸ್ತವವಾಗಿ ಮಹೇಂದ್ರ ಪ್ರಸಾದ ರಾಜೇಂದ್ರ ಪ್ರಸಾದರ ಪಾಲಕರಾಗಿದ್ದರು. ಯಾವುದೇ ಮಹತ್ವದ ವಿಷಯ ಕುರಿತು ರಾಜೇಂದ್ರ ಪ್ರಸಾದರು ತಮ್ಮ ಅಣ್ಣನ ಸಲಹೆ ಸೂಚನೆ ಮತ್ತು ಅನುಮೋದನೆಗಳನ್ನು ಪಡೆದುಕೊಳ್ಳುತ್ತಿದ್ದರು. ಇದು ಎಷ್ಟರ ಮಟ್ಟಿಗಿತ್ತೆಂದರೆ, ರಾಜೇಂದ್ರ ಪ್ರಸಾದರಿಗೆ ಒಮ್ಮೆ ಡಬಲ್ ಪ್ರೊಮೋಶನ್ ಸಿಕ್ಕಾಗ ಅವರು ತಮ್ಮ ಅಣ್ಣನ ಅನುಮತಿ ಪಡೆಯದೆ ಅದನ್ನು ಸ್ವೀಕರಿಸಲಿಲ್ಲ. ರಾಜೇಂದ್ರ ಪ್ರಸಾದರ ಎಲ್ಲ ಬೇಕು ಬೇಡಗಳನ್ನು ಅವರಣ್ಣನೇ ನೋಡಿಕೊಳ್ಳುತ್ತಿದ್ದರು. ಯಾವುದಕ್ಕೂ ಕೊರತೆಯಿರದಂತೆ ಪ್ರಸಾದರ ಎಲ್ಲ ಅವಶ್ಯಕತೆಗಳನ್ನು ಪೂರ್ವಭಾವಿಯಾಗಿ ಗ್ರಹಿಸಿ ಅವುಗಳನ್ನು ಪೂರೈಸುವ ಕೆಲಸ ಮಹೇಂದ್ರ ಪ್ರಸಾದರಿಗೆ ವಾಡಿಕೆಯಾಗಿತ್ತು. ಮಹೇಂದ್ರ ಪ್ರಸಾದರು ತೀರಿಕೊಳ್ಳುವವರೆಗೂ ರಾಜೇಂದ್ರ ಪ್ರಸಾದರು ಕುಟುಂಬದ ಹೊಣೆಗೆ ಹೆಗಲು ಕೊಡುವ ಪ್ರಮೇಯ ಎಂದೂ ಬಂದಿರಲಿಲ್ಲ. ತಮ್ಮ ಸಹೋದರ ತನ್ನೆಲ್ಲ ಸಮಯವನ್ನೂ ಅಧ್ಯಯನಕ್ಕೆ ಮತ್ತು ನ್ಯಾಯವಾದಿಯ ವೃತ್ತಿಗೆ ಮೀಸಲಿಡುವುದಕ್ಕೆ ಯಾವುದೇ ಬಾಧೆ ಬರದಂತೆ ನೋಡಿಕೊಳ್ಳುವುದು ಮಹೇಂದ್ರ ಪ್ರಸಾದ ತಮ್ಮದೊಂದು ಕರ್ತವ್ಯವೆಂದು ಭಾವಿಸುತ್ತಿದ್ದರು. ಆಮೇಲೆ ರಾಜೇಂದ್ರ ಪ್ರಸಾದರು ಸಾರ್ವಜನಿಕ ಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡ ಮೇಲೆ ಅವರ ಸಹೋದರ ಮಹೇಂದ್ರ ಪ್ರಸಾದ ರಾಜೇಂದ್ರರ ಅವಶ್ಯಕತೆಗಳ ಬಗ್ಗೆ ಇನ್ನೂ ಹೆಚ್ಚಿನ ಕಾಳಜಿ ವಹಿಸತೊಡಗಿದರು. ಯಾವುದೇ ಅನಾನುಕೂಲತೆಯ ಕೊರಗು ತಮ್ಮನ ಸಾರ್ವಜನಿಕ ಸೇವೆಗೆ ತೊಡಕಾಗಬಾರದೆಂಬುದು ಅವರ ಅಭಿಲಾಷೆಯಾಗಿತ್ತು.

ಇಂಥ ಸತ್‌ಸ್ವಭಾವದ ಸೋದರನನ್ನು ರಾಜೇಂದ್ರ ಪ್ರಸಾದರು ತಮ್ಮ ತಂದೆಯ ಸಮಾನವೆಂದೇ ಭಾವಿಸುತ್ತಿದ್ದರು. ತಮ್ಮ ಸಹೋದರನ ಅನುಮತಿಯಿಲ್ಲದೆ ಅವರು ಯಾವ ಕೆಲಸಕ್ಕೂ ಕೈ ಹಾಕುತ್ತಿರಲಿಲ್ಲ. ಈ ಎಲ್ಲ ಅನ್ಯೋನ್ಯತೆಯ ದ್ಯೋತಕವೆಂದೇ ರಾಜೇಂದ್ರ ಪ್ರಸಾದರು ತಮ್ಮ ಆತ್ಮಚರಿತ್ರೆಯನ್ನು ಮಹೇಂದ್ರ ಪ್ರಸಾದರಿಗೆ ಅರ್ಪಿಸಿದ್ದಾರೆ. ಹತ್ತೊಂಬತ್ತು ನೂರ ಮೂವತ್ತು ನಾಲ್ಕರಷ್ಟು ಹಿಂದೆಯೇ ಅವರ ಸಹೋದರ ತೀರಿಕೊಂಡರು. ರಾಜೇಂದ್ರ ಪ್ರಸಾದರಿಗೆ ತಮ್ಮ ಮನೆ ಮಾರು ಆಸ್ತಿ ಪಾಸ್ತಿ ಇತ್ಯಾದಿಗಳ ವಿವರವಾದ ಮಾಹಿತಿ ದೊರೆತದ್ದು ಅವರ ಸಹೋದರನ ಮರಣಾನಂತರವೇ. ಅಷ್ಟೇ ಯಾಕೆ, ಕುಟುಂಬದ ಮೇಲಿರುವ ಸಾಲದ ಹೊರೆ ಎಷ್ಟೆಂಬುದು ಗೊತ್ತಾದದ್ದು ಅವರ ಸೋದರರು ಅಗಲಿದ ನಂತರವೇ.

## ಬಾಲ್ಯ ಮತ್ತು ಪ್ರಾಥಮಿಕ ಶಿಕ್ಷಣ

ರಾಜೇಂದ್ರ ಪ್ರಸಾದರು ಜನಿಸಿದ್ದು ಅಗ್ರಹಯಾನ ಪೂರ್ಣಿಮೆಯ ವಿಕ್ರಮಶಕೆ 1941 ಅಂದರೆ 3ನೇ ಡಿಸೆಂಬರ್, 1884, ಸಾರಣ ಜಿಲ್ಲೆಯ ಜಿರಾದೇಹಿ ಎಂಬ ಗ್ರಾಮದಲ್ಲಿ.

ಮೂಲೆಕೊಪ್ಪಲಿನ ಕುಗ್ರಾಮವೊಂದರಲ್ಲಿ ಜನಿಸಿದ್ದ ಆ ಮಗು ಮುಂದೊಂದು ದಿನ ಮಹಾ ಬುದ್ಧಿಜೀವಿಯಾಗಿ ದೇಶದ ಅತ್ಯುನ್ನತ ಗೌರವವಾದ 'ಭಾರತ ರತ್ನ' ಪ್ರಶಸ್ತಿಗೆ ಭಾಜನವಾಗಬಹುದೆಂದು ಯಾರೂ ಊಹಿಸಿರಲಿಲ್ಲ. ಇಂಥ ಅಪರಿಚಿತ ಹಳ್ಳಿಯಲ್ಲಿ ಜನ್ಮತಳೆದ ಮಗು ಮುಂದೆ ರಾಷ್ಟ್ರದ ಸ್ವಾತಂತ್ರ್ಯ ಹೋರಾಟದಲ್ಲಿ ಮುಖ್ಯ ಪಾತ್ರ ವಹಿಸಿ ತನ್ಮೂಲಕ ಭಾರತ ಗಣರಾಜ್ಯದ ಪ್ರಥಮ ಅಧ್ಯಕ್ಷ ಸ್ಥಾನಕ್ಕೆ ಏರಬಹುದೆಂದು ಯಾರೂ ಕಲ್ಪಿಸಿರಲಿಲ್ಲ. ಅಸಂಖ್ಯಾತ ಸಮುದಾಯ ಮತ್ತು ಭಾಷೆಗಳ ವಿಶಾಲ ಸಮುಚ್ಚಯವಾಗಿರುವ ದೇಶದ ಪರಮೋನ್ನತ ಪದಾಧಿಕಾರವನ್ನು ಅಲಂಕರಿಸಬಹುದೆಂದು ಯಾರೂ ಮುಂಗಂಡಿರಲಿಲ್ಲ.

ಆ ಕಾಲದ ವಾಡಿಕೆಯಂತೆ ರಾಜೇಂದ್ರ ಪ್ರಸಾದರು ಶಿಕ್ಷಣವನ್ನು ಉರ್ದು ಮತ್ತು ಪರ್ಶಿಯನ್ ಭಾಷೆಯಲ್ಲಿ ಆರಂಭಿಸಿದರು. ಒಬ್ಬ ಮುಸ್ಲಿಂ ಮೌಲ್ವಿಯನ್ನು ಮನೆ ಪಾಠ ಹೇಳಲು ನೇಮಿಸಲಾಗಿತ್ತು. ಮೌಲ್ವಿಯ ಊಟ, ವಸತಿಯ ವ್ಯವಸ್ಥೆ ಅವರ ಮನೆಯಲ್ಲಿಯೇ ಮಾಡಲಾಗಿತ್ತು. ಅವರ ಮನೆಯ ಮುಖ್ಯ ಕಟ್ಟಡಕ್ಕೆ ಹತ್ತಿಕೊಂಡಿದ್ದ ಹೊರ ಕೋಣೆಯಲ್ಲಿ ಮೌಲ್ವಿ ವಾಸಿಸುತ್ತಿದ್ದ. ಆ ಕೋಣೆಯ ಮುಂದೆ ಒಂದು ಪಡಸಾಲೆ. ಅದನ್ನೇ 'ಮಕ್ತಾಬ್' ಆಗಿ ಉಪಯೋಗಿಸಲಾಗುತ್ತಿತ್ತು. ಇದು 1889-90ರ ಸಂಗತಿ.

ರಾಜೇಂದ್ರ ಪ್ರಸಾದರಿಗೆ ಎಂಟು ತುಂಬುವವರೆಗೆ ಅವರ ಪ್ರಾಥಮಿಕ ಶಿಕ್ಷಣ ಮೌಲ್ವಿ ಸಾಹೇಬರ ಮೂಲಕ ಮನೆಯಲ್ಲಿಯೇ ನಡೆಯಿತು. ಆ ಕಾಲದಲ್ಲಿ ಶಿಕ್ಷಕರು ಹಪಾಪಿಗಳಾಗಿರಲಿಲ್ಲ. ಹಾಗೆಯೇ ವಿದ್ಯಾರ್ಥಿಗಳೂ ದುರ್ನಡತೆಯನ್ನು ಮೈಗೂಡಿಸಿಕೊಂಡಿರಲಿಲ್ಲ. ದುರ್ವರ್ತನೆ ಅಕ್ಷಮ್ಯವಾಗಿತ್ತು. ಹಿರಿಯರನ್ನು, ಶಿಕ್ಷಕರನ್ನು ಜನ ತುಂಬ ಗೌರವದಿಂದ ಕಾಣುತ್ತಿದ್ದ ಕಾಲ ಅದಾಗಿತ್ತು.

ರಾಜೇಂದ್ರ ಪ್ರಸಾದರು ಇನ್ನೆರಡು ಸಂಗಾತಿಗಳ ಜೊತೆಗೂಡಿ, ಬೆಳಗಾಗುತ್ತಲೇ ತಮ್ಮ ವರ್ಗದಲ್ಲಿ ಹಾಜರಾಗಿರುತ್ತಿದ್ದರು. ತಮ್ಮ ಪಾಟಿ, ಪುಸ್ತಕಾದಿಗಳನ್ನು ಡೆಸ್ಕಿನ ಮೇಲಿಟ್ಟು ಅತ್ಯಂತ ಮುತುವರ್ಜಿಯಿಂದ ಪಾಠ ಕಲಿಯುತ್ತಿದ್ದರು. ಮೌಲ್ವಿ ಸಾಹೇಬರು ಪ್ರತಿದಿನ ಆರಂಭದಲ್ಲಿಯೇ ಹಿಂದಿನ ದಿನದ ಪಾಠ ಪ್ರವಚನದ ವಿಮರ್ಶೆ ಮಾಡುತ್ತಿದ್ದರು. ವಿದ್ಯಾರ್ಥಿಗಳು ನೀಡುತ್ತಿದ್ದ ಉತ್ತರಗಳು ತೃಪ್ತಿಕರವಾಗಿದ್ದರೆ ಅವುಗಳನ್ನು ಬರೆಯುವಂತೆ ಸೂಚಿಸುತ್ತಿದ್ದರು. ವಿದ್ಯಾರ್ಥಿಗಳಿಗೆ ಹಿಂದಿನ ದಿನದ ಪಾಠ ಸರಿಯಾಗಿ ಮನನವಾಗಿದೆಯೆಂದು ಖಾತ್ರಿಯಾದ ಮೇಲೆಯೇ ಮೌಲ್ವಿ ಮುಂದಿನ ಪಾಠ ಕೈಗೆತ್ತಿಕೊಳ್ಳುತ್ತಿದ್ದರು.

ರಾಜೇಂದ್ರ ಪ್ರಸಾದರು ಉಳಿದೆಲ್ಲರಿಗಿಂತ ಮುಂಚೆಯೇ ಕ್ಲಾಸ್‌ರೂಮಿನಲ್ಲಿ ಹಾಜರಿರುತ್ತಿದ್ದರು. ಹಿಂದಿನ ದಿನದ ಪಾಠವನ್ನು ಮೌಖಿಕವಾಗಿಯೂ ಲಿಖಿತವಾಗಿಯೂ ಪುನರಪಿ ಮನನ ಮಾಡಿಕೊಳ್ಳುತ್ತಿದ್ದರು. ಆದ್ದರಿಂದಲೇ ಅವರು ಹಿಂದಿನ ದಿನದ ಪಾಠವನ್ನು ತೃಪ್ತಿಕರವಾಗಿ ಒಪ್ಪಿಸಿ, ಹೊಸ ಪಾಠ ಹೇಳಿಸಿಕೊಳ್ಳುವುದರಲ್ಲಿ ಸದಾ ಮುಂಪಂಕ್ತಿಯಲ್ಲಿರುತ್ತಿದ್ದರು. ಹೊಸ ಪಾಠ ಹೇಳಿಸಿಕೊಂಡೊಡನೆಯೇ ಅದನ್ನು ಕಂಠಪಾಠ ಮಾಡಲು ತೊಡಗುತ್ತಿದ್ದರು.

ಉರ್ದು, ಪರ್ಶಿಯನ್ ಭಾಷೆಗಳಲ್ಲದೆ ಮಗ್ಗಿಯೇ ಮೊದಲಾಗಿ ಕೂಡಿಸುವ, ಕಳೆಯುವ, ಗುಣಿಸುವ, ಭಾಗಿಸುವ, ಲೆಕ್ಕಾಚಾರದ ಎಲ್ಲ ಆಯಾಮಗಳನ್ನು ಪ್ರಸಾದರು 'ಮಕ್ತಾಬ್'ದಲ್ಲಿಯೇ ಕಲಿತರು.

ಇಂಗ್ಲೀಷ್ ಶೈಕ್ಷಣಿಕ ಪರಿಭಾಷೆಯಲ್ಲಿ Three R's ಎಂದು ಕರೆಯಲ್ಪಡುವ ರೀಡಿಂಗ್, ರೈಟಿಂಗ್ ಮತ್ತು ಅರತ್‌ಮೆಟಿಕ್ ಈ ಮೂರು ಶಿಕ್ಷಣದ ಬುನಾದಿಗಳೆಂದು ಪರಿಗಣಿಸಲಾಗುತ್ತದೆ. ಒಬ್ಬ ವಿದ್ಯಾರ್ಥಿ ಯಾವುದೇ ಮಾನಸಿ ಕರ್ಷಣವಿಲ್ಲದೆ ಈ ಮೂರು ಪ್ರಕ್ರಿಯೆಗಳಲ್ಲಿ ಪಾರಂಗತನಾದನೆಂದರೆ, ಅವನ ಶಿಕ್ಷಣದ ಬುನಾದಿ ಗಟ್ಟಿಗೊಂಡಂತೆಯೇ ಸರಿ.

'ಮಕ್ತಾಬ್' ಶಿಕ್ಷಣದ ಮುಖ್ಯ ಲಕ್ಷಣವೆಂದರೆ, ಪಾಠಗಳನ್ನು ಪುನರಪಿ ಪಠಿಸಿ ಅವುಗಳನ್ನು ಕಂಠಪಾಠ ಮಾಡುವುದರ ಮೇಲೆಯೇ ಹೆಚ್ಚು ಒತ್ತು ಕೊಡಲಾಗುತ್ತಿತ್ತು. ಪಾಠಗಳನ್ನು ಪದೇ ಪದೇ ಪಠಿಸುವ ಮೂಲಕ ಅವುಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಸುಲಭವಾಗುತ್ತಿತ್ತು.

ರಾಜೇಂದ್ರ ಪ್ರಸಾದ್ ಒಬ್ಬ ಸರಳ ಸ್ವಭಾವದ ಚುರುಕು ಬುದ್ಧಿಯ ಲಜ್ಜಾಶೀಲ ಹುಡುಗನಾಗಿದ್ದ. ಎಂಟು ವರ್ಷಗಳವರೆಗಿನ ಪ್ರಾಥಮಿಕ ಶಿಕ್ಷಣದ ನಂತರ ಅವರು ತಮ್ಮ ಪ್ರೌಢ ಶಿಕ್ಷಣಕ್ಕಾಗಿ ಜಿರಾದೇಹಿಯಿಂದ ಛಾಪ್ರಾ ಪಟ್ಟಣಕ್ಕೆ ತೆರಳಿದರು. ಅದು ಅವರಿಗೊಂದು ಹೊಸ ಅನುಭವ. ಪ್ರಸಾದರು ಈ ಕುರಿತು ತಮ್ಮ ಆತ್ಮ ಚರಿತ್ರೆಯಲ್ಲಿ ಮನ ಮುಟ್ಟುವಂತೆ ವಿವರಿಸಿದ್ದಾರೆ.

ರಾಜೇಂದ್ರ ಪ್ರಸಾದರು ತಮ್ಮ ಆತ್ಮ ಚರಿತ್ರೆಯಲ್ಲಿ ಬರೆದಂತೆ, ಛಾಪ್ರಾದಲ್ಲಿ ಅವರು ತಿಂಗಳಿಗೆ ಮೂರೋ ನಾಲ್ಕೋ ರೂಪಾಯಿ ಬಾಡಿಗೆಗೆ ಒಂದು ಚಿಕ್ಕ ಮನೆಯನ್ನು ತೆಗೆದುಕೊಂಡರು. ಅವರ ಸಹೋದರ ಮಹೇಂದ್ರ ಪ್ರಸಾದರೂ ಅವರ ಜೊತೆಗಿದ್ದರು. ಊಟೋಪಚಾರದ ವ್ಯವಸ್ಥೆಗಾಗಿ ಒಬ್ಬ ಅಡಿಗೆಯ ಆಳಿದ್ದ. ಆರಂಭದಲ್ಲಿ ತಮ್ಮ ಸಹೋದರನ ಮೇಲೆ ನಿಗಾ ಇಡಲು ಒಬ್ಬ ಶಿಕ್ಷಕನನ್ನು ನೇಮಿಸಲಾಗಿತ್ತು. ರಾಜೇಂದ್ರ ಪ್ರಸಾದರು ಅಲ್ಲಿಗೆ ಬಂದಾಗ ಅವರ ಸಹೋದರ ಮಹೇಂದ್ರ ಪ್ರಸಾದರ ವಿನಃ ಅಲ್ಲಿ ಯಾರೂ ಇರಲಿಲ್ಲ. ಛಾಪ್ರಾಕ್ಕೆ ಬಂದ ಕೆಲ ದಿನಗಳ ನಂತರ ಜಿಲ್ಲಾ ಶಾಲೆಯ ಎಂಟನೇ ತರಗತಿಯಲ್ಲಿ ಅವರ ಹೆಸರನ್ನು ನೋಂದಾಯಿಸಲಾಯಿತು. ಅಲ್ಲಿ ಅವರ ಶಿಕ್ಷಣ ರೋಮನ್ ಮತ್ತು ದೇವನಾಗರಿ ಲಿಪಿಗಳ ಕಲಿಕೆಯೊಂದಿಗೆ ಪ್ರಾರಂಭವಾಯಿತು. ಅವರ ಸಹೋದರನಿಗೆ ಎಂಟ್ರನ್ಸ್ ಕ್ಲಾಸಿಗೆ ಬಡ್ತಿ ದೊರೆಯಿತು. ಅಲ್ಲಿ ಮನೆ ಪಾಠಕ್ಕಾಗಿ ಯಾರನ್ನೂ ನೇಮಿಸಿರಲಿಲ್ಲ. ಶಾಲೆಯಲ್ಲಿ ಕಲಿತ ಪಾಠಗಳ ಕಠಿಣತೆಯನ್ನು ಪರಿಹರಿಸಿಕೊಳ್ಳಲು ಅವರು ತಮ್ಮ ಸಹೋದರನನ್ನೇ ಅವಲಂಬಿಸಬೇಕಾಯಿತು. ಮನೆಪಾಠದ ಗೈರುಹಾಜರಿಯಿಂದ ಅವರು ಹೆಚ್ಚಾಗಿ ಶಾಲೆಯಲ್ಲಿ ಕಲಿಸಲಾಗುತ್ತಿದ್ದುದರ ಮೇಲೆಯೇ ಹೆಚ್ಚಿನ ಗಮನ ಕೊಡುವ ಹವ್ಯಾಸ ಬೆಳೆಸಿಕೊಂಡರು. ಇದರಿಂದ ಆರಂಭದಿಂದಲೇ ಆತ್ಮ ವಿಶ್ವಾಸ ರಕ್ತಗತವಾಗತೊಡಗಿತು. ವರ್ಷದ ಕೊನೆಗೆ ಅವರ ಸಹೋದರ ಎಂಟ್ರನ್ಸ್ ಪರೀಕ್ಷೆಗೆ ಸಿದ್ಧತೆಯಲ್ಲಿ ತೊಡಗಿದ್ದರೆ, ಇವರು ತಮ್ಮ ವಾರ್ಷಿಕ ಪರೀಕ್ಷೆಯ ತಯಾರಿಯಲ್ಲಿ ತಲ್ಲೀನರಾದರು. ಸಹಜ ಪ್ರತಿಭೆ ಹಾಗೂ ಸತತ ಪ್ರಯತ್ನದ ಫಲವಾಗಿ ಅವರಿಗೆ ಪರೀಕ್ಷೆಯಲ್ಲಿ ಒಳ್ಳೆಯ ಸ್ಥಾನ ದೊರೆಯಿತು. ಅತ್ಯಂತ ಹೆಚ್ಚಿನ ಅಂಕ ಗಳಿಸಿ ಪ್ರಥಮ ದರ್ಜೆಯಲ್ಲಿ ಪಾಸಾದರು. ತತ್ಪರಿಣಾಮವಾಗಿ, ಮುಖ್ಯೋಪಾಧ್ಯಾಯರು ಡಬಲ್ ಪ್ರೊಮೋಶನ್‌ಗೆ ಶಿಫಾರಸು ಮಾಡಿದರು. ಹೀಗಾಗಿ ಅವರು ಒಂದು ಕ್ಲಾಸನ್ನು ದಾಟಿ ಒಮ್ಮೆಲೆ ಮುಂದಿನ ಕ್ಲಾಸಿಗೆ ಬಡ್ತಿ ಪಡೆದರು. ಆಗಿನ್ನೂ ಅವರಿಗೆ ಕೇವಲ ಹತ್ತು ವರ್ಷ.

ಬೆಳೆಯ ಸಿರಿ ಮೊಳಕೆಯಲ್ಲಿಯೇ ಎಂಬಂತೆ ತಮ್ಮ ಮುಂದಿನ ಪ್ರತಿಭಾವಂತ ಬದುಕಿನ ಮುನ್ಸೂಚನೆಯ ಸುಳಿವನ್ನು ರಾಜೇಂದ್ರ ಪ್ರಸಾದರು ತಮ್ಮ ಬಾಲ್ಯದಲ್ಲಿಯೇ ನೀಡಿದ್ದರು. ಛಾಪ್ರಾದಲ್ಲಿ

ಎರಡು ವರ್ಷ ಕಳೆದ ನಂತರ ಅವರ ಅಣ್ಣ ಮಹೇಂದ್ರ ಪ್ರಸಾದ ಹೆಚ್ಚಿನ ಅಭ್ಯಾಸಕ್ಕಾಗಿ ಪಾಟ್ನಾಕ್ಕೆ ಹೋದರು. ಅವರೊಂದಿಗೆ ರಾಜೇಂದ್ರ ಪ್ರಸಾದರೂ ಪಾಟ್ನಾಕ್ಕೆ ಸ್ಥಳಾಂತರವಾದರು. ಅಲ್ಲಿ ಟಿ.ಕೆ.ಘೋಷ್ ಅಕಾಡೆಮಿಯಲ್ಲಿ ಪ್ರವೇಶ ಪಡೆದು ತಮ್ಮ ಹೆಸರನ್ನು ನೋಂದಾಯಿಸಿದರು. ಪಾಟ್ನಾ, ಛಾಪ್ರಾಕ್ಕಿಂತ ದೊಡ್ಡ ನಗರ. ಅಲ್ಲಿಯ ವಿದ್ಯಾರ್ಥಿಗಳ ಸಂಖ್ಯೆಯೂ ದೊಡ್ಡದು. ಛಾಪ್ರಾದಲ್ಲಿ ಒಂದೇ ವರ್ಷಕ್ಕೆ ಎರಡು ಕ್ಲಾಸುಗಳನ್ನು ಪಾಸು ಮಾಡಿದ್ದ ರಾಜೇಂದ್ರರು ಇಲ್ಲಿಯೂ ಎಲ್ಲ ವಿದ್ಯಾರ್ಥಿಗಳಿಗಿಂತ ಮುಂದೆ ಇರಬೇಕಾದರೆ ಹೆಚ್ಚು ಕಷ್ಟಪಟ್ಟು ದುಡಿಯಬೇಕಾಗುತ್ತದೆಂಬುದನ್ನು ಅವರು ಮನಗಂಡರು. ಪಾಟ್ನಾದಲ್ಲಿಯೂ ಮನೆ ಪಾಠಕ್ಕಾಗಿ ಯಾವುದೇ ವಿಶೇಷ ವ್ಯವಸ್ಥೆ ಇದ್ದಿರಲಿಲ್ಲ. ಹಾಗಾಗಿ, ಅವರು ಸ್ವಯಂ ಪ್ರಯತ್ನ ಮತ್ತು ಸ್ವಾಧ್ಯಾಯದ ಮೂಲಕವೇ ಶಾಲೆಯಲ್ಲಿಯ ತಮ್ಮ ಅಗ್ರ ಸ್ಥಾನವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರು.

ರಾಜೇಂದ್ರ ಪ್ರಸಾದರು ತಮ್ಮ ಬಾಲ್ಯದಿಂದಲೂ ಅಧ್ಯಯನಶೀಲರಾಗಿದ್ದರು. ಶಾಲೆಯಲ್ಲಿ ಕಲಿಸಲಾಗುತ್ತಿದ್ದ ಎಲ್ಲ ಪಾಠ ಪ್ರವಚನಗಳನ್ನು ಕಂಠಪಾಠ ಮಾಡುವುದರಲ್ಲಿ ನಿಸ್ಸೀಮರಾಗಿದ್ದರು. ಅವರ ಸ್ಮರಣ ಶಕ್ತಿಯೂ ಅದ್ಭುತವಾಗಿತ್ತು. ಅವರು ಕಲಿಸಲಾದ ಪಾಠಗಳನ್ನಷ್ಟೇ ಅಲ್ಲ, ಮುಂದೆ ಕಲಿಸಲಾಗುವ ಪಾಠಗಳನ್ನು ಮುಂದಾಗಿಯೇ ಅದ್ಯಯನ ಮಾಡಿ ಎಲ್ಲರಿಗಿಂತಲೂ ಒಂದು ಹೆಜ್ಜೆ ಮುಂದಿರುತ್ತಿದ್ದರು. ಅವರ ಆರಂಭದ ಈ ರೂಢಿ ಪಾಟ್ನಾದಲ್ಲಿಯೂ ಮುಂದುವರಿಯಿತು. ಇದರಿಂದ ಅವರಿಗೆ ಯಾವಾಗಲೂ ಲಾಭವೇ ಆಯಿತು. ಪರಿಣಾಮತಃ ಎಲ್ಲ ವರ್ಗಗಳಲ್ಲಿಯೂ ಪ್ರಪ್ರಥಮ ಸ್ಥಾನ ಅವರದೇ. ಛಾಪ್ರಾದಲ್ಲಿಯ ಅವರ ವಿದ್ಯಾರ್ಥಿ ಜೀವನದಿಂದ ನಾವು ಎರಡು ಸಂಗತಿಗಳನ್ನು ನಿರ್ಣಯಿಸಬಹುದು. ಒಂದು, ಫಲಾಪೇಕ್ಷೆಯಿಲ್ಲದೆ ಸತತ ಹಾಗೂ ಕಠಿಣ ಪರಿಶ್ರಮದಲ್ಲಿ ಅವರಿಗೆ ಗಟ್ಟಿಯಾದ ನಂಬುಗೆಯಿತ್ತು. ಎರಡನೆಯದಾಗಿ, ಅಲ್ಲಿ ಅವರ ಪಾಲಕರಾಗಿದ್ದ ಅಣ್ಣನ ಬಗ್ಗೆ ಅಪಾರ ಶ್ರದ್ಧೆ ಮತ್ತು ಪ್ರೀತಿ ಅವರಿಗಿತ್ತು. ಟಿ.ಕೆ.ಘೋಷ್ ಅಕಾಡೆಮಿಯಲ್ಲಿ ಎರಡು ವರ್ಷ ಕಳೆಯುವುದರೊಳಗೆ ಅವರ ಸಹೋದರ ಮಹೇಂದ್ರ ಪ್ರಸಾದ ತಮ್ಮ ಹೆಚ್ಚಿನ ವ್ಯಾಸಂಗಕ್ಕಾಗಿ ಕಲ್ಕತ್ತೆಗೆ ಹೊರಟು ನಿಂತರು. ಆದರೆ ಆಗ ರಾಜೇಂದ್ರ ಪ್ರಸಾದರು ಕಲ್ಕತ್ತೆಗೆ ಹೋಗುವುದು ಸಾಧ್ಯವಿರಲಿಲ್ಲ. ಹಾಗೆಯೇ ಅವರನ್ನು ಪಾಟ್ನಾದಲ್ಲಿ ಒಬ್ಬಂಟಿಯಾಗಿ ಬಿಡುವುದೂ ಸರಿಯೆನಿಸಲಿಲ್ಲ. ಕಾರಣ ಅವರು ಹಥುವಾ ಹೈಸ್ಕೂಲಿನಲ್ಲಿ ಪ್ರವೇಶ ಪಡೆದರು. ಆದರೆ ಅಲ್ಲಿ ಅಧ್ಯಾಪನ ವ್ಯವಸ್ಥೆ ಸರಿಯಾಗಿರಲಿಲ್ಲವಾದ್ದರಿಂದ ಅದನ್ನು ಬಿಟ್ಟುಬಿಟ್ಟರು. ಆರು ತಿಂಗಳ ನಂತರ ಅವರು ಛಾಪ್ರಾ ಜಿಲ್ಲಾ ಶಾಲೆಗೆ ಪ್ರವೇಶ ಪಡೆದರು. ಛಾಪ್ರಾ ಜಿಲ್ಲಾ ಶಾಲೆಯಲ್ಲಿ ವಿದ್ಯಾರ್ಥಿಗಳ ಸಂಖ್ಯೆಯೇ ತುಂಬಾ ದೊಡ್ಡದು! ವಿಶೇಷವಾಗಿ ಅವರೋದುತ್ತಿದ್ದ ತರಗತಿಯ ವಿದ್ಯಾರ್ಥಿಗಳ ಸಂಖ್ಯಾಬಾಹುಳ್ಯದಿಂದಾಗಿ ಮೂರು ವಿಭಾಗಗಳನ್ನು ಮಾಡಲಾಗಿತ್ತು. ರಾಜೇಂದ್ರ ಪ್ರಸಾದರು 'ಎ' ವಿಭಾಗದಲ್ಲಿ ನೋಂದಾಯಿಸಲ್ಪಟ್ಟರು. ಶ್ರೀ ರಸಿಕ್‌ಲಾಲ್ ಎಂಬ ಬಂಗಾಳಿ ಶಿಕ್ಷಕರೊಬ್ಬರು ಅವರ ವರ್ಗಶಿಕ್ಷಕರಾಗಿದ್ದರು. ಪ್ರಸಾದರ ಬುದ್ಧಿಮತ್ತೆ ಅವರ ಮೇಲೆ ಬಹಳ ಪ್ರಭಾವ ಬೀರಿತ್ತು. ಒಂದು ವೇಳೆ ತಮ್ಮ ಅಧ್ಯಯನಶೀಲತೆಯನ್ನು ಹೀಗೇ ಮುಂದುವರಿಸಿದಲ್ಲಿ ಅವರ ಏಕೈಕ ಪ್ರತಿಸ್ಪರ್ಧಿ ರಾಮಾನುಗ್ರಹ ಎಂಬ ವಿದ್ಯಾರ್ಥಿ ಮಾತ್ರ ಆಗಿರಬಲ್ಲ ಎಂದು ಆ ಬಂಗಾಳಿ ಶಿಕ್ಷಕ ಒಂದು ದಿನ ರಾಜೇಂದ್ರ ಪ್ರಸಾದರಿಗೆ ಹೇಳಿದ್ದರು. ರಾಜೇಂದ್ರ ಪ್ರಸಾದರು ಆ ಕುರಿತು ತಮ್ಮ ಆತ್ಮ ಚರಿತ್ರೆಯಲ್ಲಿ ಬರೆಯುತ್ತಾ; "ಅವರು ನನಗೆ ಹಾಗೇಕೆ ಹೇಳಿದರೋ ಗೊತ್ತಾಗಲಿಲ್ಲ.

ಆದರೆ ಮುಂದೆ ಎರಡು ಮೂರು ವರ್ಷಗಳಲ್ಲಿಯೇ ಅವರ ಆ ಅಭಿಪ್ರಾಯ ಸತ್ಯವಾಗಿ ಪರಿಣಮಿಸಿತು. ಮುಂದೆ ರಾಜೇಂದ್ರ ಪ್ರಸಾದ ಮತ್ತು ರಾಮಾನುಗ್ರಹ ಪರೀಕ್ಷೆಗೆ ಕುಳಿತಾಗ ರಾಜೇಂದ್ರ ಪ್ರಸಾದ ಪ್ರಥಮ ಸ್ಥಾನ ಪಡೆದರೆ, ದ್ವಿತೀಯ ಸ್ಥಾನ ದಕ್ಕಿದ್ದು ರಾಮಾನುಗ್ರಹ ಎಂಬ ವಿದ್ಯಾರ್ಥಿಗೆ. ವಾರ್ಷಿಕ ಪರೀಕ್ಷೆಗಳು ನಡೆದಾಗಲೇ ಛಾಪ್ರಾದಲ್ಲಿ ಭಯಂಕರ ಸಾಂಕ್ರಾಮಿಕ ಪ್ಲೇಗ್ ರೋಗ ಹಬ್ಬಿತು. ಎರಡು ದಿನಗಳ ಪರೀಕ್ಷೆಯ ನಂತರ ರಾಜೇಂದ್ರ ಪ್ರಸಾದ ಜಡ್ಡು ಬಿದ್ದು ಜ್ವರದಿಂದ ಹಾಸಿಗೆ ಹಿಡಿದರು. ಆಮೇಲೆ ಅವರನ್ನು ಎರಡು ತಿಂಗಳಿಗಾಗಿ ಜಿರಾದೇಹಿಗೆ ಕರೆದುಕೊಂಡು ಹೋಗಲಾಯಿತು. ಪರಿಣಾಮವಾಗಿ ಅವರ ನೋಂದಣಿ ರದ್ದುಗೊಂಡು ಅವರ ಹೆಸರನ್ನು ಪ್ರವೇಶ ಪರೀಕ್ಷೆಗೆ ಕಳಿಸಲಾಗಲಿಲ್ಲ. ಆದರೆ ಮತ್ತೆ ಅವರ ಹೆಸರು ನೋಂದಣಿಯಾದ ಮೇಲೆ ಅವರು ಹೆಚ್ಚಿನ ಅಂಕಗಳಿಸಿ ಪ್ರವೇಶ ಪರೀಕ್ಷೆಗೆ ಅರ್ಹರಾಗಿದ್ದುದು ಗೊತ್ತಾಯಿತು. ಆದ್ದರಿಂದ ಅವರು ಪ್ರವೇಶ ಪರೀಕ್ಷೆಗೆ ಕೂಡಲು ವಿಶೇಷ ಅನುಮತಿ ದೊರೆಯಿತು.

ಗ್ರಾಮೀಣ ಜೀವನ:

ರಾಜೇಂದ್ರ ಪ್ರಸಾದರು ತಮ್ಮ ಬಾಲ್ಯವನ್ನು ಕಳೆದದ್ದು ಸನಾತನ ಧಾರ್ಮಿಕ ಶ್ರದ್ಧೆಯ ಸನ್ನಿವೇಶವಿದ್ದ ಕುಟುಂಬದಲ್ಲಿ. ಅವರಿಗೆ ಎಂಟು ತುಂಬುವವರೆಗೂ ಹೆಚ್ಚಾಗಿ ತಾಯಿಯ ಜೊತೆಯೇ ಇರುತ್ತಿದ್ದರು. ಅವರ ತಾಯಿಯಾದರೋ, ಬೆಳಗಿನ ಜಾವ ನಾಲ್ಕು ಗಂಟೆಗೆ ಎದ್ದು ರಾಮಾಯಣದ ಶ್ಲೋಕಗಳನ್ನು ಪಠಿಸುತ್ತಿದ್ದರು. ರಾಜೇಂದ್ರರಿಗೆ ಆ ಶ್ಲೋಕಗಳನ್ನು ಕೇಳುವುದರಲ್ಲಿ ತುಂಬಾ ಆಸಕ್ತಿ. ಅವರ ತಾಯಿ ಮತ್ತು ಅಜ್ಜಿ ಹಾಡುತ್ತಿದ್ದ ಸುಪ್ರಭಾತಗಳು ರಾಜೇಂದ್ರರ ಮನಸ್ಸನ್ನು ಸೂರೆಗೊಳ್ಳುತ್ತಿದ್ದವು. ರಾಮಾಯಣದ ಕಥೆಗಳು, ಸುಪ್ರಭಾತ ಗೀತೆಗಳು ಮತ್ತು ಭಕ್ತಿಗೀತೆಗಳು ಅವರ ಮೇಲೆ ಸಾಕಷ್ಟು ಪರಿಣಾಮವುಂಟು ಮಾಡಿದ್ದವು. ಕುಟುಂಬದ ಸದಸ್ಯರು ಕೈಗೊಳ್ಳುತ್ತಿದ್ದ ಉಪವಾಸ ವ್ರತಗಳು, ಆಚರಿಸಲ್ಪಡುತ್ತಿದ್ದ ಧಾರ್ಮಿಕ ವಿಧಿ ಕರ್ಮಗಳು ರಾಜೇಂದ್ರ ಪ್ರಸಾದರ ಮನಸ್ಸಿನ ಮೇಲೆ ಪ್ರಗಾಢ ಪ್ರಭಾವ ಬೀರಿದವು. ಬಾಲ್ಯದಲ್ಲಿ ಈ ರೀತಿಯಾಗಿ ಚಿತ್ತವಿಟ್ಟು ಕೇಳುವ, ಕೇಳಿದ್ದನ್ನು ಮನನ ಮಾಡಿಕೊಳ್ಳುವ ರೂಢಿ ಮುಂದೆ ಅವರ ವಿದ್ಯಾರ್ಥಿ ಜೀವನದಲ್ಲಿ, ವಕೀಲಿ ವೃತ್ತಿಯಲ್ಲಿ ಮತ್ತು ಸಾರ್ವಜನಿಕ ಜೀವನದಲ್ಲಿ ಅವರಿಗೆ ತುಂಬಾ ಸಹಾಯಕವಾಗಿ ಪರಿಣಮಿಸಿತು.

ಗ್ರಾಮೀಣ ಬದುಕು ರಾಜೇಂದ್ರ ಪ್ರಸಾದರ ಮೇಲೆ ಮಹತ್ತರ ಪ್ರಭಾವ ಬೀರಿತು. ಅವರ ದೃಷ್ಟಿಯಲ್ಲಿ ಗ್ರಾಮಗಳು ಸ್ವಯಂಪೂರ್ಣ ಸ್ವಾವಲಂಬಿ ಘಟಕಗಳಾಗಿದ್ದವು. ಅವು ತಮ್ಮ ಜೀವನಾವಶ್ಯಕತೆಗಳನ್ನು ತಮ್ಮಷ್ಟಕ್ಕೆ ತಾವೇ ಪೂರೈಸಿಕೊಳ್ಳುವ ಸಾಮರ್ಥ್ಯ ಪಡೆದಿದ್ದವು. ಅವರು ತಮ್ಮ ಆತ್ಮ ಚರಿತ್ರೆಯಲ್ಲಿ ಗ್ರಾಮಾಂತರ ಬದುಕಿನ ಸುಂದರ ಚಿತ್ರವೊಂದನ್ನು ಕಟ್ಟಿಕೊಟ್ಟಿದ್ದಾರೆ.

"ಆ ಕಾಲದಲ್ಲಿ ಗ್ರಾಮೀಣ ಬದುಕು ಇಂದಿನದಕ್ಕಿಂತ ಹೆಚ್ಚು ಸರಳವಾಗಿತ್ತು. ಜಿರಾದೇಹಿ ಮತ್ತು ಜಮಾಪೂರ ಎರಡು ಅವಳೀ ಗ್ರಾಮವಾಗಿದ್ದವು. ಆ ಎರಡೂ ಗ್ರಾಮಗಳು ಒಂದರೊಡನೊಂದು ಎಷ್ಟರಮಟ್ಟಿಗೆ ಬೆರೆತು ಹೋಗಿದ್ದವೆಂದರೆ ಎಲ್ಲಿ ಜಿರಾದೇಹಿ ಗ್ರಾಮ ಮುಗಿದು ಜಮಾಪೂರ ಆರಂಭವಾಗುತ್ತದೆ ಎಂದು ಹೇಳುವುದೇ ಕಷ್ಟವಾಗಿತ್ತು. ಜನಸಂಖ್ಯೆಯ ದೃಷ್ಟಿಯಿಂದ ಒಂದೇ ಎಂದು ಪರಿಗಣಿಸಲಾಗುತ್ತಿತ್ತು. ಎರಡೂ ಗ್ರಾಮಗಳಲ್ಲಿ ಎಲ್ಲಾ ಸಮುದಾಯದ

ಜನ ವಾಸಿಸುತ್ತಿದ್ದರು. ಆ ಎರಡೂ ಊರುಗಳ ಒಟ್ಟು ಜನಸಂಖ್ಯೆ ಎರಡು ಸಾವಿರಕ್ಕಿಂತಲೂ ಹೆಚ್ಚಿಗೆ ಇತ್ತು. ಅಂದಿನ ದಿನಗಳಲ್ಲಿಯೂ ಸಾಮಾನ್ಯವಾಗಿ ಗ್ರಾಮಗಳಲ್ಲಿ ದೊರೆಯುತ್ತಿದ್ದ ಎಲ್ಲ ಪಡಿಪದಾರ್ಥಗಳು ಅಲ್ಲಿ ಲಭಿಸುತ್ತಿದ್ದವು. ಈ ಮೊದಲು ಇರದೇ ಇದ್ದ ಪಾನ್ ಬೀಡಿಗಳ ಹೊಸ ಅಂಗಡಿಗಳೂ ಈಗ ತೆರೆದಿವೆ. ಈ ಅಂಗಡಿಗಳು ಇರದಿದ್ದಾಗ ಕಪ್ಪು ತಂಬಾಕು ಮತ್ತು 'ಖೈನಿ' ಮಾರಲ್ಪಡುತ್ತಿದ್ದವು. ಅಲ್ಲಿ ಒಳ್ಳೆಯ ಬಟ್ಟೆ ಅಂಗಡಿಗಳಿದ್ದವು. ಸುತ್ತಲಿನ ಗ್ರಾಮಗಳ ಜನರು ಮತ್ತು ಹೊರಗಿನ ಕೆಲವು ವ್ಯಾಪಾರಿಗಳು ಅಲ್ಲಿ ಬಟ್ಟೆ ಕೊಳ್ಳಲು ಬರುತ್ತಿದ್ದರು. ಅಕ್ಕಿ ಹಿಟ್ಟು, ಬೇಳೆ, ಉಪ್ಪು, ಎಣ್ಣೆ, ಮಸಾಲೆ ಮುಂತಾದ ಎಲ್ಲ ಖಾದ್ಯ ಸಾಮಾಗ್ರಿಗಳು ಅಲ್ಲಿ ಮಾರಲ್ಪಡುತ್ತಿದ್ದವು. ಕೆಲವು ಔಷಧದ ಸಣ್ಣ ಅಂಗಡಿಗಳು ಅಲ್ಲಿದ್ದವು. ನನಗೆ ನೆನಪಿದ್ದ ಮಟ್ಟಿಗೆ ಅಲ್ಲಿ ಮಿಠಾಯಿ ಅಂಗಡಿಗಳಿರಲಿಲ್ಲ. ಕೊಹಿರಿ ಜಾತಿಯ ಜನ ಹೆಚ್ಚಿನ ಸಂಖ್ಯೆಯಲ್ಲಿದ್ದುದರಿಂದ ತರಕಾರಿ ಹೇರಳವಾಗಿ ದೊರೆಯುತ್ತಿತ್ತು. ನಮ್ಮ ಊರಿನಲ್ಲಿ ಆಹೀರರ ಸಂಖ್ಯೆ ಕಡಿಮೆಯಿತ್ತಾದರೂ ಸುತ್ತಲಿನ ಊರುಗಳಲ್ಲಿ ಅವರ ಸಂಖ್ಯೆ ತುಂಬಾ ಹೆಚ್ಚಾಗಿಯೇ ಇತ್ತು. ಆದ್ದರಿಂದ ಹಾಲು ಮೊಸರು ಪುಷ್ಕಳವಾಗಿ ದೊರೆಯುತಿದ್ದವು. ಚರಕಾದ ಬಳಕೆ ಸಾಮಾನ್ಯವಾಗಿತ್ತು. ಊರಿನಲ್ಲಿ ನೇಕಾರರದೇ ಒಂದು ಓಣಿಯಿತ್ತು. ಅವರು ತಮಗೆ ಕೊಡಲಾದ ನೂಲಿನಿಂದ ಬಟ್ಟೆ ನೇಯುತ್ತಿದ್ದರು. ಬಳೆಗಾರರೂ ಅಲ್ಲಿದ್ದರು. ಸ್ವತಃ ಅವರೇ ಬಳೆಗಳನ್ನು ತಯಾರಿಸುತ್ತಿದ್ದರು. ಕೆಲವು ವ್ಯಾಪಾರಿಗಳು ಚಿಕ್ಕಪುಟ್ಟ ವಸ್ತು ವಿಶೇಷಗಳನ್ನು ತಾವೇ ತಯಾರಿಸುವುದಲ್ಲದೆ, ಬೀಡಿ ಮುಂತಾದ ಸರಕುಗಳನ್ನು ಹೊರಗಿನಿಂದಲೂ ತಂದು ಮಾರುತ್ತಿದ್ದರು. ಬಳೆಗಾರರು, ವ್ಯಾಪಾರಿಗಳು, ಉಪ್ಪಾರರು, ಸಿಂಪಿಗರು ಮತ್ತು ನೇಕಾರರು ಹೆಚ್ಚಾಗಿ ಮುಸ್ಲಿಮರಾಗಿದ್ದರು. ಶೇಖ್ ಅಥವಾ ಸಯ್ಯದರು ಅಲ್ಲಿ ವಾಸಿಸುತ್ತಿದ್ದರು. ಹಿಂದೂಗಳಲ್ಲಿ ಅನೇಕ ಪಂಗಡದ ಜನರು ಅಲ್ಲಿದ್ದರು. ಬ್ರಾಹ್ಮಣರು, ರಾಜಪೂತರು, ಭೂಮಿಹಾರರು, ಕಾಯಸ್ಥರು, ಕೋಹಿರಿಗಳು, ಕುರ್ಮಿಗಳು, ಕಂಕಾರ್, ತೊಡಾ, ಗೌರ್, ದೊಮೆ, ಚಮಾರ್, ದುಶಾದ್., ಮುಂತಾದವರ ಕುಟುಂಬಗಳು ಅಲ್ಲಿದ್ದವು. ನನಗನಿಸಿದ ಮಟ್ಟಿಗೆ ಅತ್ಯಂತ ಹೆಚ್ಚಿನ ಸಂಖ್ಯೆ ರಾಜಪೂತರದಾಗಿತ್ತು. ಅವರಲ್ಲಿ ಕೆಲವರು ಜಮೀನ್ದಾರ ವರ್ಗಕ್ಕೆ ಸೇರಿದವರಾಗಿದ್ದರು. ಹಾಗಾಗಿ, ಅವರನ್ನು ಶ್ರೇಷ್ಠ ಕುಟುಂಬದ ಕುಲೀನರೆಂದು ಬಗೆಯಲಾಗುತ್ತಿತ್ತು. ಅವರಲ್ಲಿ ಕೆಲವರು ಸಾಮಾನ್ಯ ಕೃಷಿಕರೂ ಇದ್ದರು. ಜಿರಾದೇಹಿ ಗ್ರಾಮದಲ್ಲಿಯೇ ಐದು ಕಾಯಸ್ಥರ ಕುಟುಂಬಗಳಿದ್ದವು. ಅವುಗಳಲ್ಲಿ ಮೂರು ನಮಗೆ ಸಂಬಂಧಿಸಿದ್ದವು. ಉಳಿದೆರಡು ಕುಟುಂಬಗಳು ಹೊರಗಿನಿಂದ ಬಂದು ಅಲ್ಲಿ ನೆಲೆಯೂರಿದ್ದವು.

ಸಾಮಾನ್ಯವಾಗಿ ಗ್ರಾಮೀಣರ ಅವಶ್ಯಕತೆಗಳೆಲ್ಲಾ ಅಲ್ಲಿಯೇ ಪೂರೈಸಲಾಗುತ್ತಿತ್ತಾದ್ದರಿಂದ ಅವುಗಳನ್ನು ಕೊಂಡುಕೊಳ್ಳಲು ಜನರು ಊರಿನಾಚೆಗೆ ಹೋಗುತ್ತಿದ್ದುದು ವಿರಳ. ಗ್ರಾಮದಲ್ಲಿ ವಾರಕ್ಕೆರಡಾವರ್ತಿ ಸಂತೆಯೂ ಸೇರುತ್ತಿತ್ತು. ಆಸುಪಾಸಿನ ಗ್ರಾಮದ ಜನರು ತಂತಮ್ಮ ಸಾಮಾನು ಸರಂಜಾಮುಗಳನ್ನು ತಲೆಯ ಮೇಲೆ ಹೊತ್ತು ಕುದುರೆಗಳ ಮೇಲೆ ಹೇರಿಕೊಂಡು ಅಥವಾ ಎತ್ತಿನ ಗಾಡಿಗಳಲ್ಲಿ ತುಂಬಿಕೊಂಡು ಮಾರಲು ಬರುತ್ತಿದ್ದರು. ಸಂತೆಯ ದಿನ ಮಿಠಾಯಿ ಅಂಗಡಿಗಳು ಬರುತ್ತಿದ್ದವು. ಮೀನು, ಮಾಂಸದ ಮಾರಾಟಕ್ಕೂ ಅಲ್ಲಿ ಅವಕಾಶವಿತ್ತು.

ಪರ್ಶಿಯನ್ ಭಾಷೆಯ ಪುಸ್ತಕದ ಗಂಟು ಮತ್ತು ಒಂದೆರಡು ಇಂಕ ಬಾಟಲಿಗಳನ್ನು ಹೊತ್ತು ನಾಲ್ಕಾರು ತಿಂಗಳಿಗೊಮ್ಮೆ ಗ್ರಾಮಕ್ಕೆ ಬರುತ್ತಿದ್ದ ವ್ಯಕ್ತಿ ಮೌಲ್ವಿ ಸಾಹೇಬರಿಗೆ ಭೆಟ್ಟಿಯಾಗುತ್ತಿದ್ದ. ಅವನು ಬಂದನೆಂದರೆ ಚಿಕ್ಕಮಕ್ಕಳಾಗಿದ್ದ ನಮಗೆ ಎಲ್ಲಿಲ್ಲದ ಆನಂದ. ಛಳಿಗಾಲದಲ್ಲಿ ಕೆಲವು ಸಲ

ವ್ಯಾಪಾರಿಗಳು ಬುಟ್ಟಿಯಲ್ಲಿ ಕಿತ್ತಳೆ, ನಿಂಬೆ ಹಣ್ಣು ತುಂಬಿಕೊಂಡು ಮಾರಲು ಬರುತ್ತಿದ್ದರು. ಆಗಲೂ ನಮ್ಮ ಸಂತೋಷಕ್ಕೆ ಪಾರವೇ ಇರುತ್ತಿರಲಿಲ್ಲ. ಊರಿನಲ್ಲಿ ಎರಡು ಮಠಗಳಿದ್ದವು. ಅಲ್ಲಿ ಸಾಧುಗಳು ವಾಸಿಸುತ್ತಿದ್ದರು. ಗ್ರಾಮಸ್ಥರೇ ಆ ಸಾಧುಗಳ ವಾಸ್ತವ್ಯಕ್ಕೆ ಎಲ್ಲ ವ್ಯವಸ್ಥೆ ಮಾಡಿದ್ದರು. ಆ ಸಾಧುಗಳು ಪ್ರತಿದಿನ ಮುಂಜಾನೆ ಮತ್ತು ಸಾಯಂಕಾಲ ಆರತಿ, ಪೂಜೆ ಮಾಡುತ್ತಿದ್ದರು. ಆರತಿ ಕಾರ್ಯಕ್ರಮದ ಸಂದರ್ಭದಲ್ಲಿ ಅಲ್ಲಿ ಕೆಲವು ಜನ ಸೇರುತ್ತಿದ್ದರು. ಕೆಲವೊಮ್ಮೆ ನಾವೂ ಅಲ್ಲಿಗೆ ಹೋಗುತ್ತಿದ್ದೆವು. ಆಗ ಬಾಬಾಜಿ ನಮಗೆ ತುಳಸೀ ದಳ, ಪ್ರಸಾದ ಕೊಡುತ್ತಿದ್ದರು. ರಾಮನವಮಿ ಹಾಗೂ ವಿಶೇಷವಾಗಿ ಜನ್ಮಾಷ್ಟಮಿಯ ಸಂದರ್ಭಗಳಲ್ಲಿ, ಮಠದಲ್ಲಿ ವಿಶೇಷ ಸಂಭ್ರಮ ಸಡಗರದ ಕಾರ್ಯಕ್ರಮಗಳು ಜರುಗುತ್ತಿದ್ದವು. ಎಲ್ಲಾ ಮಕ್ಕಳು, ಸಿಂಹಾಸನವೆಂದು ಕರೆಯಲಾಗುತ್ತಿದ್ದ ಮಠದ ಪೀಠವನ್ನು ಬಣ್ಣದ ಕಾಗದ ಮತ್ತು ಹೂವುಗಳಿಂದ ಅಲಂಕರಿಸುತ್ತಿದ್ದರು. ಮತ್ತು ಅಲ್ಲಿ ಜರುಗುತ್ತಿದ್ದ ಕಾರ್ಯಕ್ರಮ ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಮಕ್ಕಳೂ ಉಪವಾಸ ವ್ರತ ಕೈಗೊಳ್ಳುತ್ತಿದ್ದರು. ಮತ್ತು 'ದಹಿಕಾಂದೋ' ದಿನದಂದು ಮೊಸರು ಮತ್ತು ಅರಿಶಿಣವನ್ನು ಒಬ್ಬರಿಗೊಬ್ಬರು ಒರೆಸುತ್ತಿದ್ದರು. ಪ್ರತಿವರ್ಷ ಕಾರ್ತಿಕ ಮಾಸದಲ್ಲಿ ಪಂಡಿತರೊಬ್ಬರು ಬಂದು ತಿಂಗಳೆರಡು ತಿಂಗಳು ರಾಮಾಯಣ, ಭಾಗವತದ ಪುರಾಣ ಸಂಕೀರ್ತನೆ ಮಾಡುತ್ತಿದ್ದರು. ಕೀರ್ತನೆಯ ಕೊನೆಯ ದಿನ ಅಂದರೆ ಪೂರ್ಣಾಹುತಿಯ ದಿನ ಗ್ರಾಮಸ್ಥರೆಲ್ಲರೂ ಸೇರಿ ನೈವೇದ್ಯ ಅರ್ಪಿಸುತ್ತಿದ್ದರು. ನಮ್ಮ ಕುಟುಂಬದವರು ಎಲ್ಲರಿಗಿಂತಲೂ ಹೆಚ್ಚು ನೈವೇದ್ಯ ಕಾಣಿಕೆ ಅರ್ಪಿಸುತ್ತಿದ್ದರು. ಯಾಕೆಂದರೆ, ನಾವೆಲ್ಲರಿಗಿಂತಲೂ ಹೆಚ್ಚು ಶ್ರೀಮಂತರೆಂದು ಬಗೆಯಲಾಗಿತ್ತು. ಅನೇಕ ಸಲ ಕಥಾ ಸಂಕೀರ್ತನ, ಪುರಾಣ ಪ್ರವಚನದ ಕಾರ್ಯಕ್ರಮಗಳು ನಮ್ಮ ಮನೆಯಲ್ಲಿಯೇ ಜರುಗುತ್ತಿದ್ದವು. ಆಗ ಅವುಗಳಿಗೆ ತಗುಲುತ್ತಿದ್ದ ಖರ್ಚು ವೆಚ್ಚಗಳನ್ನು ನಾವೇ ವಹಿಸಿಕೊಳ್ಳುತ್ತಿದ್ದೆವು. ಕಥಾ ಸಂಕೀರ್ತನೆ ಸಾರ್ವಜನಿಕವಾಗಿ ಸಂಘಟಿಸಿದಾಗ ಗ್ರಾಮಸ್ಥರೆಲ್ಲರೂ ಅದರ ಜವಾಬ್ದಾರಿ ಹೊರುತ್ತಿದ್ದರು. ಪಂಡಿತಜೀಗೆ ಸರದಿಯ ಪ್ರಕಾರ ಒಬ್ಬೊಬ್ಬರ ಮನೆಯಲ್ಲಿ ಊಟೋಪಚಾರದ ವ್ಯವಸ್ಥೆ ಮಾಡಲಾಗುತ್ತಿತ್ತು. ಅದರಲ್ಲಿ ನಮ್ಮ ಕುಟುಂಬವೂ ಒಂದಿಷ್ಟು ಜವಾಬ್ದಾರಿ ವಹಿಸಿಕೊಳ್ಳುತ್ತಿತ್ತು. ಚಿಕ್ಕ ಮಕ್ಕಳಾಗಿದ್ದ ನಾವು ಕಥೆಗೆ ಕಿವಿಗೊಡುತ್ತಿದ್ದದ್ದು ಕಡಿಮೆಯೇ ಎಂದು ಹೇಳಬೇಕು. ಆದರೆ ಆರತಿ ಮಾಡುವ ಸಂದರ್ಭ ಬಂದಾಗ ನಾವೆಲ್ಲರೂ ಪ್ರಸಾದಕ್ಕಾಗಿ ಎದ್ದು ಕೂಡುತ್ತಿದ್ದೆವು.

ರಾಮಲೀಲಾ ವಿಶೇಷವಾಗಿ ಆಚರಿಸಲ್ಪಡುತ್ತಿದ್ದ ಹಬ್ಬವಾಗಿತ್ತು. ಅದರಿಂದ ನಮಗೆ ಮನೋರಂಜನೆ ದೊರೆಯುತ್ತಿದ್ದಂತೆ ಶಿಕ್ಷಣವೂ ದೊರೆಯುತ್ತಿತ್ತು. ರಾಮಲೀಲಾ ಕಾರ್ಯಕ್ರಮವನ್ನು ಪ್ರದರ್ಶಿಸಲು ಒಂದು ತಂಡ ಬರುತ್ತಿತ್ತು. ಆಗ ಹದಿನೈದರಿಂದ ಇಪ್ಪತ್ತು ದಿನಗಳವರೆಗೆ ಎಲ್ಲೆಲ್ಲೂ ಸದ್ದು ಗದ್ದಲವೋ ಗದ್ದಲ! ರಾಮಲೀಲಾ ಪ್ರದರ್ಶನದ ಕಾರ್ಯಕ್ರಮ ಒಮ್ಮೊಮ್ಮೆ ಜಮಾಪುರಿಯಲ್ಲಿ ನಡೆದರೆ, ಕೆಲವೊಮ್ಮೆ ಜಿರಾದೇಹಿಯಲ್ಲಿ ನಡೆಯುತ್ತಿತ್ತು. ಅವರು ಪ್ರದರ್ಶಿಸುತ್ತಿದ್ದ 'ಲೀಲಾ' ಕಾರ್ಯಕ್ರಮ ತುಂಬಾ ವಿಚಿತ್ರವಾಗಿತ್ತು. ಮೇಲಾಗಿ ರಾಮ, ಲಕ್ಷ್ಮಣ ಮುಂತಾದವರ ಪಾತ್ರ ವಹಿಸುತ್ತಿದ್ದ ವ್ಯಕ್ತಿಗಳು ಸುಶಿಕ್ಷಿತರಾಗಿದ್ದ ವ್ಯಕ್ತಿಗಳಾಗಿರಲಿಲ್ಲ. ಸಂಭಾಷಣೆಗಳಿಂದ ಯಾವುದೇ ಮನರಂಜನೆ ದೊರಕುತ್ತಿರಲಿಲ್ಲ. ಯಾಕೆಂದರೆ ಅವುಗಳನ್ನು ಹಿಮ್ಮೇಳದ ಕೆಲವು ವ್ಯಕ್ತಿಗಳು ಹೇಳಿದ ಮೇಲೆ ಪಾತ್ರಧಾರಿಗಳು ತಿರುಗಿ ಅವುಗಳನ್ನೇ ಮತ್ತೊಮ್ಮೆ ಹೇಳುತ್ತಿದ್ದರು. ಮನೋರಂಜನೆ ಏನಾದರೂ ದೊರೆಯುತ್ತಿದ್ದರೆ ಅದು ನಟರ ಅಭಿನಯದಿಂದ ಮತ್ತು ವಿಶೇಷವಾಗಿ ಕಾದಾಟದ

ದೃಶ್ಯಗಳಿಂದ. ರಾಮ ಪಟ್ಟಾಭಿಷೇಕದ ದಿನ ಜನರು ರಾಮನಿಗೆ ವಿಶೇಷ ಪೂಜೆ ಸಲ್ಲಿಸಿ ಅವನ ಪಾದದ ಬಳಿ ನೈವೇದ್ಯ ಮತ್ತು ಹಣದ ಕಾಣಿಕೆ ಅರ್ಪಿಸುತ್ತಿದ್ದರು. ರಾಮ, ಲಕ್ಷ್ಮಣ ಮತ್ತು ಜಾನಕಿಯ ಪಾತ್ರ ವಹಿಸುತ್ತಿದ್ದ ನಟರನ್ನು ಆಗಾಗ ಶ್ರೀಮಂತರ ಮನೆಗೆ ಕರೆದೊಯ್ಯಲಾಗುತ್ತಿತ್ತು. ಯಾಕೆಂದರೆ, ಪರದಾ ವ್ಯವಸ್ಥೆಯ ಕಾರಣದಿಂದಾಗಿ ಉಳ್ಳವರ ಮನೆಯ ಮಹಿಳೆಯರು 'ಲೀಲಾ' ನೋಡಲು ಹೊರಗೆ ಬರುತ್ತಿರಲಿಲ್ಲ. ಆದ್ದರಿಂದ ಮನೆಗೆ ಬಂದ ಪಾತ್ರಧಾರಿಗಳನ್ನು ಪೂಜಿಸಿ ಧನಕನಕಾದಿ ಕಾಣಿಕೆ ನೀಡುತ್ತಿದ್ದರು.

ಬಾಲ್ಯದಿಂದಲೂ ರಾಮಾಯಣದ ನೀತಿಪಾಠಗಳು ನನ್ನ ಮೇಲೆ ಪ್ರಭಾವ ಬೀರಿವೆ. ಗ್ರಾಮದಲ್ಲಿ ಸುಶಿಕ್ಷಿತರ ಸಂಖ್ಯೆ ತೀರಾ ಕಮ್ಮಿ ಇತ್ತು. ಆಗ ಅಲ್ಲಿ ಪ್ರಾಥಮಿಕ ಶಾಲೆಯೂ ಇರಲಿಲ್ಲ. ನಮಗೆ ಮನೆಯಲ್ಲಿಯೇ ಪಾಠ ಹೇಳುತ್ತಿದ್ದ ಮೌಲ್ವಿ ಸಾಹೇಬರು ತಿಂಗಳಿಗೆ ಮೂರು ನಾಲ್ಕು ರೂಪಾಯಿ ಸಂಭಾವನೆ ಪಡೆಯುತ್ತಿದ್ದರು. ಅವರ ದೈನಂದಿನ ಊಟ ಮಾತ್ರ ನಾವೇ ಒದಗಿಸುತ್ತಿದ್ದೆವು. ಗ್ರಾಮದಲ್ಲಿ ಇನ್ನೊಬ್ಬ ಮುಸ್ಲಿಂ ಇರುತ್ತಿದ್ದ. ಅವನು 'ಜುಲಾಹ' ಜಾತಿಯವನಾಗಿದ್ದನು. ಅವನಿಗೆ 'ಕೈಥೀ' ಬರೆಯುವುದು ಗೊತ್ತಿತ್ತು. ಜೊತೆಗೆ ಅವನಿಗೆ 'ಮುದುಕಟ್ಟಿ" ಲೆಕ್ಕಾಚಾರವೂ ಗೊತ್ತಿತ್ತು. ಹಾಗಾಗಿ, ತೂಕದ ಲೆಕ್ಕ ಮಾಡುವುದು, ಭೂಮಿಯ ಕ್ಷೇತ್ರಫಲ ಅಳೆಯುವುದು ಅವನಿಗೆ ಗೊತ್ತಿದ್ದ ಸಂಗತಿಗಳಾಗಿದ್ದವು. ಆಮೇಲೆ ಅವನು ಒಂದು ಶಾಲೆ ಆರಂಭಿಸಿದನು. ಗ್ರಾಮದ ಕೆಲವು ಮಕ್ಕಳು ಅಲ್ಲಿ ಅಭ್ಯಾಸಿಸತೊಡಗಿದರು.

ಪ್ರತಿದಿನ ಸಾಯಂಕಾಲ ಜನರು ಮಠದಲ್ಲಿ ಅಥವಾ ಬೇರೆ ಯಾರದಾದರೂ ಮನೆಯ ಮುಂದೆ ನೆರೆಯುತ್ತಿದ್ದರು. ಅಲ್ಲಿ ಒಬ್ಬ ವ್ಯಕ್ತಿ ರಾಮಚರಿತ ಮಾನಸದ ದ್ವಿಪದಿಗಳನ್ನು ಹಾಡುತ್ತಿದ್ದನು. ಉಳಿದವರು ಹಿಮ್ಮೇಳವಾಗಿ ಅದನ್ನೇ ಹಾಡುತ್ತಿದ್ದರು. ಝಾಲ್ ಮತ್ತು ಡೋಲಕ್‌ಗಳು ಅವರು ಬಳಸುತ್ತಿದ್ದ ಸಂಗೀತದ ವಾದ್ಯಗಳಾಗಿದ್ದವು. ಕಾರ್ಯಕ್ರಮದ ಆರಂಭದಲ್ಲಿ ಹಾಡಲಾಗುತ್ತಿದ್ದ ವಂದನಾ ಗೀತೆಯನ್ನು ಪ್ರತಿಯೊಬ್ಬರೂ ಹಾಡುವುದು ಕಡ್ಡಾಯವಾಗಿರುತ್ತಿತ್ತು. ಹೀಗಾಗಿ ಗ್ರಾಮದ ಅನಕ್ಷರಸ್ಥರೂ ರಾಮಾಯಣದ ಅನೇಕ ದ್ವಿಪದಿಗಳನ್ನು ಕಂಠಪಾಠ ಮಾಡಿಕೊಳ್ಳುವ ಅವಕಾಶ ಪಡೆದುಕೊಳ್ಳುತ್ತಿದ್ದರು. ವಿಶೇಷವಾಗಿ ಪ್ರಾರ್ಥನೆಗೆ ಸಂಬಂಧಿಸಿದ ದ್ವಿಪದಿಗಳು ಎಲ್ಲರ ತುದಿನಾಲಗೆಯ ಮೇಲಿದ್ದವು. ಹಾಗಾಗಿ ಅವರು ಸಂದರ್ಭೋಚಿತವಾಗಿ ಅವುಗಳನ್ನು ಹೇಳುತ್ತಿದ್ದರು.

ಹೋಳಿ ಹಬ್ಬ ಅತ್ಯಂತ ಖ್ಯಾತಿಯ ಹಬ್ಬವಾಗಿತ್ತು. ಬಡವಬಲ್ಲಿದರೆನ್ನದೆ ಎಲ್ಲರೂ ಸಾಮಾನ್ಯವಾಗಿ ಅದರಲ್ಲಿ ಭಾಗವಹಿಸುತ್ತಿದ್ದರು. ಜನರು ಬಸಂತ್ ಪಂಚಮಿಯ ದಿನದಿಂದಲೇ ಹೋಳಿ ಹಾಡುಗಳನ್ನು ಹಾಡಲು ಪ್ರಾರಂಭಿಸುತ್ತಿದ್ದರು. ಗ್ರಾಮೀಣ ಭಾಷೆಯಲ್ಲಿ ಅದನ್ನು 'ತಾಳ ಮದ್ದಲೆ' ಎಂದು ಕರೆಯಲಾಗುತ್ತಿತ್ತು. ಬಸಂತ್ ಪಂಚಮಿಯ ದಿನದಿಂದ ಹೋಳಿ ಹಬ್ಬದವರೆಗೆ ಜನರು ಅಲ್ಲಲ್ಲಿ ಗುಂಪುಗೂಡಿ ಝಾಲ್ ಮತ್ತು ಡೋಲಕ್‌ದೊಂದಿಗೆ ಸಣ್ಣ ತಮಟೆಗಳನ್ನು ಬಾರಿಸುತ್ತಾ ಹೋಳಿ ಹಬ್ಬದ ಪದಗಳನ್ನು ಹಾಡುತ್ತಿದ್ದರು.

ದೀಪಾವಳಿ ಹಬ್ಬವನ್ನು ಅತ್ಯಂತ ಉತ್ಸುಕತೆಯಿಂದ ಆಚರಿಸಲಾಗುತ್ತಿತ್ತು. ಹಬ್ಬಕ್ಕೆ ಕೆಲವು ದಿನಗಳ ಮುಂಚೆ ಜನರು ತಮ್ಮ ತಮ್ಮ ಮನೆಗಳನ್ನು ಸ್ವಚ್ಛಗೊಳಿಸಿ ಗೋಡೆಗಳನ್ನು ಸಗಣಿ ಇತ್ಯಾದಿಗಳಿಂದ ಸಾರಿಸುತ್ತಿದ್ದರು. ಕಂಬ, ಬಾಗಿಲುಗಳಿಗೆ ಎಣ್ಣೆ ಹಚ್ಚುತ್ತಿದ್ದರು. ಅಂದಿನ ದಿನಗಳಲ್ಲಿ

ಗಾಸ್‌ಲೇಟ್ ಬಳಸುತ್ತಿರಲಿಲ್ಲ. ಬಹುಶಃ ಆಗ ಅದು ಸಿಗುತ್ತಿರಲಿಲ್ಲ. ಆದ್ದರಿಂದ ಸಾಸುವೆ, ಅಗಸಿ ಅಥವಾ ಹರಳೆಣ್ಣೆಯನ್ನು ದೀಪಗಳಿಗೆ ಬಳಸುತ್ತಿದ್ದರು. ದೀಪಾವಳಿಯ ಸಂದರ್ಭದಲ್ಲಿ ಬಡವ ಬಲ್ಲಿದರೆನ್ನದೆ ಎಲ್ಲರೂ ತಂತಮ್ಮ ಮನೆಗಳ ಮುಂದೆ ಸಣ್ಣ ಸಣ್ಣ ಹಣತೆಗಳ ದೀಪ ಬೆಳಗಿಸುತ್ತಿದ್ದರು.

ಕಥಾ ವಾಚನ, ರಾಮಲೀಲಾ, ರಾಮಾಯಣ ಪಠಣ ಮುಂತಾದ ಚಟುವಟಿಕೆಗಳಿಂದ ಇಡೀ ಊರಿನಲ್ಲಿ ಧಾರ್ಮಿಕ ವಾತಾವರಣ ತುಂಬಿ ತುಳುಕುತ್ತಿತ್ತು. ಇಂಥ ಧರ್ಮ ಸಂಪನ್ನ ಹಿನ್ನೆಲೆಯಲ್ಲಿಯೇ ಹಬ್ಬದ ಉತ್ಸವಾದಿಗಳನ್ನು ಆಚರಿಸಲಾಗುತ್ತಿತ್ತು. ಇದಲ್ಲದೆ, ಮೊಹರಂ ಸಂದರ್ಬದಲ್ಲಿ 'ಲಾಜಿಯಾ' ಮೆರವಣಿಗೆ ನಡೆಸುವ ಸಂಪ್ರದಾಯವೂ ಅಲ್ಲಿತ್ತು. ಹಿಂದು, ಮುಸ್ಲಿಂರೆಲ್ಲರೂ ಮತಭೇದವಿಲ್ಲದೆ ಅದರಲ್ಲಿ ಭಾಗವಹಿಸುತ್ತಿದ್ದರು. ಜಿರಾದೇಹಿ ಮತ್ತು ಜಮಾಪೂರನಲ್ಲಿ ಕೆಲವೇ ಜನ ಶ್ರೀಮಂತರಿದ್ದರು. ಹೀಗಾಗಿ ಆ ಸ್ಥಿತಿವಂತರ ತಾಜಿಯಾಗಳು ಉಳಿದವರದವುಗಳಿಗಿಂತ ಆಕಾರದಲ್ಲಿ ದೊಡ್ಡದಾಗಿಯೂ ಹೆಚ್ಚು ಅಲಂಕೃತವಾಗಿಯೂ ಇರುತ್ತಿದ್ದವು. ಇವುಗಳಿಗೆ ಹೋಲಿಸಿದರೆ ಬಡ ಮುಸ್ಲಿಮರ ತಾಜಿಯಾಗಳು ಸಾಧಾರಣವಾಗಿರುತ್ತಿದ್ದವು. ಮೊಹರಂ ಹಬ್ಬದ ಅವಧಿಯಲ್ಲಿ ಗದೆ ತಿರುಗಿಸುವ, ಲಾಠಿ ತಿರುಗಿಸುವ ಇತ್ಯಾದಿ ಸಾಮು ಕವಾಯತುಗಳ ಉದ್ದರ್ಶನ, ಪ್ರದರ್ಶನಗಳು ದಿನಂಪ್ರತಿ ನಡೆಯುತ್ತಿದ್ದವು. 'ಪಹ್ಲಹ' ದಿನದಂದು ಒಂದು ದೊಡ್ಡ ಮೇಳವೇ ಜರುಗುತ್ತಿತ್ತು. ಬೇರೆ ಬೇರೆ ಊರುಗಳಿಂದ ಬರುತ್ತಿದ್ದ ತಾಜಿಯಾಗಳನ್ನು 'ಯಾ ಅಲಿ' ಅಥವಾ 'ಯಾಮಾಮ್' ಘೋಷಣೆಗಳನ್ನು ಕೂಗುತ್ತಾ ಕರಬಲಾಕೆ ತೆಗೆದುಕೊಂಡು ಹೋಗಲಾಗುತ್ತಿತ್ತು. ದಾರಿಯುದ್ದಕ್ಕೂ ದೊಣ್ಣೆವರಸೆಯ ಉದ್ದರ್ಶನ ನಡೆಸಲಾಗುತ್ತಿತ್ತು. ಹಿಂದೂ ಮುಸ್ಲಿಂ ಎನ್ನುವ ಬೇಧ ಭಾವ ಯಾರ ಮನದಲ್ಲಿಯೂ ಸುಳಿಯುತ್ತಿರಲಿಲ್ಲ. ಮಿಠಾಯಿ, ತಂಬಿಟ್ಟು ಹಂಚಲಾಗುತ್ತಿತ್ತು. ಎಲ್ಲರೂ ತಿನ್ನುತ್ತಿದ್ದರು.

ಹಿಂದೂಗಳು ಮೊಹರಂನಲ್ಲಿ ಭಾಗವಹಿಸುತ್ತಿದ್ದಂತೆಯೇ ಮುಸ್ಲಿಂರು ಹೋಳಿ ಉತ್ಸವದಲ್ಲಿ ಪಾಲ್ಗೊಳ್ಳುತ್ತಿದ್ದರು. ದಸರಾ, ದೀಪಾವಳಿ ಮತ್ತು ಹೋಳಿ ಹಬ್ಬದ ಸಂದರ್ಬದಲ್ಲಿ, ಮಕ್ಕಳಾಗಿದ್ದ ನಾವು ಮೌಲ್ವಿ ಸಾಹೇಬರು ಹೇಳಿಕೊಟ್ಟ 'ಈದಿ' ಪಾಠವನ್ನು ಹಿರಿಯರ ಮುಂದೆ ಓದುತ್ತಿದ್ದೆವು. ಹಿರಿಯರಿಂದ ದೊರೆತ ದುಡ್ಡನ್ನು ತೆಗೆದುಕೊಂಡು ಮೌಲ್ವಿ ಸಾಹೇಬರಿಗೆ ಕೊಡುತ್ತಿದ್ದೆವು.

ಅಂದಿನ ದಿನಗಳಲ್ಲಿ ಹಳ್ಳಿಗಳಲ್ಲಿ ವ್ಯಾಜ್ಯ, ಮೊಕದ್ದಮೆಗಳು ತುಂಬಾ ವಿರಳವಾಗಿದ್ದವು. ವಾದವಿವಾದಗಳೇನಾದರೂ ಇದ್ದಲ್ಲಿ ಊರಿನ ಪಂಚರೇ ಅವುಗಳನ್ನು ಬಗೆಹರಿಸುತ್ತಿದ್ದರು. ಯಾವುದಾದರೂ ವಿಷಯ ಪಂಚರ ಪರಿಶೀಲನೆಗೆ ಮೀರಿದ್ದೆಂದು ಅನ್ನಿಸಿದರೆ ಅದನ್ನು ನನ್ನ ಅಜ್ಜ ಅಥವಾ ಚಿಕ್ಕಪ್ಪನ ಮುಂದೆ ಸಾದರಪಡಿಸಲಾಗುತ್ತಿತ್ತು. ಅವರೂ ಪಂಚಾಯತಿನೊಂದಿಗೆ ಜೊತೆಗೂಡಿ ವಿವಾದವನ್ನು ಇತ್ಯರ್ಥಗೊಳಿಸುತ್ತಿದ್ದರು.

ರಾಜೇಂದ್ರ ಪ್ರಸಾದರ ಕೌಟುಂಬಿಕ ಜೀವನದ ಒಂದು ಗಮನಾರ್ಹ ಘಟನೆ ಇಲ್ಲಿ ಪ್ರಸ್ತಾಪಕ್ಕೆ ಯೋಗ್ಯವಾಗಿದೆ. ಅವರು ತಮ್ಮ ಆತ್ಮಚರಿತ್ರೆಯಲ್ಲಿ ಹೀಗೆ ಬರೆದಿದ್ದಾರೆ, "ನಾನು ಐದನೇ ಅಥವಾ ಆರನೆ ವರ್ಗದಲ್ಲಿದ್ದಾಗ ನನ್ನ ವಿವಾಹವಾಯಿತು." ಅವರ ವಿವಾಹವಾದದ್ದು

ರಾಜವಂಶ ದೇವಿಯೊಂದಿಗೆ 1896 ರಲ್ಲಿ. ಆಗ ಅವರಿಗೆ 12 ವರ್ಷ ವಯಸ್ಸು. ಆಗಿನ ಕಾಲದಲ್ಲಿ ವಿವಾಹದ ದೃಷ್ಟಿಯಿಂದ ವಯಸ್ಸು ಅಷ್ಟು ಮುಖ್ಯವಾದ ಅಂಶವಾಗಿರಲಿಲ್ಲ. ಅವರಿಗೆ ಇಬ್ಬರು ಮಕ್ಕಳು. ಮೊದಲ ಮಗ ಮೃತ್ಯುಂಜಯ ಪ್ರಸಾದ ಹುಟ್ಟಿದ್ದು 1906ರಲ್ಲಿ. ಮುಂದೆ 1909 ರಲ್ಲಿ ಹುಟ್ಟಿದ ಎರಡನೆಯ ಮಗನೇ ಧನಂಜಯ ಪ್ರಸಾದ.

ರಾಜೇಂದ್ರ ಪ್ರಸಾದ ಛಾಪ್ರಾದಲ್ಲಿ ಓದುತ್ತಿದ್ದಾಗ ಪಂಡಿತ ವಿಕ್ರಮಾದಿತ್ಯ ಮಿಶ್ರ ಅವರ ಸ್ಥಳೀಯ ಪಾಲಕರಾಗಿದ್ದರು. ಶ್ರೀ ಮಿಶ್ರ ಸನಾತನ ಧರ್ಮದ ಕಟ್ಟಾ ಅನುಯಾಯಿಯಾಗಿದ್ದರು. ಪ್ರತಿದಿನ ಬೆಳಿಗ್ಗೆ ಎದ್ದೊಡನೆಯೇ ಸರಯೂ ನದಿಯಲ್ಲಿ ಸ್ನಾನಾದಿಗಳನ್ನು ಮುಗಿಸಿ, ಸಮೀಪದಲ್ಲಿಯೇ ಇದ್ದ ಠಾಕೂರಬಾರಿಯಲ್ಲಿ ಸಂಧ್ಯಾವಂದನಾದಿಗಳನ್ನು ಸಾಂಗಗೊಳಿಸಿ, ಆಮೇಲೆ ತಮ್ಮ ಅಡಿಗೆಯನ್ನು ತಾವೇ ಮಾಡಿಕೊಳ್ಳುತ್ತಿದ್ದರು. ವಿಶ್ರಾಂತಿಯ ವೇಳೆಯಲ್ಲಿ ರಾಜೇಂದ್ರ ಪ್ರಸಾದರಿಗೆ ರಾಮಾಯಣ, ಮಹಾಭಾರತ ಮತ್ತು ಇತರ ಧಾರ್ಮಿಕ ಗ್ರಂಥಗಳಿಂದ ಅನೇಕ ಕತೆಗಳನ್ನು ಹೇಳುತ್ತಿದ್ದರು. ಡಾ॥ ರಾಜೇಂದ್ರ ಪ್ರಸಾದರು ವಿಕ್ರಮಾದಿತ್ಯ ಮಿಶ್ರ ಅವರ ಆರೋಗ್ಯಕರ ಪ್ರಭಾವದ ಕುರಿತು ತಮ್ಮ ಆತ್ಮ ಚರಿತ್ರೆಯಲ್ಲಿ ಹೀಗೆ ಬರೆದಿದ್ದಾರೆ: "ಅವರ ಸಹಚರ್ಯ ನನ್ನ ಮತ್ತು ಇನ್ನಿತರ ಹುಡುಗರ ಮೇಲೆ ನಿರೀಕ್ಷಿಸಿದಂತೆಯೇ ಅತ್ಯಂತ ಒಳ್ಳೆಯ ಪ್ರಭಾವ ಬೀರಿತು."

1749-5

## ಡಾ|| ರಾಜೇಂದ್ರ ಪ್ರಸಾದ : ಪ್ರಥಮ ರಾಷ್ಟ್ರಪತಿ

-ಎಸ್. ಡಬ್ಲ್ಯೂ. ಧಾಬೆ*

1950 ರಿಂದ 1962ರ ವರೆಗಿನ ಅವಧಿಯಲ್ಲಿ ನಮ್ಮ ದೇಶದ ಪ್ರಥಮ ರಾಷ್ಟ್ರಪತಿಯಾಗಿದ್ದ ಡಾ|| ರಾಜೇಂದ್ರ ಪ್ರಸಾದರು ಒಬ್ಬ ನುರಿತ ಹೋರಾಟಗಾರರಾಗಿದ್ದರು. ಭಾರತೀಯ ಪರಂಪರೆ ಮತ್ತು ಸಂಸ್ಕೃತಿಯ ಸಾಕಾರ ರೂಪದಂತಿದ್ದ ಅವರು ಒಬ್ಬ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಪ್ರಗಲ್ಭ ಪಾಂಡಿತ್ಯವುಳ್ಳರಾಗಿದ್ದ ಅವರು ಗಾಢವಾದ, ಉದಾತ್ತವಾದ ಚಿಂತನೆಗೆ ಹೆಸರಾಗಿದ್ದರು. ಅವರು ಜನಿಸಿದ್ದು ಬಿಹಾರ ರಾಜ್ಯದ ಜಿರಾದೇಹಿ ಎಂಬ ಗ್ರಾಮದಲ್ಲಿ (3ನೇ ಡಿಸೆಂಬರ್ 1884). ಅಂದರೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿಗಿಂತ ಒಂದು ವರ್ಷ ಮುಂಚೆ. ಅವರ ತಂದೆ ಮುನ್ಷಿ ಮಹಾದೇವ ಸಹಾಯ್ ಪರ್ಶಿಯನ್ ಮತ್ತು ಸಂಸ್ಕೃತಿ ಭಾಷೆಗಳ ಪ್ರಖ್ಯಾತ ವಿದ್ವಾಂಸರಾಗಿದ್ದರು. ಹಾಗೆಯೇ ಆಯುರ್ವೇದ ಮತ್ತು ಯುನಾನಿ ವೈದ್ಯಕೀಯ ವಿಧಾನದಲ್ಲಿ ಅವರಿಗೆ ಸಾಕಷ್ಟು ಪರಿಶ್ರಮವಿತ್ತು. ತಮ್ಮ ಸುತ್ತಲಿನ ಗ್ರಾಮಾಂತರ ಪ್ರದೇಶದಲ್ಲಿ ಅವರ ಹೆಸರು ಎಲ್ಲರ ಮನೆ ಮಾತಾಗಿತ್ತು. ಕಾರಣವೇನೆಂದರೆ, ಅಲ್ಲಿಯ ಆಸುಪಾಸಿನ ಗ್ರಾಮಗಳ ಅನೇಕ ರೋಗಿಗಳಿಗೆ ಅವರು ಉಚಿತವಾಗಿ ಉಪಚರಿಸುತ್ತಿದ್ದರು. ಡಾ|| ಪ್ರಸಾದರ ತಾಯಿ ಧಾರ್ಮಿಕ ಸ್ವಭಾವದ ಮಹಿಳೆಯಾಗಿದ್ದಳು. ಆಕೆ ಭಾರತೀಯ ಪರಂಪರೆ ಮತ್ತು ಸಂಸ್ಕೃತಿಯ ಅತ್ಯುತ್ತಮ ಅಂಶಗಳು ರಾಜೇನ್ ಬಾಬು ಅವರಲ್ಲಿ ಮೈವೆತ್ತುವಂತೆ ನೋಡಿಕೊಂಡರು. ಡಾ|| ಪ್ರಸಾದರ ಚಾರಿತ್ರ್ಯ ರೂಪಿಸುವಲ್ಲಿ ಅವರ ತಾಯಿಯ ಮಹತ್ತರ ಪ್ರಭಾವವಿತ್ತು. ಅವರ ಸಹೋದರ ಮಹಾದೇವ ಪ್ರಸಾದನಾದರೋ ನಿಜವಾಗಿಯೂ ಅವರ ಪಾಲಕ ಮತ್ತು ಮಾರ್ಗದಶಕರಾಗಿದ್ದರು.

ವಿಶ್ವವಿದ್ಯಾನಿಲಯದ ವ್ಯಾಸಂಗದ ಅವಧಿಯಲ್ಲಿ ಡಾ|| ಪ್ರಸಾದರದು ಉಜ್ವಲ ವಿದ್ಯಾರ್ಥಿ ಜೀವನ. ಅವರು ಪ್ರತಿ ಪರೀಕ್ಷೆಯಲ್ಲಿಯೂ ಪ್ರಪ್ರಥಮ ಸ್ಥಾನ ಪಡೆಯುತ್ತಿದ್ದರು. 1906 ರಲ್ಲಿ ಪದವೀಧರರಾದ ಅವರು 1908ರಲ್ಲಿ ಸ್ನಾತಕೋತ್ತರ ಅಧ್ಯಯನ ಮುಗಿಸಿದರು. ಏತನ್ಮಧ್ಯ ಅನೇಕ ವಿದ್ಯಾರ್ಥಿ ವೇತನಗಳು ಅವರ ಕಿರೀಟಕ್ಕೆ ಗರಿಗಟ್ಟಿದ್ದವು. ಕಾನೂನು ಅಭ್ಯಾಸ ಮುಗಿಸಿದ ಮೇಲೆ 1908ರಲ್ಲಿ ಅವರು ವಕೀಲಿ ವೃತ್ತಿಯನ್ನು ಆರಂಭಿಸಿದರು. ಕಠಿಣ ಪರಿಶ್ರಮ ಮತ್ತು ಕಾಯ್ದೆಯ ಬಗ್ಗೆಯಿದ್ದ ಆಳವಾದ ಜ್ಞಾನದಿಂದಾಗಿ ಅನತಿಕಾಲದಲ್ಲಿಯೇ ವಕೀಲಿ ವೃತ್ತಿಯಲ್ಲಿ ಅವರು ಖ್ಯಾತನಾಮರಾದರು. ಕಲ್ಕತ್ತಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿದ್ದ ಶ್ರೀ ಆಶುತೋಷ್ ಮುಖರ್ಜಿ ಒಮ್ಮೆ ಡಾ|| ಪ್ರಸಾದರ ವಾದ ವೈಖರಿಯನ್ನು ನೋಡಿ ನಿಬ್ಬೆರಗಾಗಿದ್ದರು. ಕಲ್ಕತ್ತಾ ವಿಶ್ವವಿದ್ಯಾನಿಲಯದ ಕುಲಾಧಿಪತಿಗಳೂ ಆಗಿದ್ದ ನ್ಯಾಯಮೂರ್ತಿ ಮುಖರ್ಜಿಯವರು ಡಾ|| ಪ್ರಸಾದರಿಗೆ ಕಾಯ್ದೆಯ ಪ್ರೊಫೆಸರ್ ಹುದ್ದೆ ನೀಡಿ ಗೌರವಿಸಿದರು. ಡಾ|| ಪ್ರಸಾದರು 1915 ರಲ್ಲಿ ಕಾಯ್ದೆಯ ಸ್ನಾತಕೋತ್ತರ ಪದವಿಯನ್ನೂ ಪ್ರಥಮ ದರ್ಜೆಯಲ್ಲಿ ಪಡೆದರು. ಮುಂದೆ ಎರಡೇ ವರ್ಷಗಳಲ್ಲಿ ಕಾನೂನಿನಲ್ಲಿ ಡಾಕ್ಟರೇಟ್ ಪದವಿ ಗಳಿಸಿದರು. ಆಮೇಲೆ ಉಚ್ಚನ್ಯಾಯಾಲಯದ ಒಂದು ಪೀಠ ಬಿಹಾರಿನಲ್ಲಿ ಸ್ಥಾಪಿತವಾದಾಗ, 1916ರಲ್ಲಿ ಡಾ|| ರಾಜೇಂದ್ರ ಪ್ರಸಾದರು ತಮ್ಮ ವಕೀಲಿ ವೃತ್ತಿಯನ್ನು ಬಂಗಾಲದಿಂದ ಬಿಹಾರಕ್ಕೆ, ಅಂದರೆ ಕಲ್ಕತ್ತಾದಿಂದ ಪಾಟ್ನಾಕ್ಕೆ, ಸ್ಥಳಾಂತರಿಸಿದರು. ಹದಿನೈದು ವರ್ಷಗಳ ದೀರ್ಘ ಅವಧಿಯಲ್ಲಿ

*ಶ್ರೀ ಧಾಬೆಯವರು ಮಾಜಿ ಸಂಸತ್‌ಸದಸ್ಯರು, (ರಾಜ್ಯಸಭಾ).

ತುಂಬ ಲಾಭದಾಯಕವಾಗಿ ಸ್ಥಾಪಿತವಾಗಿದ್ದ ತಮ್ಮ ವೃತ್ತಿಯನ್ನು ಕಲ್ಕತ್ತೆಯಿಂದ ಪಾಟ್ನಾಕ್ಕೆ ಸ್ಥಳಾಂತರಿಸುವಾಗ ಅವರು ಹಿಂದೆ ಮುಂದೆ ನೋಡಲಿಲ್ಲ. ಬಿಹಾರದಲ್ಲಾದರೋ ಅವರು ಪ್ರಮುಖ ವಕೀಲರಲ್ಲಿ ಒಬ್ಬರಾಗಿದ್ದರು. ಆಧ್ಯಾತ್ಮಿಕ ಸ್ವಭಾವದ ವ್ಯಕ್ತಿತ್ವ ಅವರದಾಗಿತ್ತಾದ್ದರಿಂದ ಅವರು ತಮ್ಮ ಆದಾಯದ ಬಹುಭಾಗವನ್ನು ಜನತೆಗಾಗಿ ವಿನಿಯೋಗಿಸುತ್ತಿದ್ದರು. ಸಾವಕಾಶವಾಗಿ ರಾಜಕೀಯ ಚಟುವಟಿಕೆಗಳಲ್ಲಿ ಆಸಕ್ತಿ ತಳೆಯುತ್ತಿದ್ದ ಅವರು ಕ್ರಮೇಣ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನತ್ತ ಆಕರ್ಷಿತರಾದರು. 1911 ರಲ್ಲಿ ಕಾಂಗ್ರೆಸ್ ಸೇರಿದ ಅವರು 1917 ರಲ್ಲಿ ಎ.ಐ.ಸಿ.ಸಿ. ಸದಸ್ಯರಾಗಿ ಚುನಾಯಿತರಾದರು. ಮುಂದೆ ಕೆಲವೆ ಕಾಲದ ನಂತರ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಅತ್ಯುನ್ನತ ನೇತಾರರಲ್ಲಿ ಒಬ್ಬರಾಗಿ ಹೊರಹೊಮ್ಮಿದರು.

ಚಂಪಾರಣ:-

ನೀಲಿ ಬೆಳೆಗಾರ ಭೂಮಾಲೀಕರು ತಮ್ಮ ಬಡ ಗೇಣಿದಾರರ ಮೇಲೆ ದಬ್ಬಾಳಿಕೆ, ದೌರ್ಜನ್ಯವೆಸಗುತ್ತಿದ್ದರು. ಅವರನ್ನು ಎಲ್ಲ ವಿಧದ ಕಷ್ಟ ಕಾರ್ಪಣ್ಯಗಳಿಗೆ ಗುರಿ ಮಾಡುತ್ತಿದ್ದರು. ಅದನ್ನು ಪ್ರತಿಭಟಿಸಿ ಉತ್ತರ ಬಿಹಾರದಲ್ಲಿ ಒಂದು ದೊಡ್ಡ ಜನಾಂದೋಲನ ಮೂಡಿ ಬಂದಿತು. ಡಾ|| ರಾಜೇಂದ್ರ ಪ್ರಸಾದರು ಈ ಆಂದೋಲನದಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಅವರ ಹೋರಾಟದ ಪರಿಣಾಮವಾಗಿ 1918 ರಲ್ಲಿ ಚಂಪಾರಣ ಕೃಷಿ ಕಾಯ್ದೆ ಜಾರಿಗೆ ಬಂದಿತು. ದೀರ್ಘ ಕಾಲದಿಂದ ಸಾಮಾಜಿಕ ಅನ್ಯಾಯಗಳಿಗೆ ತುತ್ತಾಗುತ್ತ ಬಂದಿದ್ದ ರೈತಾಪಿ ಜನತೆಗೆ ಈ ಕಾಯ್ದೆಯಿಂದ ಸಾಕಷ್ಟು ಪರಿಹಾರ ದೊರೆಯಿತು. ವಾಸ್ತವವಾಗಿ ಸಾಮಾಜಿಕ ನ್ಯಾಯಕ್ಕಾಗಿ ನಡೆದ ಆ ಹೋರಾಟ ಜನತೆಯಲ್ಲಿ ಒಂದು ರಾಷ್ಟ್ರೀಯ ಭಾವನೆ ಅಂಕುರಿಸುವಂತೆ ಮಾಡಿತು. ಯಾವುದೇ ಕ್ಷೇತ್ರದಲ್ಲಾಗಲಿ, ಜನತೆಗೆ ನಿರ್ಮಲ ಭಾವದಿಂದ ನಾವು ಸಲ್ಲಿಸುವ ಸೇವೆ ಅಂತಿಮವಾಗಿ ರಾಷ್ಟ್ರಕ್ಕೆ ರಾಜಕೀಯವಾಗಿಯೂ ಉಪಯುಕ್ತವಾಗುತ್ತದೆ ಎಂಬುದಕ್ಕೆ ಈ ಹೋರಾಟ ಒಂದು ಜ್ವಲಂತ ಸಾಕ್ಷಿಯಾಗಿದೆ ಎಂದು ಗಾಂಧೀಜಿ ಬರೆದರು. ಈ ಹೋರಾಟ ನೈತಿಕ ಮೌಲ್ಯಗಳಿಗೆ, ಅಹಿಂಸೆ, ಉದ್ಧಾರವಾದ ಸಾಮಾಜಿಕ ಸುಧಾರಣೆ ಮತ್ತು ಆರ್ಥಿಕ ದುರ್ಬಳಕೆಯ ನಿರ್ಮೂಲನೆ ಮುಂತಾದವುಗಳಿಗೆ ಒತ್ತು ಕೊಟ್ಟಿತ್ತು. ಈ ದೃಷ್ಟಿಯಿಂದ ಚಂಪಾರಣವು ನವರಾಷ್ಟ್ರೀಯ ವಾದದ ತೊಟ್ಟಿಲವಾಗಿ ಪರಿಣಮಿಸಿತು. ಈ ಹೋರಾಟದಲ್ಲಿ ತಮ್ಮನ್ನು ನಖಸಿಖಾಂತವಾಗಿ ತೊಡಗಿಸಿಕೊಂಡಿದ್ದ ಡಾ|| ರಾಜೇಂದ್ರ ಪ್ರಸಾದರು ಅದನ್ನು ತೀವ್ರಗೊಳಿಸುವಲ್ಲಿ ಸಕ್ರಿಯ ಪಾತ್ರ ವಹಿಸಿದ್ದರು. ಹಾಗಾಗಿ ಅದರ ಯಶಸ್ಸಿನ ಸಿಂಹಪಾಲು ಅವರಿಗೇ ಸಲ್ಲಬೇಕು. ನಿಜವೆಂದರೆ, ಈ ಆಂದೋಲನ ಅವರ ಬದುಕಿನಲ್ಲಿ ಆಮೂಲಾಗ್ರ ಬದಲಾವಣೆಗೆ ನಾಂದಿ ಹಾಡಿತು. ಅವರನ್ನು ಹೆಚ್ಚು ಹೆಚ್ಚಾಗಿ ಮಹಾತ್ಮ ಗಾಂಧೀಜಿಯ ಸಮೀಪಕ್ಕೆ ತಂದಿತು. ರಾಜೇನ್ ಬಾಬು ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷ ಪದವಿಯನ್ನು ವಹಿಸಿಕೊಂಡ ಮೇಲೆ ಇಂಥ ಅನೇಕ ಆಂದೋಲನಗಳಿಗೆ ಇಂಬುಗೊಟ್ಟರು.

ಸ್ವಾತಂತ್ರ್ಯ ಹೋರಾಟ:

ಮಹಾತ್ಮಾ ಗಾಂಧೀಜಿಯ ನೈಜ ಅನುಯಾಯಿಯಾಗಿ ಡಾ|| ರಾಜೇಂದ್ರ ಪ್ರಸಾದರು ಸ್ವಾತಂತ್ರ್ಯ ಹೋರಾಟದಲ್ಲಿ ಕ್ರಿಯಾಶೀಲ ಆಸಕ್ತಿಯಿಂದ ತೊಡಗಿಕೊಂಡಿದ್ದರು. ಭಾರತದ

ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷ ಸ್ಥಾನವನ್ನು ಮೂರು ಸಲ ಅಲಂಕರಿಸುವ ಭಾಗ್ಯ ಅವರದಾಗಿತ್ತು. ರಾಷ್ಟ್ರೀಯ ಮಹತ್ವದ ಇಂಥ ಸಂಘಟನೆಯ ಅಧ್ಯಕ್ಷರಾಗಿ ತಮ್ಮ ನಿರ್ಮಲ ನಿಲುವಿನ ಮೂಲಕ ಅದರ ನಡವಳಿಕೆಗಳಿಗೆ ನಿರ್ದೇಶನ, ಮಾರ್ಗದರ್ಶನ ಮಾಡುತ್ತಿದ್ದರು. ಕಾಂಗ್ರೆಸ್ ಸಂಘಟಿಸಿದ್ದ ಅಸಹಕಾರ ಮತ್ತು ಸ್ವದೇಶೀ ಆಂದೋಲನಗಳು ಚಿರಪರಿಚಿತವಾಗಿವೆ. 1920ರ ಡಿಸೆಂಬರ್‌ನಲ್ಲಿ ನಾಗಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಅಸಹಕಾರ ಆಂದೋಲನದ ಕಾರ್ಯಕ್ರಮ ಅಂತಿಮ ಸ್ವರೂಪ ಪಡೆಯಿತು. 1919ರ ಏಪ್ರಿಲ್ 6 ರಂದು ಪಾಟ್ನಾದಲ್ಲಿ ಗಂಗಾನದಿಯ ದಡದ ಮೇಲಿನ ವಿಶಾಲ ಮೈದಾನದಲ್ಲಿ ಅವರು ಮಾಡಿದ ಭಾಷಣ ಚರಿತ್ರಾರ್ಹ. ಕಾಂಗ್ರೆಸ್ಸಿನ ಧ್ಯೇಯ ಸಂಪೂರ್ಣ ಸ್ವರಾಜ್ಯ, ಅದಕ್ಕಿಂತಲೂ ಲವಲೇಶವೂ ಕಡಿಮೆಯಿದ್ದರೆ ಅದರಿಂದ ನಮಗೆ ತೃಪ್ತಿಯಿಲ್ಲ ಎಂದು ನೆರೆದ ಜನಸ್ತೋಮವನ್ನು ಉದ್ದೇಶಿಸಿ ಉಗ್ಘಡಿಸಿದ್ದರು. ಸತ್ಯಾಗ್ರಹವೆಂಬುದೊಂದು ಧರ್ಮಯುದ್ಧ, ಒಬ್ಬ ನಿಜವಾದ ಸತ್ಯಾಗ್ರಾಹಿ ಏಕೋ ದೃಢ ಮನಸ್ಸಿನವನಾಗಿರುತ್ತಾನೆ; ಅಹಿಂಸೆ ಅವನ ಜೀವನದ ಉಸಿರಾಗಿರುತ್ತದೆ. ತನಗೆದುರಾಗುವ ಕಷ್ಟ ಕಾರ್ಪಣ್ಯಗಳನ್ನು ತಾಳ್ಮೆಯಿಂದ ಸಹಿಸುವ ಸಹನಾಮೂರ್ತಿ ಅವನಾಗಿರುತ್ತಾನೆ. ಅಸಹಕಾರ ಆಂದೋಲನವು ಸತ್ಯಾಗ್ರಹದ ಒಂದು ವಿಸ್ತರಣೆಯಾಗಿತ್ತು, ಅಷ್ಟೆ. ಆಗಿನ ಸತ್ಯಾಗ್ರಹಿಗಳ ಬೇಡಿಕೆಯೆಂದರೆ, ತಮ್ಮನ್ನು ತಾವೇ ಆಳಿಕೊಳ್ಳುವ, ತಮ್ಮ ವ್ಯವಹಾರಗಳ ಸಂಚಾಲನೆಗೆ ಬೇಕಾಗುವ ಕಾನೂನುಗಳನ್ನು ತಾವೇ ಮಾಡುವ ಇಲ್ಲವೆ ಮುರಿಯುವ ಸರ್ವತಂತ್ರ ಸ್ವತಂತ್ರ ಹಕ್ಕು. ಸ್ವಾತಂತ್ರ್ಯ ಹೋರಾಟದ ಇತಿಹಾಸ ಜನಜನಿತವಾಗಿದೆ. ರಾಜೇನ್ ಬಾಬು ಕಾಂಗ್ರೆಸ್‌ನ ಅಧ್ಯಕ್ಷರಾಗಿ ನಡೆಸಿದ ಅಧಿವೇಶನ ನಲ್ವತ್ತನೆಯದು. ಅದು 1934 ರ ಅಕ್ಟೋಬರ್‌ನಲ್ಲಿ ಮುಂಬಯಿಯಲ್ಲಿ ಜರುಗಿತು. ಅನಂತರ ಅವರು ಕಾಂಗ್ರೆಸ್ ಅಧ್ಯಕ್ಷರಾಗಿ ದೇಶದ ಉದ್ದಗಲಕ್ಕೂ ಸಂಚರಿಸಿದರು. 1936ರ ಲಖ್ನೌ ಅಧಿವೇಶನದ ನಂತರ ಅವರು ನಾಗಪುರದಲ್ಲಿ ನಡೆದ ಹಿಂದೀ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದರು. ಹಿಂದಿಯೇತರ ಪ್ರದೇಶಗಳಲ್ಲಿ ಹಿಂದೀ ಭಾಷಾ ಪ್ರಚಾರದ ಉದ್ದೇಶದಿಂದ ರಚನೆಯಾದ ರಾಷ್ಟ್ರ ಭಾಷಾ ಪ್ರಚಾರ ಸಮಿತಿಗೂ ಅವರು ಅಧ್ಯಕ್ಷರಾಗಿದ್ದರು. ಈ ಸಂಘಟನೆ ಇವತ್ತಿಗೂ ಸ್ತುತ್ಯಾರ್ಹ ಕೆಲಸ ಮಾಡುತ್ತಿದೆ. 1939ರಲ್ಲಿ ಜಬಲ್‌ಪೂರ ಸಮೀಪ ನಡೆದ ತ್ರಿಪುರಿ ಅಧಿವೇಶನದಲ್ಲಿ ನೇತಾಜಿ ಸುಭಾಷಚಂದ್ರ ಬೋಸ್‌ರು ಅಧ್ಯಕ್ಷರಾಗಿ ಚುನಾಯಿತರಾದರು. ಆದರೆ ಕೆಲವು ಭಿನ್ನಾಭಿಪ್ರಾಯಗಳ ಕಾರಣದಿಂದಾಗಿ ಅವರು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಆಗ ಡಾ|| ರಾಜೇಂದ್ರ ಪ್ರಸಾದರು ಮತ್ತೊಮ್ಮೆ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಚುನಾಯಿತರಾದರು. ಭಾರತ ಬಿಟ್ಟು ತೊಲಗಿ ಆಂದೋಲನದಲ್ಲಿ ಅವರು ವಹಿಸಿದ ಪಾತ್ರ ಸಕ್ರಿಯವಾಗಿತ್ತು. ಕೇಂದ್ರೀಯ ಶಾಸನ ಸಭೆಗೆ ಚುನಾವಣೆಗಳು ನಡೆದಾಗ ಅದರಲ್ಲಿ ಕಾಂಗ್ರೆಸ್ ಭಾಗವಹಿಸಿ ಬಹುಸಂಖ್ಯಾತ ಸ್ಥಾನಗಳನ್ನು ಗೆದ್ದುಕೊಂಡಿತು. ಕಾಂಗ್ರೆಸ್, ಕ್ಯಾಬಿನೆಟ್ ಮಿಶನ್ನಿನ ಪ್ರಸ್ತಾವನೆಗಳನ್ನು ಅಂಗೀಕರಿಸಿ ಭಾರತದ ಪ್ರಜಾಪ್ರಭುತ್ವ ಒಕ್ಕೂಟಕ್ಕೆ ಒಂದು ಸಂವಿಧಾನವನ್ನು ರಚಿಸುವ ಉದ್ದೇಶದಿಂದ ಸಂವಿಧಾನ ಸಭೆಯನ್ನು ರಚಿಸಲು ಮುಂದಾಯಿತು. ಪ್ರಯುಕ್ತ ಸಂವಿಧಾನ ಸಭೆಗೆ ಚುನಾವಣೆಗಳು ನಡೆದು ಕಾಂಗ್ರೆಸ್ ಸದಸ್ಯರು ಬಹು ಸಂಖ್ಯೆಯಲ್ಲಿ ಚುನಾಯಿತರಾದರು. 1946ರ ಸೆಪ್ಟೆಂಬರ್ 2 ರಂದು 12 ಜನ ಮಂತ್ರಿಗಳುಳ್ಳ ಒಂದು ಮಧ್ಯಂತರ ಸರಕಾರ ರಚನೆಯಾಯಿತು. ಅದರಲ್ಲಿ ಡಾ|| ರಾಜೇಂದ್ರ ಪ್ರಸಾದರು ಕೃಷಿ ಮತ್ತು ಆಹಾರ ಇಲಾಖೆಯ ಸಂಪುಟ ದರ್ಜೆಯ ಮಂತ್ರಿಯಾದರು. ಮಂತ್ರಿಗಳಾಗಿ ದೇಶದ ಆಹಾರ ಸ್ವಾವಲಂಬನೆಗೆ ಅವರು

ತೆಗೆದುಕೊಂಡ ಸೂಕ್ತ ಕ್ರಮಗಳಿಂದಾಗಿ, ದೇಶದ ಆಹಾರದ ಸ್ಥಿತಿ ತಕ್ಕಮಟ್ಟಿಗೆ ಸುಧಾರಿಸಿತು. ಆಹಾರ ಧಾನ್ಯಗಳ ಆಮದನ್ನು ತಗ್ಗಿಸಿ ದೇಶೀ ಉತ್ಪಾದನೆ ಮತ್ತು ಸಂಗ್ರಹಣೆಯ ಮೇಲೆ ಹೆಚ್ಚಿನ ಒತ್ತು ಕೊಟ್ಟರು.

1946ರ ಡಿಸೆಂಬರ್ 11 ರಂದು ಸಂವಿಧಾನ ಸಭೆಗೆ ಚುನಾವಣೆ ನಡೆದವು. ರಾಜೇಂದ್ರ ಪ್ರಸಾದರು ಅವಿರೋಧವಾಗಿ ಅಧ್ಯಕ್ಷರಾಗಿ ಆಯ್ಕೆಗೊಂಡರು. ಅನೇಕ ವರ್ಷಗಳಿಂದ ಅವರು ನಮ್ಮ ರಾಷ್ಟ್ರಕ್ಕೆ ಸಲ್ಲಿಸಿದ ಅತುಲ ಸೇವೆಗೆ ದೊರೆತ ಮನ್ನಣೆ ಅದಾಗಿತ್ತು. ಆ ಸಂದರ್ಭದಲ್ಲಿ ಅನೇಕ ಸದಸ್ಯರು ಅವರನ್ನು ಅಭಿನಂದಿಸಿ ಮಾತನಾಡಿದ್ದರು. ಡಾ|| ಎಸ್. ರಾಧಾಕೃಷ್ಣನ್ ಮತ್ತು ಎನ್.ಜಿ.ಯಸ್.ಯ ಅಯ್ಯಂಗಾರ್‌ರು, ಡಾ|| ಪ್ರಸಾದರು ರಾಷ್ಟ್ರೀಯ ಬದುಕಿಗೆ ಸಲ್ಲಿಸಿದ ಪ್ರಶಂಸನೀಯ ಕಾಣಿಕೆಯನ್ನು ಕೊಂಡಾಡಿದರು. ಶ್ರೀಮತಿ ಸರೋಜಿನಿ ನಾಯ್ಡು ಅವರು ಆಡಿದ ಅಭಿನಂದನೆಯ ಮಾತುಗಳು ಗಮನಾರ್ಹವಾಗಿವೆ.

"ನನಗೊಮ್ಮೆ ಡಾ|| ರಾಜೇಂದ್ರ ಪ್ರಸಾದರನ್ನು ಕುರಿತು ಎರಡೇ ಸಾಲಿನ ಮಹಾಕಾವ್ಯವೊಂದನ್ನು ರಚಿಸಲು ಕೇಳಿಕೊಳ್ಳಲಾಗಿತ್ತು. ಒಂದೇ ಒಂದು ಸಾಲಿನಲ್ಲಿ ಡ್ಹಾ|| ರಾಜೇಂದ್ರ ಪ್ರಸಾದರ ಕುರಿತು ನನ್ನ ಕಾವ್ಯ ದೃಷ್ಟಿಯನ್ನು ಮಂಡಿಸಬೇಕೆಂದು ಕೋರಲಾಯಿತು. ಅದಕ್ಕೆ ನಾನು ಹೇಳಿದೆ, 'ಮಧುರ ಮಧುವಿನಲ್ಲಿದ್ದ ಸ್ವರ್ಣ ಲೇಖನಿಯೊಂದು ದೊರೆತುದಾದರೆ ನನ್ನ ಕೈಗೆ, ನಾನು ಹಾಗೆ ಮಾಡಬಲ್ಲೆ; ಯಾಕೆಂದರೆ, ಅವರ ಗುಣಗಾನ ಮಾಡಲು ಶಬ್ದಗಳು ಸಾಲವು. ಅವರ ವ್ಯಕ್ತಿತ್ವಕ್ಕೆ ಅರ್ಹ ಅಭಿನಂದನೆ ಸಲ್ಲಿಸಲು ಶಬ್ದಗಳು ಸಿಗವು. ಅಷ್ಟು ಅನಿರ್ವಚನೀಯವಾದದ್ದು ಅವರ ವ್ಯಕ್ತಿತ್ವ. ಸರ್ವರ ಹೃದಯಗೆದ್ದ ಬಿಚ್ಚುಗತ್ತಿನ ಶೂರ ಸೈನಿಕನನ್ನಾಗಿ ನಾನು ಅವರನ್ನು ಕಲ್ಪಿಸಿಕೊಳ್ಳಲಾರೆ. ಬದಲಾಗಿ, ಕೈಯಲ್ಲಿ ಶಾಂತಿ ಸಮಚಿಯ ಸಂಕೇತ 'ಲಿಲ್ಲಿ' ದೇವದೂತನನ್ನಾಗಿ ಮಾತ್ರ ಪರಿಭಾವಿಸಬಲ್ಲೆ. ಯಾಕೆಂದರೆ, ಜನಮನವನ್ನವರು ಸೂರೆಗೊಂಡದ್ದು ಶಾಂತಿ ಸೈರಣೆಯ ಮೂಲಕ. ಅವರ ಶಕ್ತಿ ಸಾಮರ್ಥ್ಯದ ಒಂದಂಗವಾಗಿದ್ದ ಮಾಧುರ್ಯ, ಅನುಭವದ ಭಾಗವಾಗಿದ್ದ ಅವಧಾನ, ಸ್ಫಟಿಕಸ್ಪಷ್ಟ ನಿರ್ಮಲ ದೃಷ್ಟಿ, ಸೃಜನಶೀಲ ಪ್ರತಿಭೆ ಮತ್ತು ಸೃಷ್ಟಿಶೀಲ ಶ್ರದ್ಧೆ ಈ ಮುಂತಾದ ಗುಣಗಳು ಅವರನ್ನು ಭಗವಾನ್ ಬುದ್ಧನ ಪದತಲದ-ಸಾನಿಧ್ಯಕ್ಕೆ ತಂದು ನಿಲ್ಲಿಸಿದ್ದವು. ಅವರು ಇಂದಿನ ಭಾರತದ ಭಾಗ್ಯವಿಧಾತನ ಸಂಕೇತವಾಗಿದ್ದಾರೆ. ಇನ್ನು ಪಾರತಂತ್ರ್ಯದ ಬಂಧನದಲ್ಲಿರುವ ನಮ್ಮ ತಾಯಿಯ ವಿಮೋಚನೆಗೆ ದಾರಿ ರೂಪಿಸುವಲ್ಲಿ ಅವರು ಸಹಾಯಮಾಡಬಲ್ಲರೆಂಬ ಭರವಸೆ ನನಗಿದೆ. ಸ್ವಾತಂತ್ರ್ಯ, ಪ್ರೀತಿ ಮತ್ತು ಶಾಂತಿಯ ಕೈದೀವಿಗೆ ಹಿಡಿದು ಮುನ್ನಡೆಯುತ್ತಾ, ನಮ್ಮ ನ್ಯಾಯಯುತ ಸ್ಥಾನಕ್ಕೆ ನಾವು ತಲುಪುವಂತೆ ಮಾಡಬಲ್ಲರೆಂಬ ವಿಶ್ವಾಸ ನನಗಿದೆ."

ಸಂವಿಧಾನ ಸಭೆಯ ಉದ್ಘಾಟನಾ ಭಾಷಣದಲ್ಲಿಯೇ ತಮ್ಮ ನಿಲುವನ್ನು ಪ್ರತಿಬಿಂಬಿಸುವ ಕೆಲವು ಮಾತುಗಳನ್ನು ಅವರು ಹೇಳಿದರು. ಆ ಸಭೆಗೆ ಕೆಲವು ಮಿತಿಗಳಿರಬಹುದಾದರೂ ಅದೊಂದು ಸ್ವತಂತ್ರ, ಸ್ವಾಯತ್ತ ಹಾಗೂ ಸ್ವಯಂನಿರ್ಧಾರಕ ನಿಕಾಯವೆಂದು ಘೋಷಿಸಿದರು. ಅದರ ನಡವಳಿಕೆಗಳಲ್ಲಿ ಯಾವುದೇ ಹೊರಗಿನ ಶಕ್ತಿ, ಅಧಿಕಾರಗಳು ತಲೆದೂರಿಸುವಂತಿಲ್ಲ. ಹೊರಗಿನವರಾರೂ ಅದರ ನಿರ್ಧಾರಗಳನ್ನು ವಿರೋಧಿಸುವುದಾಗಲೀ ಬದಲಿಸುವುದಾಗಲೀ ಅಥವಾ ಮಾರ್ಪಡಿಸುವುದಾಗಲೀ ಸಾಧ್ಯವಿಲ್ಲವೆಂದು ಘೋಷಿಸಿದರು. ಅವರು ತಮ್ಮ ಸಮಾರೋಪ ಭಾಷಣದಲ್ಲಿ ಆಡಿದ ಮಾತುಗಳು ಇವು:

"ಮಹಿಳೆಯರೆ, ಮಹನೀಯರೆ, ಸ್ವತಂತ್ರ ಭಾರತದ ಸಂವಿಧಾನವೊಂದನ್ನು ರಚಿಸಲು ಇಲ್ಲಿ ಸಮಾವೇಶಗೊಂಡಿರುವ ನಾವು ಎಲ್ಲ ಮಿತಿಗಳನ್ನು ಮೆಟ್ಟಿ ನಿಂತು ಇಡೀ ಪ್ರಪಂಚದ ಮುಂದೆ ಒಂದು ಮಾದರಿಯ ಸಂವಿಧಾನವನ್ನು ಸಾದರಪಡಿಸಲಿದ್ದೇವೆ. ನಮ್ಮೆಲ್ಲ ಜನರ, ಎಲ್ಲ ಗುಂಪು, ಸಮುದಾಯಗಳ, ಈ ವಿಶಾಲ ದೇಶದಲ್ಲಿ ವಾಸಿಸುತ್ತಿರುವ ಸರ್ವ ಧರ್ಮೀಯರ ಆಶೆ ಆಕಾಂಕ್ಷೆಗಳನ್ನು ತಣಿಸಬಲ್ಲ ಸಂವಿಧಾನ ಇದಾಗಲಿದೆ. ಪ್ರತಿಯೊಬ್ಬರಿಗೂ ಕ್ರಿಯಾ ಸ್ವಾತಂತ್ರ್ಯ, ಚಿಂತನ ಸ್ವಾತಂತ್ರ್ಯ ಮತ್ತು ಶ್ರದ್ಧೆ ಆರಾಧನೆಯ ಸ್ವಾತಂತ್ರ್ಯವನ್ನು ಕೊಡಮಾಡುವ ಸಂವಿಧಾನ ಇದು. ಪ್ರತಿಯೊಬ್ಬನೂ ತನ್ನ ಸಾಮರ್ಥ್ಯದ ತುತ್ತ ತುದಿಗೆ ತಲುಪಲು ಅವಕಾಶವನ್ನೀಯುವ ಇದು ಪ್ರತಿಯೊಬ್ಬರಿಗೂ ಎಲ್ಲ ವಿಧದ ಸ್ವಾತಂತ್ರ್ಯವನ್ನೂ ಖಾತ್ರಿಯಾಗಿ ಕಲ್ಪಿಸಿ ಕೊಡಲಿದೆ."

ಸಂವಿಧಾನ ಸಭೆಯು ನಮ್ಮ ದೇಶಕ್ಕೆ ಒಂದು ಪ್ರಜಾತಾಂತ್ರಿಕ ಸಂವಿಧಾನವನ್ನು ನೀಡಿ ಅದ್ಭುತ ಕಾರ್ಯ ಮಾಡಿರುವುದು ಈಗ ಎಲ್ಲರಿಗೂ ಗೊತ್ತಿರುವ ಸಂಗತಿ. ನಮ್ಮ ಸಂವಿಧಾನ ಪ್ರತಿಯೊಬ್ಬ ಭಾರತೀಯನ ಅಭಿಮಾನದ ಸಂಕೇತವಾಗಿದೆ. 1950ರ ಜನವರಿ 26 ರಂದು ಡಾ॥ ರಾಜೇಂದ್ರ ಪ್ರಸಾದರು ಮಧ್ಯಂತರ ಅವಧಿಗೆ ರಾಷ್ಟ್ರಪತಿಯಾಗಿ ಚುನಾಯಿತರಾದರು. 1952 ರಲ್ಲಿ ನಡೆದ ಪ್ರಪ್ರಥಮ ಸಂವಿಧಾನಿಕ ರಾಷ್ಟ್ರಪತಿಯ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ಡಾ॥ ಪ್ರಸಾದರು ಮತ್ತೆ ರಾಷ್ಟ್ರಪತಿಯಾಗಿ ಚುನಾಯಿತರಾದರು. ಮಗದೊಮ್ಮೆ 1957 ರಲ್ಲಿ ರಾಷ್ಟ್ರಪತಿಯ ಸ್ಥಾನ ಅವರಿಂದಲೇ ಅಲಂಕೃತವಾಯಿತು. ಭಾರತದ ರಾಷ್ಟ್ರಾಧ್ಯಕ್ಷರಾಗಿ ಡಾ॥. ರಾಜೇಂದ್ರ ಪ್ರಸಾದರು ಅನೇಕ ರಾಷ್ಟ್ರಗಳನ್ನು ಸಂದರ್ಶಿಸಿ, ನಮ್ಮ ಜಾಗತಿಕ ಸದ್ಭಾವದ ಸಂದೇಶವನ್ನು ತಲುಪಿಸಿದರು. ಅವರೊಬ್ಬ ಅವಿರತ ಬರಹಗಾರರೂ ಆಗಿದ್ದರು. ಅವರ ಲೇಖನಿಯಿಂದ ಹೊರಬಂದ ಗ್ರಂಥಗಳು ಅನೇಕ. ಅವುಗಳಲ್ಲಿ ಮುಖ್ಯವಾದುವು: 'ಚಂಪಾರಣದಲ್ಲಿ ಸತ್ಯಾಗ್ರಹ', 'ಮಹಾತ್ಮಾಗಾಂಧಿ ಮತ್ತು ಬಿಹಾರ - ಕೆಲವು ಸ್ಮೃತಿಗಳು,' 'ಭಾರತ ಒಯಿತು,' 'ಬಾಪೂಜಿಯ ಹೆಜ್ಜೆಯಲ್ಲಿ', - ಇವೆಲ್ಲವೂ ಮೂಲ ಹಿಂದಿಯಲ್ಲಿವೆ. ಅವರ ಆತ್ಮಚರಿತ್ರೆ ಒಂದು ಉತ್ಕೃಷ್ಟ ಕೃತಿಯಾಗಿದೆ. 1958ರಲ್ಲಿ ಪಂಡಿತ ಜವಾಹರಲಾಲ್ ನೆಹರೂ ಅವರು ಕೇರಳ ಶಾಸನ ಸಭೆಯ ಕೇಂದ್ರ ಭವನದಲ್ಲಿ ರಾಜೇನ್ ಬಾಬು ಅವರ ಭಾವಚಿತ್ರವನ್ನು ಅನಾವರಣ ಮಾಡಿ ಆಡಿದ ಮಾತುಗಳು ರಾಜೇನ್ ಬಾಬು ಅವರ ವ್ಯಕ್ತಿತ್ವವನ್ನು ಬಹು ಸಮರ್ಥವಾಗಿ ನಿರೂಪಿಸಿವೆ:

"ರಾಜೇನ್ ಬಾಬು ಅವರು ನಮ್ಮ ದೇಶದ ಅತ್ಯುನ್ನತ ಹುದ್ದೆಯನ್ನು ಅಲಂಕರಿಸಿರುವರಷ್ಟೇ ಅಲ್ಲ, ಅವರ ವ್ಯಕ್ತಿತ್ವ ಇನ್ನೂ ಹೆಚ್ಚಿನದನ್ನು ಧ್ವನಿಸುತ್ತದೆ. ಯಾಕೆಂದರೆ, ನಾವು ಹಾಯ್ದು ಬಂದ ಬಾರತದ ರಾಷ್ಟ್ರೀಯ ಹೋರಾಟದ ಮೂರ್ತರೂಪದಂತಿತ್ತು ಅವರ ಬದುಕು. ಡಾ॥ ರಾಜೇಂದ್ರ ಪ್ರಸಾದರು ಭಾರತೀಯ ಬದುಕಿನ ಮೂಲ ಮೌಲ್ಯಗಳನ್ನು, ಸಂಪ್ರದಾಯಗಳನ್ನು ಪ್ರತಿನಿಧಿಸುತ್ತಿದ್ದರು. ಅದರಲ್ಲಿಯೂ ವಿಶೇಷವಾಗಿ, ಗ್ರಾಮೀಣ ಭಾರತ ಅವರಲ್ಲಿ ಮೈವೆತ್ತಂತಿತ್ತು. ಅವರು ಒಬ್ಬ ಸಾಮಾನ್ಯ ರೈತನಾಗಿರಲಿಲ್ಲವೆಂಬ ಮಾತು ಬೇರೆ. ಅವರೊಬ್ಬ ಮಹಾ ಮೇಧಾವಿಯಾಗಿದ್ದರೂ ಶ್ರೇಷ್ಠ ಶಿಕ್ಷಣ ತಜ್ಞರಾಗಿದ್ದರು. ಮೇಲಾಗಿ, ಒಬ್ಬ ಸಮರ್ಥ ನ್ಯಾಯವಾದಿಗಳೂ ಆಗಿದ್ದರು."

ಡಾ|| ರಾಜೇಂದ್ರ ಪ್ರಸಾದರು 1963 ರಲ್ಲಿ ನಮ್ಮನ್ನಗಲಿದರು. ರಾಷ್ಟ್ರೀಯ ಬದುಕಿಗೆ ನಿಸ್ವಾರ್ಥ ಸೇವೆ ಸಲ್ಲಿಸಿದ ಅವರ ಸಮರ್ಪಣಾ ಭಾವದ ಜೀವನ ದೇಶದ ಪ್ರತಿಯೊಬ್ಬ ಪ್ರಜೆಯೂ ಅನುಸರಿಸಬೇಕಾದ ಮಾದರಿಯ ನಿದರ್ಶನವಾಗಿದೆ.

ನಾಗಪುರ ಸತ್ಯಾಗ್ರಹ:-

ನಾನು ನಾಗಪುರ ನಗರದಿಂದ ಬಂದವನು. ಹೀಗಾಗಿ ಸಹಜವಾಗಿಯೇ ಆ ಮಹಾ ವ್ಯಕ್ತಿಯ ಬಗ್ಗೆ ನನಗೆ ತುಂಬಾ ಭಾವುಕ ಸಂಬಂಧವಿದೆ. ನಾಗಪುರ ಮತ್ತು ವರ್ಧಾಕ್ಕೆ ಆಗಾಗ ಭೇಟ್ಟಿ ನೀಡುತ್ತಿದ್ದ ಅವರಿಗೆ ಈ ಭಾಗದ ಬಗ್ಗೆ ಬಹಳ ಆತ್ಮೀಯ ಸಂಬಂಧವಿತ್ತು. 1923 ರಲ್ಲಿ ನಾಗಪುರದಲ್ಲಿ ಧ್ವಜಾ ಸತ್ಯಾಗ್ರಹ ನಡೆಸಲಾಯಿತು. ಭಾರತದ ರಾಷ್ಟ್ರೀಯ ಧ್ವಜದ ಗೌರವದ ರಕ್ಷಣೆಗಾಗಿ ಹೂಡಲಾಗಿದ್ದ ಆ ಸತ್ಯಾಗ್ರಹದ ನೇತೃತ್ವವನ್ನು ಆಗ ಪ್ರಖ್ಯಾತ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಪಂಡಿತ ಸುಂದರಲಾಲರು ವಹಿಸಿಕೊಂಡಿದ್ದರು. ಅವರು ಕೇಂದ್ರ ಪ್ರದೇಶಗಳ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಆ ಸತ್ಯಾಗ್ರಹ ಮೊದಲು ಆರಂಭವಾದದ್ದು ಜಬಲಪುರದಿಂದ. ಚುನಾಯಿತ ಮಂಡಲಿ ಮುನಸಿಪಾಲ್ ಕಟ್ಟಡದ ಮೇಲೆ ರಾಷ್ಟ್ರೀಯ ಧ್ವಜಾರೋಹಣ ಮಾಡಲು ಬ್ರಿಟಿಷ್ ಸರಕಾರ ಪರವಾನಿಗೆ ನೀಡದಿದ್ದುದರಿಂದ ಧ್ವಜಾ ಸತ್ಯಾಗ್ರಹ ಮೊದಲಿಟ್ಟಿತು. ಕೆಲಕಾಲದಲ್ಲಿಯೇ ಆ ಆಂದೋಲನ ಕೇಂದ್ರ ಪ್ರಾಂತಗಳು, ಬೆರಾಡ್ ರಾಜ್ಯಗಳು ಮತ್ತು ನಾಗಪೂರಿನಲ್ಲಿ ಹಬ್ಬಿ ಹರಡಿತು. 1923ರ ಮೇ 1ರ ಆದೇಶದ ಮೂಲಕ ಸರಕಾರ ರಾಷ್ಟ್ರಧ್ವಜದೊಂದಿಗೆ ನಡೆಸುವ ಎಲ್ಲ ಮೆರವಣಿಗೆಗಳನ್ನು ನಿಷೇಧಿಸಿತು. ಆ ಸತ್ಯಾಗ್ರಹದಲ್ಲಿ ಜಮನಾಲಾಲ್ ಬಜಾಜ್ ಮತ್ತು ಶ್ರೀ ವಲ್ಲಭಭಾಯಿ ಪಟೇಲರು ಬಂಧಿಸಲ್ಪಟ್ಟರು. ಆಮೇಲೆ ಅದು ರಾಷ್ಟ್ರೀಯ ಧ್ವಜದ ಪರಮ ಗೌರವವನ್ನು ಕಾಪಾಡುವ ರಾಷ್ಟ್ರೀಯ ಆಂದೋಲನವಾಗಿ ಬೆಳೆಯಿತು. ಈ ಸತ್ಯಾಗ್ರಹದಲ್ಲಿ ಬಿಹಾರ ಕೂಡ ಹಿಂದೆ ಬೀಳಲಿಲ್ಲ. ಡಾ|| ರಾಜೇಂದ್ರ ಪ್ರಸಾದರ ಮುಖಂಡತ್ವದಲ್ಲಿ ನೂರಾರು ಜನ ಸ್ವಯಂಸೇವಕರು ಚಳುವಳಿಗಿಳಿದು ಬಂಧನಕ್ಕೊಳಗಾದರು. ಹರದೇವ ನಾರಾಯಣ ಸಿಂಗ್ ಎಂಬ ಒಬ್ಬ ಸತ್ಯಾಗ್ರಹಿ ನಾಗಪೂರ ಕೇಂದ್ರ ಜೇಲಿನಲ್ಲಿ ಅಸುನೀಗಿ ಹುತಾತ್ಮನಾದ. ಜುಲೈ 18 ರಂದು ಭಾರತದ ಉದ್ದಗಲಕ್ಕೂ ಧ್ವಜಾ ದಿನಾಚರಣೆಯನ್ನು ನಡೆಸಲಾಯಿತು. ನಾಗಪೂರ ಜೇಲಿನಲ್ಲಿಯೇ ಸರ್ದಾರ್ ಪಟೇಲ ಮತ್ತು ರಾಜೇನ್ ಬಾಬು ಅವರು ಆತ್ಮೀಯ ಗೆಳೆಯರಾದರು. ರಾಜೇನ್ ಬಾಬು ತಮ್ಮದೊಂದು ಭಾಷಣದಲ್ಲಿ ಹೇಳಿದಂತೆ, ತಿರಂಗಿ ಧ್ವಜವು ಕೇವಲ ಒಂದು ಬಣ್ಣದ ಬಟ್ಟೆಯ ತುಕಡಿಯಲ್ಲ; ಅದು ಉದಾತ್ತವಾದಕ್ಕೆ ಸಂಕೇತವಾಗಿದೆ. ಯಾಕೆಂದರೆ, ಅದರಲ್ಲಡಗಿದ ಭಾವ ಪಾರಮಾರ್ಥಿಕವಾದದ್ದು. ಅದು ರಾಷ್ಟ್ರದ ಆತ್ಮಗೌರವ, ಸ್ವಾಭಿಮಾನವನ್ನು ಸಂಕೇತಿಸುತ್ತದೆಯಾದ್ದರಿಂದ ಅದಕ್ಕಾಗುವ ಕಿಂಚಿತ್ ಅವಮಾನವನ್ನೂ ಯಾವುದೇ ಆತ್ಮಪ್ರತಿಷ್ಠೆಯುಳ್ಳ ವ್ಯಕ್ತಿ ಸಹಿಲಾರ.

ಡಾ|| ರಾಜೇಂದ್ರ ಪ್ರಸಾದರದು ಅನುಪಮ ವ್ಯಕ್ತಿತ್ವ. ಅವರು ಭಾರತದ ಚರಿತ್ರೆಯ ಮೇಲೆ ತಮ್ಮ ಘಟನಾಪೂರ್ಣ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋಗಿದ್ದಾರೆ. ಸರಳ ಬದುಕು, ಉದಾತ್ತ ಚಿಂತನೆ ಅವರ ಜೀವನದ ಪರಮಗಂತವ್ಯವಾಗಿತ್ತು. ತಮ್ಮ ಸರಳತೆ, ಸ್ನೇಹಶೀಲ ಸ್ವಭಾವ ಹಾಗೂ ಪಾರದರ್ಶಕ ಪ್ರಾಮಾಣಿಕತೆ, ಭಾರತದ ಅಸಂಖ್ಯಾತ ಶ್ರಮಜೀವಿಗಳ ಬಗ್ಗೆ ಅವರಿಗಿದ್ದ ಅಕ್ಕರೆ ಮತ್ತು ತಾಯಿ ಭಾರತೀಯ ಬಗ್ಗೆ ತೋರುತ್ತಿದ್ದ ಅನ್ಯಾದೃಶ ಭಕ್ತಿ - ಮುಂತಾದ ಕಾರಣಗಳಿಂದಾಗಿ ಅವರು ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು.

# ಡಾ॥ ರಾಜೇಂದ್ರ ಪ್ರಸಾದ: ಭಾರತದ ಪ್ರಥಮ ರಾಷ್ಟ್ರಪತಿಯಾಗಿ ನಿರ್ವಹಿಸಿದ ಪಾತ್ರ

-ಪ್ರೋ॥ ಬಲರಾಜ್ ಮಧೋಕ್*

ನಮ್ಮ ಗಣರಾಜ್ಯದ ಪ್ರಥಮ ಅಧ್ಯಕ್ಷರಾಗಿ ಚುನಾಯಿತರಾಗಿದ್ದ ಡಾ॥ ರಾಜೇಂದ್ರ ಪ್ರಸಾದರು ಆ ಮುಂಚೆ ಭಾರತದ ಸಂವಿಧಾನ ಸಭೆಯ ಅಧ್ಯಕ್ಷರೂ ಆಗಿದ್ದರು. ಸರಳ ಜೀವನ ಶ್ರೇಷ್ಠ ಚಿಂತನದ ಹಿಂದೂ ಆದರ್ಶದ ಸಾಕಾರವಾಗಿದ್ದ ಅವರು ಪ್ರಕಾಂಡ ಪಂಡಿತರೂ ಆಗಿದ್ದರು. ನಿಶಿತಮತಿಯ ನ್ಯಾಯವಾದಿಯಾಗಿದ್ದ ಅವರು ಗಣ್ಯ ಸ್ವಾತಂತ್ರ್ಯ ಹೋರಾಟಗಾರರೂ ಆಗಿದ್ದರು. ನಮ್ಮ ರಾಷ್ಟ್ರೀಯ ಬದುಕಿನ ವಿವಿಧ ಕ್ಷೇತ್ರಗಳ ಮೇಲೆ ಅವರು ಬಿಟ್ಟು ಹೋಗಿರುವ ಪ್ರಭಾವ ಅಚ್ಚಳಿಯದೆ ಉಳಿದಿದೆ. ಇವೆಲ್ಲಕ್ಕೂ ಮಿಗಿಲಾಗಿ ನವಜಾತ ಭಾರತೀಯ ಗಣರಾಜ್ಯದ ಅಧ್ಯಕ್ಷರಾಗಿ ಅದಕ್ಕೆ ಒಂದು ಭದ್ರ ನೆಲೆಯೊದಗಿಸುವಲ್ಲಿ ಅವರು ನಿರ್ವಹಿಸಿದ ಪಾತ್ರ ಅವರಿಗೆ ಪರಮಕೀರ್ತಿಯನ್ನೇ ತಂದಿದೆ. ಒಬ್ಬ ಮಹಾನ್ ನ್ಯಾಯವಾದಿಗಳಾಗಿದ್ದ ಡಾ॥ ಪ್ರಸಾದರು ಸಂವಿಧಾನ ಸಭೆಯ ಅಧ್ಯಕ್ಷರೂ ಆಗಿ ಸೇವೆ ಸಲ್ಲಿಸಿದ್ದರಿಂದ ಅವರಿಗೆ ಭಾರತದ ಸಂವಿಧಾನದ ಶಬ್ದ ಮತ್ತು ಭಾವದ ಮೇಲೆ ಸಂಪೂರ್ಣ ಹತೋಟಿಯಿತ್ತು. ಭಾರತದ ಪ್ರಥಮ ರಾಷ್ಟ್ರಪತಿಯಾಗಿ ಅದನ್ನು 'ಸಂರಕ್ಷಿಸುವ, ಕಾಪಾಡುವ ಮತ್ತು ಸಮರ್ಥಿಸುವ' ಹೊಣೆ ಅವರ ಹೆಗಲಿಗೇ ಬಂದಿತ್ತು.

ಭಾರತದ ಸಂವಿಧಾನದ ಪ್ರಕಾರ ಅಧ್ಯಕ್ಷರೇ ಭಾರತದ ರಾಜಕೀಯ ವ್ಯವಸ್ಥೆಯ ಸರ್ವೋಚ್ಚ ಸ್ಥಾನದಲ್ಲಿರುತ್ತಾರೆ. ಅವರು ರಾಷ್ಟ್ರದ ಪ್ರಮುಖರಾಗಿರುತ್ತಾರೇ ಅಷ್ಟೇ ಅಲ್ಲ, ಇಡಿ ಕಾರ್ಯಾಂಗದ ಅಧಿಕಾರವೂ ಅವರ ಕೈಯಲ್ಲಿಯೇ ಇರುತ್ತದೆ. ದೇಶದ ರಕ್ಷಣಾ ಪಡೆಗಳ ಸರ್ವೋಚ್ಚ ದಂಡನಾಯಕರೂ ಅವರೇ ಆಗಿರುತ್ತಾರೆ. ಜನತೆಯಿಂದ ಚುನಾಯಿತ ಪ್ರತಿನಿಧಿಗಳ ಮೂಲಕ ಚುನಾಯಿಸಲ್ಪಡುವ ಭಾರತದ ರಾಷ್ಟ್ರಪತಿಗಳು ಇಡೀ ದೇಶವನ್ನು ಪ್ರತಿನಿಧಿಸುತ್ತಾರೆ ವಿನಃ ಯಾವುದೇ ಪಕ್ಷ ಗುಂಪು ಅಥವಾ ವರ್ಗವನ್ನಲ್ಲ.

ಡಾ॥ ರಾಜೇಂದ್ರ ಪ್ರಸಾದರು ರಾಷ್ಟ್ರಪತಿಗಳಾಗಿ, ರಾಷ್ಟ್ರಪತಿ ಮತ್ತು ಪ್ರಧಾನಮಂತ್ರಿಗಳ ನಡುವಿನ ಸಂಬಂಧ, ಸಹಸಂಬಂಧಗಳನ್ನು ಕುರಿತಂತೆ, ನಮ್ಮ ಸ್ವತಂತ್ರ ಭಾರತದ ಪ್ರಥಮ ಪ್ರಧಾನಿಗಳಾಗಿದ್ದ ಪಂ.ಜವಾಹರಲಾಲ್ ನೆಹರೂ ಅವರೊಂದಿಗಿನ ತಮ್ಮ ವೈಯಕ್ತಿಕ ಸಂಬಂಧಗಳನ್ನು ಕುರಿತಂತೆ ಅನೇಕ ಸತ್ಸಂಪ್ರದಾಯಗಳನ್ನು ಸಂಸ್ಥಾಪಿಸಿದ್ದಾರೆ. ಇವು ಭಾರತದ ಸಂವಿಧಾನವನ್ನರಿಯಲು, ಅದರ ಮೌಲ್ಯಮಾಪನ ನಡೆಸಲು ಪ್ರಾಯೋಗಿಕವಾಗಿ ಅತ್ಯಂತ ಮಹತ್ವದ ಸಂಗತಿಗಳಾಗಿವೆ. ಕೇಂದ್ರ ಮತ್ತು ರಾಜ್ಯಗಳ ವಿಷಯದಲ್ಲೆಂತೋ ಅಂತೆಯೇ ನಮ್ಮ ಗಣರಾಜ್ಯದ ಆರಂಭದ ದಿನಗಳಲ್ಲಿ ರಾಷ್ಟ್ರಪತಿ ಮತ್ತು ಪ್ರಧಾನ ಮಂತ್ರಿಗಳ ನಡುವಿನ ಸಂಬಂಧಗಳು ಈ ಇಬ್ಬರು ನೇತಾರರು ಕಾಂಗ್ರೆಸ್ ಪಕ್ಷದ ಸಹೋದ್ಯೋಗಿಗಳಾಗಿ, ಸಹ ಕಾರ್ಯಕರ್ತರಾಗಿ, ಕಾರ್ಯ ನಿರ್ವಹಿಸಿದ ವೈಯಕ್ತಿಕ ಸ್ನೇಹ ಸಂಬಂಧದ ನೆಲೆಯಿಂದಲೇ ನಿರ್ದೇಶಿಸಲ್ಪಡುತ್ತಿದ್ದವೇ ಹೊರತು ಕಟ್ಟುನಿಟ್ಟಿನ ಸಂವಿಧಾನಿಕ ಅಗತ್ಯತೆಗಳ ಮೂಲಕವಲ್ಲ. ವಾಸ್ತವವಾಗಿ, ಭಾರತದ ರಾಷ್ಟ್ರದ ಪ್ರಮುಖ ಮತ್ತು ಸರ್ಕಾರದ ಮುಖ್ಯಸ್ಥರ ನಡುವಿನ ಈ ಸಂವಿಧಾನೇತರ ಸಂಬಂಧವು ಭಾರತದ ಸಂವಿಧಾನ ಸಂಪೂರ್ಣವಾಗಿ ಕಾರ್ಯಪ್ರವೃತ್ತವಾಗುವುದಕ್ಕೆ ಒಂದು ರೀತಿಯ ಅಡಚಣೆಯಾಯಿತೆಂದೇ ಹೇಳಬೇಕು.

---

*ಪ್ರೊ॥ ಮಧೋಕ್, ಮಾಜಿ ಸಂಸತ್ ಸದಸ್ಯರು (ಲೋಕಸಭೆ).

1950ರ ಡಿಸೆಂಬರ್ 3 ರಲ್ಲಿ ಸರ್ದಾರ್.ಪಟೇಲರ ಮರಣಾ ನಂತರ ಸರ್ಕಾರ ಮತ್ತು ಕಾಂಗ್ರೆಸ್ ಸಂಘಟನೆಯಲ್ಲಿ ಪಂಡಿತ ನೆಹರೂ ಅವರದ್ದೇ ಸರ್ವೋನ್ನತ ಸ್ಥಾನ. ಒಬ್ಬ ತ್ಯಾಗ ಶೀಲ ಮತ್ತು ಕರ್ತವ್ಯ ನಿಷ್ಠ ಕಾಂಗ್ರೆಸಿಗರಾಗಿ ಪಂಡಿತ ನೆಹರೂ ಅವರನ್ನು ಯಾವಾಗಲೂ ತಮ್ಮ ನೇತಾರರೆಂದು ಭಾವಿಸಿದ್ದರು. ಪಂಡಿತ ನೆಹರೂ ಅವರಿಗೆ ತಮ್ಮ ಉನ್ನತ ಸ್ಥಾನಮಾನದ ಪ್ರಜ್ಞೆಯಿತ್ತು. ಅವರು ರಾಜೇಂದ್ರ ಬಾಬು ಅವರಿಂದ ಅಲಂಕರಿಸಲ್ಪಟ್ಟಿದ್ದ ರಾಷ್ಟ್ರಪತಿ ಹುದ್ದೆಯ ಸ್ಥಾನಮಾನಗಳಿಗೆ ಹೆಚ್ಚಿನ ಗೌರವ ಕೊಡುತ್ತಿದ್ದರಾದರೂ, ವಾಸ್ತವವಾಗಿ, ಪ್ರಧಾನ ಮಂತ್ರಿಯ ಮೇಲ್ಮೆಯ ಬಗ್ಗೆಯೇ ಅವರಿಗೆ ನಂಬುಗೆಯಿತ್ತು. ತತ್ವತಃ ಅಲ್ಲದಿದ್ದರೂ ಆಚರಣೆಯಲ್ಲಿ ಅವರು ಪ್ರಧಾನ ಮಂತ್ರಿಯ ಪಟ್ಟವೇ ದೊಡ್ಡದೆಂದು ಭಾವಿಸಿದ್ದರು. ಅವರ ಮತ್ತು ಡಾ|| ರಾಜೇಂದ್ರ ಪ್ರಸಾದರ ನಡುವಿನ ವೈಯಕ್ತಿಕ ಸಂಬಂಧವು, ದೇಶದ ರಾಜಕೀಯ ವ್ಯವಸ್ಥೆಯ ಎರಡು ಪರಮೋನ್ನತ ಹುದ್ದೆಗಳ ನಡುವಿನ ಸಂಬಂಧವು ಕಟ್ಟುನಿಟ್ಟಾಗಿ ಸಂವಿಧಾನಿಕವಾಗಿ ಇರದಂತೆ ಒಂದಿಷ್ಟು ತಿರುಚಿ ಹಾಕಿತ್ತು. ಅಂದರೆ ಅವರೀರ್ವರ ನಡುವಿನ ಸಂಬಂಧ ಸಂವಿಧಾನದ ಶಬ್ದ-ಭಾವಕ್ಕೆ ಅನುಗುಣವಾಗಿರದೆ, ಅದು ವೈಯಕ್ತಿಕ ನೆಲೆಯಿಂದ ನಿಯಂತ್ರಿಸಲ್ಪಡುತ್ತಿತ್ತು.

ಸಂವಿಧಾನವು ರಾಷ್ಟ್ರಾಧ್ಯಕ್ಷರ ಮೇಲೆ ಅಧೀಕ್ಷಕನ ಜವಾಬ್ದಾರಿಯುನ್ನೂ ಹೊರಿಸುತ್ತದೆಯೆನ್ನುವುದು ಡಾ|| ರಾಜೇಂದ್ರ ಪ್ರಸಾದರಿಗೆ ಚೆನ್ನಾಗಿ ಗೊತ್ತಿತ್ತು. ಆದರೆ ಎಲ್ಲ ಸಂದರ್ಭಗಳಲ್ಲಿಯೂ ಅವರು ತುಂಬ ನಯ, ವಿನಯದಿಂದ ನಡೆದುಕೊಳ್ಳುತ್ತಿದ್ದರು. ಆದರೆ ಪಂಡಿತ ನೆಹರೂ ಆದರೋ ತೀರ ಜಿಗುಟು ಸ್ವಭಾವದವರಾಗಿದ್ದರು. ಸಾಂದರ್ಭಿಕ ಚಾಕಚಕ್ಯತೆ ಅವರ ಎದ್ದುಕಾಣುವ ಗುಣವಾಗಿತ್ತು. ಹೀಗಾಗಿ, ತಮ್ಮಿಬ್ಬರ ಮಧ್ಯೆ ಭಿನ್ನತೆಯ ಬಿರುಕು ಸೃಷ್ಟಿಸುವ ಯಾವುದೇ ಸನ್ನಿವೇಶಕ್ಕೆ ಅವಕಾಶ ಕೊಡುತ್ತಿರಲಿಲ್ಲ. ದೇಶ ವಿದೇಶಗಳ ಎಲ್ಲ ಬೆಳವಣಿಗೆಗಳ ಕುರಿತು ಅಧ್ಯಕ್ಷರಿಗೆ ಆಗಾಗ ಮಾಹಿತಿ ನೀಡುವುದು, ಎಲ್ಲ ಮಹತ್ವದ ತೀರ್ಮಾನ ಮತ್ತು ನೇಮಕಾತಿಗಳಿಗೆ ಅಧ್ಯಕ್ಷರ ಅನುಮತಿ, ಅನುಮೋದನೆ ಪಡೆಯುವುದು ಪಂಡಿತ ನೆಹರೂ ಅವರ ಪರಿಪಾಠವಾಗಿತ್ತು. ಡಾ|| ರಾಜೇಂದ್ರ ಪ್ರಸಾದರು ತಮ್ಮ ಹೆಸರಿನಲ್ಲಿ ಮಾಡಲಾದ ಎಲ್ಲ ನೇಮಕಾತಿ ಮತ್ತು ತೀರ್ಮಾನಗಳನ್ನು ಜಾಗರೂಕತೆಯಿಂದ ಪರಿಶೀಲಿಸುತ್ತಿದ್ದರು. ಹೀಗಾಗಿ ಅವರ ಅಭಿಪ್ರಾಯಕ್ಕೆ ಯಾವಾಗಲೂ ತೂಕವಿರುತ್ತಿತ್ತು. ವಿಶೇಷವಾಗಿ, ಯಾವುದೇ ರಾಜ್ಯದಲ್ಲಿ ರಾಷ್ಟ್ರಪತಿ ಆಳ್ವಿಕೆ ಹೇರುವ ಕುರಿತು ಅವರು ಬಹು ಎಚ್ಚರಿಕೆಯಿಂದ ನಡೆದುಕೊಳ್ಳುತ್ತಿದ್ದರು. ಆದರೆ ತಮ್ಮ ಎರಡನೆ ಅವಧಿಯ ಕೊನೆಯ ಭಾಗದಲ್ಲಿ ಅವರಿಗೆ ಕೆಲವು ಕಹಿ ಅನುಭವಗಳಾದವು. ರಾಷ್ಟ್ರಪತಿ ಹುದ್ದೆಯು ವಾಸ್ತವವಾಗಿ ಅಪಮೌಲ್ಯಗೊಳ್ಳುತ್ತಿದೆಯೆಂಬ ಭಾವನೆ ಅವರಲ್ಲಿ ಬೆಳೆಯತೊಡಗಿತ್ತು. ಭಾರತೀಯ ಸಂವಿಧಾನದಲ್ಲಿ ರಾಷ್ಟ್ರಪತಿಯ ಸ್ಥಾನಮಾನ ಕುರಿತು ಆಳವಾದ ಪುನರ್‌ವಿಶ್ಲೇಷಣೆ ನಡೆಯಬೇಕೆಂದು ಸಲಹೆಯಿತ್ತಿದ್ದರು.

ಡಾ|| ರಾಜೇಂದ್ರ ಪ್ರಸಾದರು ರಾಷ್ಟ್ರಪತಿಗಳಾಗಿರುವವರೆಗೆ ಆ ಪರಮೋನ್ನತ ಹುದ್ದೆಯ ಘನತೆ, ಪ್ರತಿಷ್ಠೆಯನ್ನು ಕಾಯ್ದುಕೊಂಡಿದ್ದರು. ಲೋಕಸಭೆಯ ಯುವ ಸದಸ್ಯನಾಗಿ ಅವರೊಂದಿಗೆ ಅನೇಕ ಸಾರ್ವಜನಿಕ ಮಹತ್ವದ ವಿಷಯಗಳ ಕುರಿತು ಚರ್ಚಿಸುವ ಸದಾವಕಾಶ ನನಗೆ ಲಭಿಸಿತ್ತು. ಅವರ ಸದ್ವಿನಯ, ಘನತೆ ಮತ್ತು ರಾಷ್ಟ್ರದ ಆಗು ಹೋಗುಗಳ ಬಗ್ಗೆ ಅವರಿಗಿದ್ದ ವಿಶಾಲ ಜ್ಞಾನ

ಮತ್ತು ಸಂವಿಧಾನದ ಮೇಲಿನ ಪ್ರಭುತ್ವ - ಈ ಎಲ್ಲವೂ ನನ್ನ ಮೇಲೆ ಪ್ರಭಾವ ಬೀರಿದ್ದವು. ಅವರು ಸಂಸತ್ ಸದಸ್ಯರ ನಡವಳಿಕೆ ಮತ್ತು ಕಾರ್ಯದಕ್ಷತೆಯ ಮೇಲೆ ಸದಾ ಒಂದು ಕಣ್ಣಿಟ್ಟಿರುತ್ತಿದ್ದರು. ಅವಕಾಶ ಸಿಕ್ಕರೆ ಒಳ್ಳೆಯ ಸಂಸತ್ಸದಸ್ಯರಾಗಿ ಬೆಳೆಯಬಹುದಾಗಿದ್ದವರಿಗೆ ಆಗಾಗ ಉತ್ತೇಜನ ನೀಡುತ್ತಿದ್ದರು.

1967ರ ನಂತರದ ರಾಜಕೀಯ ಬೆಳವಣಿಗೆಗಳಿಂದ ಕೆಲವು ವಿಶಿಷ್ಟ ಅನಿಸಿಕೆಗಳು ಹೊರಹೊಮ್ಮುತ್ತಿವೆ. ರಾಷ್ಟ್ರದ ಮುಖ್ಯಸ್ಥ ಕೇವಲ ನಾಮ ಮಾತ್ರಕ್ಕೆ ಮುಖ್ಯಸ್ಥನಾಗಿದ್ದು, ಪ್ರಧಾನ ಮಂತ್ರಿಯೇ ಪರಮೋನ್ನತ ಅಧಿಕಾರ ಹೊಂದಿರುವ ಬ್ರಿಟೀಷ್ ಮಾದರಿಯ ಸಂಸದೀಯ ವ್ಯವಸ್ಥೆ ನಮ್ಮ ದೇಶದ ಪರಿಸ್ಥಿತಿಗಳಿಗೆ ಸರಿಯಾಗಿ ಹೊಂದಾಣಿಕೆಯಾಗುವುದಿಲ್ಲ ಎಂಬುವುದೇ ಆ ಅನಿಸಿಕೆಯಾಗಿದೆ. ಅಮೇರಿಕೆಯಂತೆ ಅಧ್ಯಕ್ಷೀಯ ಮಾದರಿಯ ವ್ಯವಸ್ಥೆಯನ್ನು ನಾವು ಅಂಗೀಕರಿಸಬೇಕೆಂದು ಸೂಚಿಸುತ್ತಿದ್ದಾರೆ. ಭಾರತೀಯ ಸಂವಿಧಾನವನ್ನು ನಾನು ತಿಳಿದುಕೊಂಡಿರುವ ಮಟ್ಟಿಗೆ ಹೇಳುವದಾದರೆ, ಸಂವಿಧಾನದ ಸಂಸ್ಥಾಪಕರು ಮನಗಂಡಿದ್ದಂತೆ, ಸದ್ಯದ ರಾಷ್ಟ್ರಾಧ್ಯಕ್ಷರ ಸ್ಥಾನಕ್ಕೆ ಮಹತ್ತರ ಪಾತ್ರ ನೀಡಿದ್ದಾದರೆ ಆ ಹುದ್ದೆ ಇನ್ನೂ ಹೆಚ್ಚು ಪರಿಣಾಮಕಾರಿಯಾಗಲು ಸಾಧ್ಯವಿದೆ.

ಒಂದು ಹುದ್ದೆಯ ಘನತೆ ಗೌರವವನ್ನು ರಕ್ಷಿಸುವುದಕ್ಕೂ ಆ ಹುದ್ದೆಯನ್ನಲಂಕರಿಸುವ ವ್ಯಕ್ತಿಯ ವ್ಯಕ್ತಿತ್ವ ಮತ್ತು ಚಾರಿತ್ರ್ಯಕ್ಕೂ ತೀರಾ ಹತ್ತಿರದ ಸಂಬಂಧವಿರುತ್ತದೆ. ಭಾರತದ ರಾಷ್ಟ್ರಪತಿ ಹುದ್ದೆಯನ್ನು ಅದೇಕೋ ಅಪಮೌಲ್ಯಗೊಳಿಸಲಾಗಿದೆ. ಆದ್ದರಿಂದ ಭಾರತದ ರಾಷ್ಟ್ರಪತಿಯನ್ನು ಪಕ್ಷಭೇದ ಮರತು ಗುಣೈಕ ಪಕ್ಷಪಾತಿಯಾಗಿ ಚುನಾಯಿಸಬೇಕಾದದ್ದಕ್ಕೆ ಇದು ಸಕಾಲವಾಗಿದೆ. ಆದ್ದರಿಂದ, ಪಕ್ಷಗಳು ತಂತಮ್ಮ ಸದಸ್ಯರು ನಿರ್ದಿಷ್ಟ ಅಭ್ಯರ್ಥಿಗೆ ಮತ ನೀಡಬೇಕೆಂದು ಕಟ್ಟುನಿಟ್ಟಿನ ನಿರ್ದೇಶನ ನೀಡದಂತೆ ವ್ಯವಸ್ಥೆಗೊಳಿಸಬೇಕು. ಮತದಾರರು ತಮ್ಮ ಆತ್ಮ ಸಾಕ್ಷಿಗನುಗುಣವಾಗಿ ನಡೆದುಕೊಳ್ಳಲು ಪ್ರೇರೇಪಿಸಬೇಕು. ತತ್ಪರಿಣಾಮವಾಗಿ, ಅಭ್ಯರ್ಥಿಯ ರಾಜಕೀಯ ಪಕ್ಷ ಮತ್ತು ನಿಷ್ಠೆಗಳನ್ನು ಪರಿಗಣಿಸದೆ ಅತ್ಯುತ್ತಮವಾಗಿರುವವನನ್ನು ಚುನಾಯಿಸುವ ಅವಕಾಶ ಲಭಿಸುವಂತಾಗಬೇಕು. ಯಾವುದೇ ಒಂದು ಪಕ್ಷದ ವ್ಯಕ್ತಿಯಾಗಿರುವ ಪ್ರಧಾನ ಮಂತ್ರಿಯಂತಲ್ಲದೆ ಭಾರತದ ರಾಷ್ಟ್ರಪತಿಯು ಎಲ್ಲ ಪಕ್ಷಗಳಿಗೂ ಅತೀತನಾಗಿರಬೇಕು.

ಡಾ|| ರಾಜೇಂದ್ರ ಪ್ರಸಾದರು ತಮ್ಮ ರಾಷ್ಟ್ರೀಯ ಮಹತ್ವದ ಸ್ಥಾನಮಾನದ ಬಗ್ಗೆ ಬಹು ಪ್ರಜ್ಞಾವಂತರಾಗಿದ್ದರು. ಹಾಗೆಂದೇ ತಾವು ಇಡೀ ರಾಷ್ಟ್ರವನ್ನು ಏಕತ್ರಗೊಳಿಸುವ, ರಾಷ್ಟ್ರೀಯ ಐಕ್ಯತೆಯನ್ನು ಬಲಪಡಿಸುವ ಮಹತ್ವದ ಪಾತ್ರ ನಿರ್ವಹಿಸಬೇಕಾಗಿದೆಯೆಂಬುದು ಅವರ ಅನಿಸಿಕೆಯಾಗಿತ್ತು. ಆದ್ದರಿಂದಲೇ ತಮ್ಮ ಭಾಷಣಗಳಲ್ಲಿ ರಾಷ್ಟ್ರೀಯ ಐಕ್ಯತೆಯ ಮೂಲಾಂಶಗಳ ಮೇಲೆಯೇ ಹೆಚ್ಚಿನ ಒತ್ತು ಕೊಡುತ್ತಿದ್ದರು. 1956ರ ಫೆಬ್ರವರಿ 7 ರಂದು ಅವರು ತ್ರಿವೇಂದ್ರಮ್‌ನಲ್ಲಿ ಮಾತನಾಡುತ್ತ, "ಕನ್ಯಾಕುಮಾರಿಯಲ್ಲಿ ವಾಸಿಸುತ್ತಿರುವ ನೀವು ಹಿಮಾಲಯದಡಿಯಲ್ಲಿರುವ ಪ್ರಾಂತವನ್ನು ನಿಮ್ಮದೆಂದು ಭಾವಿಸಬೇಕು. ಹಾಗೆಯೇ ಹಿಮಾಲಯದಡಿಯಲ್ಲಿ ವಾಸಿಸುತ್ತಿರುವ ನಾನು ಕನ್ಯಾಕುಮಾರಿಯನ್ನು ನನ್ನದೆಂದು ಭಾವಿಸಲು ತಾವು ಅನುಮತಿಸಬೇಕು. ನಮ್ಮ ಪ್ರಾಂತೀಯ ಸಂಕುಚಿತ ಭಾವನೆಗಳನ್ನು ಬದಿಗಿಟ್ಟು, ಜಾತಿ ಕೋಮುವಾರು ಸಂಗತಿಗಳನ್ನು ದಾಟಿ, ನಾವು

ಇಡೀ ರಾಷ್ಟ್ರದ ಹಿತದೃಷ್ಟಿಯಿಂದ ರಾಷ್ಟ್ರಪ್ರೇಮ, ಏಕತಾ ಮನೋಭಾವ ಬೆಳೆಸಿಕೊಳ್ಳದಿದ್ದರೆ, ನಾವು ನಮ್ಮ ಸ್ವಾತಂತ್ರ್ಯವನ್ನು ಮತ್ತೆ ಕಳೆದುಕೊಳ್ಳುತ್ತೇವೆ; ನಮ್ಮ ಪ್ರಜಾಪ್ರಭುತ್ವ ಅಕಾಲ ಅವಸಾನ ಹೊಂದುವದು ನಿಸ್ಸಂಶಯ" ಎಂದು ಜನತೆಗೆ ಕರೆ ನೀಡಿದ್ದರು. ಡಾ|| ರಾಜೇಂದ್ರ ಪ್ರಸಾದರು ಭಾರತೀಯ ಏಕತಾ ಸಾಧನೆಯ ಪ್ರಕ್ರಿಯೆಯಲ್ಲಿ ಸಂಸ್ಕೃತ ಭಾಷೆ ಒಂದು ಪ್ರಧಾನ ಅಂಶ ಆಗಬಲ್ಲುದೆಂದು ಭಾವಿಸಿದ್ದರು. ಆದ್ದರಿಂದಲೇ ಅದಕ್ಕೆ ತಕ್ಕ ಸ್ಥಾನಮಾನ ಕೊಡಬೇಕೆಂದು ಪ್ರತಿಪಾದಿಸುತ್ತಿದ್ದರು. 1955ರ ನವೆಂಬರ್ 11 ರಂದು ಸಂಸ್ಕೃತ್ ವಿಶ್ವಪರಿಷತ್ ವಾರ್ಷಿಕ ಸಮ್ಮೇಳನದ ಅವರ ಅಧ್ಯಕ್ಷೀಯ ಭಾಷಣದಲ್ಲಿ ಅವರಾಡಿದ ಮಾತುಗಳು ದಾಖಲಾರ್ಹವಾಗಿವೆ:

> "ಬಹು ಕಾಲದ ಹಿಂದೆ, ಸಂಪರ್ಕ ಮಾಧ್ಯಮಗಳು, ಅವುಗಳ ಆಧುನಿಕ ಅರ್ಥದಲ್ಲಿ, ಇರದೇ ಇದ್ದಾಗ, ಇಡೀ ರಾಷ್ಟ್ರದಲ್ಲಿ ಹೆಚ್ಚೂ ಕಡಿಮೆ ಒಂದು ಸಾಮಾನ್ಯ ಶಿಕ್ಷಣ ಅಸ್ತಿತ್ವದಲ್ಲಿತ್ತು. ಅಭಿವ್ಯಕ್ತಿ ಮತ್ತು ಲೇಖನದ ಪ್ರಕ್ರಿಯೆಗೆ ಸಂಸ್ಕೃತ ಭಾಷೆ ಒಂದು ಸಾಮಾನ್ಯ ಮಾಧ್ಯಮವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಬೆಳವಣಿಗೆಯ ಬೇರೆ ಬೇರೆ ಮಟ್ಟದಲ್ಲಿದ್ದ ಪ್ರಾಂತೀಯ ಭಾಷೆಗಳು ಆಯಾ ಪ್ರಾಂತಗಳಿಗೆ ಸೀಮಿತವಾಗಿದ್ದುವು. ಆದರೆ, ಸಂಸ್ಕೃತವಾದರೋ ನಿಜವಾಗಿಯೂ ರಾಷ್ಟ್ರದ ಒಂದು ಸಂಪರ್ಕ ಭಾಷೆಯಾಗಿತ್ತು. ಅದು ಶತಶತಮಾನಗಳವರೆಗೆ ಭಾರತದ ರಾಷ್ಟ್ರಭಾಷೆಯ ಸ್ಥಾನವನ್ನು ಅಲಂಕರಿಸಿತ್ತು. ನಾವಿಂದು ಈ ಮಹಾನ್ ಭಾಷೆಗೆ ವಿಧ್ಯುಕ್ತವಾಗಿ ಯಾವುದೇ ಸ್ಥಾನಮಾನ ನೀಡಲಿ, ಆದರೆ ಭಾರತದ ಅಭಿವೃದ್ಧಿಪರ ಭಾಷೆಗಳೆಲ್ಲವೂ ಇಂದು ಅದರಿಂದ ಜೀವದಾಯಕ ಸತ್ವವನ್ನು ಪಡೆದು ಬೆಳೆಯಬಲ್ಲವೆಂಬುದು ಮಾತ್ರ ನಿರ್ವಿವಾದ."

ಸಂಸ್ಕೃತ ಭಾಷೆಗೆ ತಕ್ಕ ಮನ್ನಣೆ ಕೊಡುವುದರ ಜೊತೆಗೇ ಅವರು ಭಾರತದ ಐಕ್ಯತೆಯನ್ನು ಸಾಧಿಸಲು ಎಲ್ಲ ಭಾರತೀಯ ಭಾಷೆಗಳೂ ದೇವನಾಗರಿ ಲಿಪಿಯನ್ನು ಬಳಸಬೇಕೆಂದು ಪ್ರತಿಪಾದಿಸಿದ್ದರು. 1957ರ ಆಗಸ್ಟ್ 7 ರಂದು ಹೈದ್ರಾಬಾದಿನಲ್ಲಿ ಆಂಧ್ರ ಸಾಹಿತ್ಯ ಅಕಾಡೆಮಿಯ ಸಮ್ಮೇಳನವನ್ನುದ್ದೇಶಿಸಿ ಅವರು ಹೀಗೆ ನುಡಿದಿದ್ದರು:

> "ನಾವು ರಾಜಕೀಯ ಸ್ವಾತಂತ್ರ್ಯವನ್ನು ಸಾಧಿಸಿದ್ದೇನೋ ಆಯಿತು. ಆದರೆ ನಾವು ಗಳಿಸಿದ ಈ ಸ್ವಾತಂತ್ರ್ಯ ಎಂದೆಂದೂ ಬದುಕುಳಿಯುವಂತೆ ನಾವಿಂದು ನಮ್ಮ ವರ್ತನೆಯನ್ನು ರೂಪಿಸಿಕೊಳ್ಳುವುದು, ನಮ್ಮ ವ್ಯವಹಾರಗಳನ್ನು ಯೋಜಿಸಿಕೊಳ್ಳುವುದು ಅನಿವಾರ್ಯವಾಗಿದೆ. ಈ ಏಕೀಕರಣ ಪ್ರಕ್ರಿಯೆಯನ್ನು ಇನ್ನೂ ಮುಂದೆ ತೆಗೆದುಕೊಂಡು ಹೋಗುವ ವಿಧಿವಿಧಾನಗಳ ಬಗ್ಗೆಯೇ ನಾನು ಚಿಂತಿಸುತ್ತಿದ್ದೇನೆ. ಈ ದಿಶೆಯಲ್ಲಿ ನನಗಾದ ಅನುಭವವನ್ನು ನಿಮ್ಮ ಜೊತೆ ಹಂಚಿಕೊಳ್ಳಬಯಸುತ್ತೇನೆ. ಅನೇಕ ವರ್ಷಗಳ ಹಿಂದೆ ಕಲ್ಕತ್ತಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿದ್ದ ಶಾರದಾಚರಣ್ ಎನ್ನುವವರು ದೇವನಾಗರಿ ಎಂಬ ಒಂದು ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. 'ದೇವನಾಗರಿ'ದಲ್ಲಿ ಭಾರತದ

ವಿಭಿನ್ನ ಭಾಷೆಗಳ ಲೇಖನಗಳು ದೇವನಾಗರೀ ಲಿಪಿಯಲ್ಲೋ ಪ್ರಕಟವಾಗುತ್ತಿದ್ದವು. ದೇವನಾಗರಿ ಲಿಪಿಯ ಮೂಲಕ ಇತರ ಭಾಗಗಳ ಕುರಿತು ಸಾಕಷ್ಟು ತಿಳಿದುಕೊಳ್ಳಲು ಸಾಧ್ಯವೆಂಬುದು ನಮಗೆ ಮನದಟ್ಟಾಯಿತು. ಅಂದಿನಿಂದಲೂ ಪ್ರಾಂತೀಯ ಭಾಷೆಗಳನ್ನು ದೇವನಾಗರೀ ಲಿಪಿಗೆ ಲಿಪ್ಯಂತರಿಸಿದರೆ ಅವುಗಳನ್ನು ಚೆನ್ನಾಗಿ ಅರಿಯಲು ಸಾಧ್ಯವಾಗುತ್ತದೆ ಎಂಬುದು ಎಂದಿನಿಂದಲೂ ನನ್ನ ಮನದಲ್ಲಿ ಮನೆ ಮಾಡಿರುವ ಭಾವನೆಯಾಗಿದೆ. ಸುದೈವದಿಂದ ತಮಿಳಿನ ಹೊರತು ಭಾರತದ ಎಲ್ಲ ಭಾಷೆಗಳಿಗೂ ಒಂದೇ ರೀತಿಯ ಅಕ್ಷರ ಮಾಲೆಗಳಿವೆ. ಇದು ಭಾರತದಲ್ಲಷ್ಟೇ ಅಲ್ಲ, ಭಾರತದ ಹೊರಗಿನ ಭಾಷೆಗಳ ವಿಷಯದಲ್ಲಿಯೂ ಅಷ್ಟೇ ಸತ್ಯವಾಗಿದೆ. ಉದಾಹರಣೆಗೆ: ಸಿಲೋನ್, ಬರ್ಮಾ ಮತ್ತು ಥೈಲ್ಯಾಂಡ್‌ಗಳ ವರ್ಣಮಾಲೆಗಳೂ ನಮ್ಮಂತೆಯೇ ಇವೆ. ಲಿಪಿಗಳು ಬೇರೆಯಾಗಿವೆಯಾದರೂ ಶಬ್ದೋಚ್ಚಾರಣೆಯ ಧ್ವನಿ ಒಂದೇ ಆಗಿದೆ. ಹೀಗಾಗಿ, ನಮಗೆ ಇದೊಂದು ಅನುಕೂಲವಿದ್ದೇ ಇದೆ. ನಾವು ಎಲ್ಲ ಭಾಷೆಗಳಿಗೂ ಒಂದೇ ಲಿಪಿಯನ್ನು ಬಳಸಿದರೆ, ವಿಭಿನ್ನ ಭಾಷೆಯನ್ನಾಡುವ ಜನರು ಪರಸ್ಪರ ಅರ್ಥ ಮಾಡಿಕೊಳ್ಳಲು ತುಂಬ ಸರಳವಾಗುತ್ತದೆ. ನಾನಿಲ್ಲಿ ದೇವನಾಗರಿ ಲಿಪಿಯನ್ನೇ ಯಾಕೆ ಸೂಚಿಸುತ್ತಿದ್ದೇನೆಂದರೆ ಸಂಸ್ಕೃತವನ್ನು ಯಾವಾಗಲೂ ದೇವನಾಗರಿ ಲಿಪಿಯಲ್ಲೇ ಬರೆಯಲಾಗುತ್ತದೆ; ಅದು ಈಗಾಗಲೇ ಭಾರತದಾದ್ಯಂತ ಚಿರಪರಿಚಿತವಾಗಿರುವ ಲಿಪಿಯಾಗಿದೆ."

ರಾಷ್ಟ್ರೀಯ ಐಕ್ಯತೆಗೆ ಹೊಸ ಹೊಸ ಅಪಾಯ, ಆತಂಕಗಳು ಬಂದೊದಗುತ್ತಿರುವ ಇಂದಿನ ಸಂದರ್ಭದಲ್ಲಿ ಡಾ।। ರಾಜೇಂದ್ರ ಪ್ರಸಾದರು ಸಂಸ್ಕೃತ ಭಾಷೆಯ ಏಕೀಕರಣ ಶಕ್ತಿಯ ಕುರಿತು ಆಡಿರುವ ಮಾತುಗಳು ತುಂಬ ಪ್ರಸ್ತುತವಾಗಿವೆ. ದೇವನಾಗರಿ ಲಿಪಿಯನ್ನು ದೇಶದ ಒಂದು ಸಾಮಾನ್ಯ ಲಿಪಿಯಾಗಿ ಅಂಗೀಕರಿಸುವ ಸಾಧ್ಯತೆ ಕುರಿತಿರುವ ಅವರ ವಿಚಾರಗಳು ಸಮಯೋಚಿತವಾಗಿವೆ.

ಭಾರತದ ಸಂವಿಧಾನ ಶಿಲ್ಪಿಗಳ ಅಭಿಲಾಷೆಗಳಿಗನುಗುಣವಾಗಿ ನಮ್ಮ ದೇಶದ ರಾಷ್ಟ್ರಪತಿ ಹುದ್ದೆಯ ಅಧಿಕಾರ, ಸ್ಥಾನ-ಮಾನಗಳನ್ನು ಪುನಃ ಪ್ರತಿಷ್ಠಾಪಿಸುವದು ಈ ಕ್ಷಣದ ಅವಶ್ಯಕತೆಯಾಗಿದೆ. ಭಾರತದ ಐಕ್ಯತೆಯ ಮೂಲಾಂಶಗಳನ್ನರಿತು ಅವುಗಳಿಗೆ ವಿಸ್ತೃತ ಪ್ರಚಾರಕೊಡುವುದು ಈ ಗಳಿಗೆಯ ಜರೂರಿಯಾಗಿದೆ. ಡಾ।। ರಾಜೇಂದ್ರ ಪ್ರಸಾದರ ವಿಚಾರ ಮತ್ತು ಆದರ್ಶಗಳನ್ನು ಮೈಗೂಡಿಸಿಕೊಳ್ಳುವ ಮೂಲಕ ಮಾತ್ರ ನಮ್ಮ ರಾಷ್ಟ್ರ ಅತ್ಯಂತ ಉಚಿತ ರೀತಿಯಲ್ಲಿ ಅವನ್ನು ಸ್ಮರಿಸಬಹುದು. ಯಾಕೆಂದರೆ, ಪ್ಲೇಟೋ ಹೇಳಿದಂತೆ; "ವಿಚಾರ ಆದರ್ಶಗಳೇ ಜಗತ್ತನ್ನಾಳುತ್ತವೆಯೇ ವಿನಃ ವ್ಯಕ್ತಿಯಲ್ಲ."

## ರಾಜೇಂದ್ರ ಪ್ರಸಾದ: ಅಜನ್ಮ ಅಧ್ಯಕ್ಷರು

-ಪ್ರೊ || ಪಿ.ಜಿ. ಮೌಲಂಕರ್ *

ಡಾ|| ರಾಜೇಂದ್ರ ಪ್ರಸಾದರು ನಮ್ಮ ಗಣರಾಜ್ಯದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಲೆಂದೇ ಹುಟ್ಟಿದರೇನೋ ಎಂಬಂತಿದ್ದರು. ಅವರ ರಾಜ್ಯವಾಗಿದ್ದ ಬಿಹಾರಿನ ಪಾಟ್ನಾ ಮುನಿಸಿಪಾಲಿಟಿಯ ಅಧ್ಯಕ್ಷ ಸ್ಥಾನದಂತಹ ಕೆಳಹಂತದಿಂದ ಆರಂಭಿಸಿ, ಕ್ರಮಕ್ರಮೇಣ ಮೇಲೇರುತ್ತಾ ನಮ್ಮ 'ಪ್ರಜಾತಾಂತ್ರಿಕ ಸಾರ್ವಭೌಮ ಗಣರಾಜ್ಯದ ಅತ್ಯುನ್ನತ ಹುದ್ದೆಯಾದ ರಾಷ್ಟ್ರಪತಿ ಸ್ಥಾನವನ್ನು ಅಲಂಕರಿಸಿದ್ದರು. ನಮ್ಮ ನವಸ್ವತಂತ್ರ ದೇಶದ ವಿಧಾಯಕ ವರ್ಷಗಳಲ್ಲಿ ರಾಷ್ಟ್ರೀಯ ಘನತೆಯ ಸ್ಥಾನವನ್ನಲಂಕರಿಸಲು 'ವಿಧಿಯೇ ಅವರನ್ನು ಸುಯೋಗ್ಯವಾಗಿ ಸೃಷ್ಟಿಸಿತ್ತು. ನಮ್ಮ ಪ್ರಾಚೀನ ಮತ್ತು ಪ್ರೌಢ ರಾಜಕೀಯ ವ್ಯವಸ್ಥೆಗೆ ತಕ್ಕುದಾದ ವ್ಯಕ್ತಿತ್ವ ಪಡೆದುಕೊಂಡೇ ಅವರು ಹುಟ್ಟಿದ್ದರು. ಡಾ|| ರಾಜೇಂದ್ರ ಪ್ರಸಾದರು ಸ್ವತಂತ್ರ ಭಾರತದ ಪ್ರಥಮ ರಾಷ್ಟ್ರಪತಿಗಳಾದದ್ದು ಬಹುಶಃ ಒಂದು ಆಕಸ್ಮಿಕ. ಆದರೆ ಅವರ ಆಯ್ಕೆ ಕೂಡಲೆ ಅತ್ಯಂತ ಸ್ವಾಗತಾರ್ಹವೂ ಸಂತೋಷದಾಯಕವೂ ಆಗಿ ಪರಿಣಮಿಸಿತು ಅಧ್ಯಕ್ಷ ಸ್ಥಾನಕ್ಕೆ ಅವರು ಹೊಸಬರೇನಾಗಿರಲಿಲ್ಲ. ಅಧ್ಯಕ್ಷೀಯ ವಿಧಿವಿಧಾನಗಳು ಅವರಿಗೆ ಆಗಲೇ ಕರಗತವಾಗಿದ್ದವು. ಆಗಲೇ ಅವರು ಭಾರತದ ಸಂವಿಧಾನ ಸಭೆಯ ಅಧ್ಯಕ್ಷರಾಗಿ ಅನುಭವ ಪಡೆದಿದ್ದರು ಒಂದು ಕಷ್ಟತಮ ಪಂಥಾಹ್ವಾನದಂತಿದ್ದ ಕರ್ತವ್ಯವನ್ನು ಸ್ವೀಕರಿಸಿ, ಅತ್ಯಂತ ಪರಿಶ್ರಮದಿಂದ ಮತ್ತು ಅಷ್ಟೇ ಘನತೆಯಿಂದ ನಿರ್ವಹಿಸಿ, ಅದಕ್ಕೊಂದು ಉಜ್ವಲತೆ ತಂದು ಕೊಟ್ಟರು ಅದನ್ನು ಒಂದು ಸಾರ್ಥಕ ಸೃಜನಶೀಲ ಕ್ರಿಯೆಯಾಗಿ ಮಾರ್ಪಡಿಸಿದರು. ಅದಕ್ಕಿಂತಲೂ ಮುಂಚೆ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ, ಅಂದಿನ ಅಪಾಯ ಆತಂಕದ ಸಮ್ಮುಖದಲ್ಲಿ ಬಾಬು ರಾಜೇಂದ್ರ ಪ್ರಸಾದರು (ಅತ್ಯಂತ ಅಕ್ಕರೆಯಿಂದ ದೇಶದ ಉದ್ದಗಲಕ್ಕೂ ಜನರು ಹೀಗೆಂದೇ ಸಂಬೋಧಿಸುತ್ತಿದ್ದರು) ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾಗಿ ತುಂಬ ಕಷ್ಟದ ಹಾಗೂ ನಾಜೂಕಿನ ಜವಾಬ್ದಾರಿಗಳನ್ನು ಸಾಕಷ್ಟು ಕುಶಲತೆಯಿಂದ ನಿರ್ವಹಿಸಿದ್ದರು ಅವರ ಅಚಲ ಆತ್ಮವಿಶ್ವಾಸ ಮತ್ತು ನಿಪುಣ ಕುಶಲತೆ ಮುಂತಾದ ನಿರಾಡಂಬರದ ಗುಣಗಳು ಸದಾ ಅವರ ಸಹಾಯಕ್ಕಿರುತ್ತಿದ್ದವು ಇಂತು ರಾಜೇಂದ್ರ ಪ್ರಸಾದರು ತಮ್ಮ ಅಧ್ಯಕ್ಷೀಯ ಶಕ್ತಿ ಸಾಮರ್ಥ್ಯಗಳನ್ನು, ಪ್ರಭೆ ಪ್ರತಿಭೆಗಳನ್ನು ಲೀಲಾಜಾಲವಾಗಿ ಸಾಬೀತು ಪಡಿಸಿದ್ದಾರೆ. ರಾಷ್ಟ್ರೀಯ ಹೊಣೆ ಹೊರುವ ಕಹಳೆಯ ಕರೆ ಬಂದದ್ದೇ ತಡ ಸಿದ್ಧರಾಗಿದ್ದ ಅವರು ಕೂಡಲೆ ಸಂಕಲ್ಪ ಬದ್ಧರಾಗಿ ಸ್ಪಂದಿಸಿದರು. 1950ರ ಜನವರಿ 26 ರಂದು ನಮ್ಮ ಗಣರಾಜ್ಯದ ಆರಂಭೋತ್ಸವದ ದಿನ ಡಾ|| ರಾಜೇಂದ್ರ ಪ್ರಸಾದರನ್ನು ದೇಶದ ಪ್ರಥಮ ರಾಷ್ಟ್ರಪತಿಯಾಗಿ ಗಣರಾಜ್ಯದ ಪ್ರಪ್ರಥಮ ನಾಗರಿಕರನ್ನಾಗಿ ಅವಿರೋಧವಾಗಿ ಚುನಾಯಿಸಲಾಯಿತು. ಆ ಚರಿತ್ರಾರ್ಹ ದಿನದಂದು ಅತ್ಯುನ್ನತ ಹುದ್ದೆಯನ್ನು ಅಂಗೀಕರಿಸುವ ಮುಂಚೆ ಅವರು ದೇವರ ಹೆಸರಿನಲ್ಲಿ ಪ್ರಮಾಣ ವಚನವನ್ನು ಸ್ವೀಕರಿಸಿದರು: "ನಾನು ಅತ್ಯಂತ ನಿಷ್ಠೆಯಿಂದ ಭಾರತದ ರಾಷ್ಟ್ರಪತಿ ಹುದ್ದೆಯನ್ನು ನಿರ್ವಹಿಸುವೆನು ನನಗೆ ಸಾಧ್ಯವಿದ್ದ ಮಟ್ಟಿಗೆ ನಾನು ಭಾರತದ ಸಂವಿಧಾನ ಮತ್ತು ಕಾಯ್ದೆಯನ್ನು ಸಂರಕ್ಷಿಸುವ ಮತ್ತು ಸಮರ್ಥಿಸುವುದಕ್ಕೆ ತೊಡಗಿಸಿಕೊಳ್ಳುತ್ತೇನೆ ಮತ್ತು ಭಾರತದ ಜನತೆಯ ಸೇವೆಗೆ, ಅವರ ಶ್ರೇಯೋಭಿವೃದ್ಧಿಗೆ ನನ್ನನ್ನು

* ಪ್ರೊ|| ಮೌಲಂಕರ್‌ರು ಮಾಜಿ ಸಂಸತ್ ಸದಸ್ಯರು (ಲೋಕಸಭೆ)

ನಾನು ಸಮರ್ಪಿಸಿಕೊಳ್ಳುತ್ತೇನೆ" (ನೋಡಿ ಆರ್ಟಿಕಲ್ 60, ಭಾರತದ ಸಂವಿಧಾನ). ಅನಂತರದ ಘಟನೆಗಳು ಮತ್ತು ಮಹತ್ವದ ಬೆಳವಣಿಗೆಗಳು ಅಧ್ಯಕ್ಷ ಪ್ರಸಾದರು ತಮಗೊದಗಿ ಬಂದ ಎಲ್ಲ ಅಧ್ಯಕ್ಷೀಯ ಕರ್ತವ್ಯಗಳನ್ನು ಬಹು ಸಮರ್ಥವಾಗಿ , ನಿರ್ಭೀತಿಯಿಂದ ನಿರ್ವಹಿಸಿದರೆಂಬುದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿವೆ.

ರಾಜೇಂದ್ರ ಪ್ರಸಾಧರದ್ದು ತುಂಬಾ ಗೌರವಾನ್ವಿತ ಹಾಗೂ ಸುಸಂಕೃತ ಕುಟುಂಬ. ಬಾಲ್ಯದಿಂದಲೂ ಅವರಿಗೆ ಆಟ ಪಾಠಗಳೆರಡರಲ್ಲೂ ಹೆಚ್ಚಿನ ಆಸಕ್ತಿ ಇತ್ತು. ಹೀಗಾಗಿ ಅವರು ಸಹಜವಾಗಿಯೇ ಅತ್ಯಂತ ಜಾಣ ವಿದ್ಯಾರ್ಥಿಗಳಲ್ಲಿ ಒಬ್ಬರಾಗಿದ್ದರು. ಅವರ ಹರಿತವಾದ ಬುದ್ಧಿ, ಅಪೂರ್ವ ಪ್ರತಿಭೆಯಿಂದಾಗಿ ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಮುಕ್ತ ಅವಕಾಶ ದೊರೆಯಿತು. ಪರಿಣಾಮವಾಗಿ, ಇನ್ನೂ ಹರೆಯದವರಿದ್ದಾಗಲೇ ಅವರ ಜ್ಞಾನ ಕ್ಷಿತಿಜ ವಿಸ್ತರಿಸಿ, ದೃಷ್ಟಿ ವೈಶಾಲ್ಯಕ್ಕೆ ದಾರಿಮಾಡಿಕೊಟ್ಟಿತು. ನೋಡನೋಡುತ್ತಲೇ ಬಿಹಾರಿ ಹುಡುಗನ ಪ್ರತಿಭೆ ಬಂಗಾಳೀ ಪರಿಸರದಲ್ಲಿ ಪ್ರಫುಲ್ಲವಾಗಿ ಅರಳಿತು. ಮೊದಲಿಗೆ ವಿದ್ಯಾರ್ಥಿಯಾಗಿ ಆರಂಭಿಸಿದ ಅವರು ಕ್ರಮೇಣ ಮೇಲೇರುತ್ತಾ ಉಪನ್ಯಾಸಕರಾಗಿ, ಅನಂತರ ನ್ಯಾಯವಾದಿಗಳಾಗಿ ಹೆಸರು ಮಾಡತೊಡಗಿದರು. ರಾಜೇಂದ್ರ ಪ್ರಸಾದರು ಆಯ್ಕೆ ಮಾಡಿಕೊಂಡು ಕ್ಷೇತ್ರದಲ್ಲೆಲ್ಲಾ ದಂಗುಬಡಿಸುವಂತೆ ಮಿಂಚುತ್ತಾ ವಿಧವಿಧದ ಕೀರ್ತಿಗೆ ಭಾಜನರಾಗತೊಡಗಿದರು. ಆಮೇಲೆ ಕೆಲಕಾಲದ ನಂತರ ಪಾಟ್ನಾ ಉಚ್ಚ ನ್ಯಾಯಾಲಯದಲ್ಲಿ ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿದರು. ಕಲ್ಕತ್ತೆಯಿಂದ ತಮ್ಮ ಸ್ವಂತ ರಾಜ್ಯಕ್ಕೆ ಹಿಂತಿರುಗಿದ ಮೇಲೆ ವಕೀಲಿ ವೃತ್ತಿಯಲ್ಲೇನೋ ಸಾಕಷ್ಟು ಪ್ರಗತಿ ಸಾಧಿಸಿದರು. ಆದರೆ ರಾಜೇಂದ್ರ ಪ್ರಸಾದರಿಗೆ ಇದಾವುದರಿಂದಲೂ ಸಂಪೂರ್ಣ ತೃಪ್ತಿಯಾಗುತ್ತಿರಲಿಲ್ಲ. ತಮ್ಮ ತುಂಬಾ ದೀರ್ಘವೂ ಅಷ್ಟೇ ರೋಚಕವೂ ಆದ ಆತ್ಮ ಚರಿತ್ರೆಯಲ್ಲಿ ಅವರು ತಮ್ಮ ಚಾರಿತ್ರ್ಯವನ್ನು ರೂಪಿಸಿದ ಅನೇಕ ಚಿಕ್ಕ ದೊಡ್ಡ ಘಟನೆಗಳ ಕುರಿತು ವಿವರಿಸಿದ್ದಾರೆ. ಮೂಲ ಹಿಂದಿಯಲ್ಲಿರುವ (ಅನಂತರ ಅನೇಕ ಭಾಷೆಗಳಿಗೆ ತರ್ಜುಮೆಗೊಂಡ) ಅವರ ಆತ್ಮ ಚರಿತ್ರೆಯಲ್ಲಿ ತಾವು ನಡೆದು ಬಂದ ದಾರಿಯ ವೈವಿಧ್ಯಮಯ ವರ್ಣನೆ ಮಾಡಿದ್ದಾರೆ. ಕ್ರಿಯಾಶೀಲತೆ ಮತ್ತು ಕಿಕ್ಕಿರಿದ ಚಟುವಟಿಕೆಯಿಂದ ತುಂಬಿದ್ದ ಅವರ ಬದುಕಿನ ವಿವರ ರಹಸ್ಯಮಯವಾಗಿದ್ದಷ್ಟೇ ಮಂತ್ರ ಮುಗ್ಧರನ್ನಾಗಿ ಮಾಡುವ ರೀತಿಯಲ್ಲಿ ದಾಖಲೆಗೊಂಡಿದೆ. ಸುಮಾರು ಸಾವಿರ ಪುಟಗಳಷ್ಟಿರುವ ಈ ರೋಮಾಂಚಕಾರಿ ನೆನಪಿನ ಕಥೆ ನಮ್ಮ ಕಣ್ಮುಂದೆ ಮನೋಹರವಾದ ಚಿತ್ರವನ್ನು ಬಿಚ್ಚಿಡುತ್ತದೆ. 20 ನೇ ಶತಮಾನದ ಪ್ರಥಮಾರ್ಧ ರಾಷ್ಟ್ರೀಯ ಬದುಕಿನ ದೃಶ್ಯ ಇಲ್ಲಿ ಚಿತ್ತಾಕರ್ಷಕವಾಗಿ ಚಿತ್ರಿಸಲ್ಪಟ್ಟಿದೆ. ಅಷ್ಟೇ ಅಲ್ಲ ಅದು ನಾಯಕನ ವೈವಿಧ್ಯಮಯ ವ್ಯಕ್ತಿತ್ವ ಚಿತ್ರವನ್ನು ಕಟ್ಟಿಕೊಡುತ್ತದೆ. ಸುಸಂಕೃತ ಸಜ್ಜನರಾಗಿದ್ದ, ಅಂತೆಯೇ, ಸಭ್ಯ ಸದ್ಗೃಹಸ್ಥರಾಗಿದ್ದ ಬಾಬು ರಾಜೇಂದ್ರ ಪ್ರಸಾದರ ಭಾರತದ ಸಾರ್ವಜನಿಕ ಮತ್ತು ರಾಜಕೀಯ ಬದುಕು ಈ ಆತ್ಮಕಥೆಯಲ್ಲಿ ನಿಚ್ಚಳವಾಗಿ ದಾಖಲೆಯಾಗಿದೆ ಸ್ವಭಾವತಃ ಸಂವೇದನಾಶೀಲರಾಗಿದ್ದ, ಭಾವುಕ ಮನೋಧರ್ಮದ ರಾಜೇಂದ್ರ ಪ್ರಸಾದರು ತುಂಬಾ ಆಸಕ್ತಿಯಿಂದ ಭಾರತ ಮಾತೆಯ ಸೇವೆಗೆ ತೊಡಗಿಕೊಂಡರು. 1905ರ ಜೂನ್ 12 ರಂದು ಮಹಾರಾಷ್ಟ್ರದ ಪುಣೆಯಲ್ಲಿ ಮಹಾನ್ ನೇತಾರ ಶ್ರೀ ಗೋಪಾಲ ಕೃಷ್ಣ ಗೋಖಲೆಯವರು ಸ್ಥಾಪಿಸಿದ ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯಲ್ಲಿ ಒಬ್ಬ ಸಕ್ರಿಯ ಕಾರ್ಯಕರ್ತರಾಗಿ ಸೇರುವ ಮೂಲಕ ತಮ್ಮ ದೇಶ ಸೇವೆಯನ್ನು ಆರಂಭಿಸಿದರು. ನಿಸ್ವಾರ್ಥ ಕಾರ್ಯಕರ್ತರನ್ನು ತಯಾರಿಸಿ ಅವರನ್ನು ರಾಷ್ಟ್ರೀಯ

ಸೇವಾಧುರಂಧರರನ್ನಾಗಿ ಮಾರ್ಪಡಿಸಿ, ಸಂವಿಧಾನ ಮಾರ್ಗದಲ್ಲಿ ಭಾರತೀಯ ಜನತೆಯ ನೈಜ ಹಿತಾಸಕ್ತಿಗಳನ್ನು ಕಾಪಾಡುವ, ಅಭಿವೃದ್ಧಿಪಡಿಸುವ ಮುಂತಾದ ಧ್ಯೇಯ ಉದ್ದೇಶಗಳು ಆ ಸೊಸೈಟಿಗೆ ಇದ್ದವು. ಆ ಸೊಸೈಟಿಯ ಉದಾತ್ತ ಧ್ಯೇಯೋದ್ದೇಶ ಮತ್ತು ಕಾರ್ಯಕ್ರಮಗಳು ಯುವ ರಾಜೇಂದ್ರ ಪ್ರಸಾದರ ಮನಸ್ಸನ್ನು ಸೂರೆಗೊಂಡವು. ಗೋಖಲೆಯವರು ಕಲ್ಕತ್ತೆಗೆ ಭೇಟಿ ನೀಡಿದಾಗ ರಾಜೇಂದ್ರ ಪ್ರಸಾದರು ತಮ್ಮ ಸಹಪಾಠಿ ಶ್ರೀ ಕೃಷ್ಣ ಪ್ರಸಾದ ಎಂಬ ಗೆಳೆಯನೊಂದಿಗೆ ಗೋಪಾಲ ಕೃಷ್ಣ ಗೋಖಲೆಯವರನ್ನು ಕಾಣುವ ಅವಕಾಶ ಪಡೆದಿದ್ದರು. ಅಂದಿನ ಖ್ಯಾತ ನೇತಾರರೂ ಪ್ರಖ್ಯಾತ ಸಂಸದೀಯ ಪಟುಗಳೂ ಆಗಿದ್ದ ಗೋಖಲೆಯವರನ್ನು ಕಲ್ಕತ್ತಾ ಮಹಾನಗರದಲ್ಲಿ ವೈಯಕ್ತಿಕವಾಗಿ ಸಂದರ್ಶಿಸಲು ಸಿಕ್ಕ ಅವಕಾಶ ಒಂದು ಯೋಗಾಯೋಗ. ಆದಾಗಲೇ ಆ ಸೊಸಾಯಿಟಿ ಸೇರಲು ರಾಜೇಂದ್ರ ಪ್ರಸಾದರು ಮಾನಸಿಕವಾಗಿ ಪೂರ್ವಸಿದ್ದತೆ ಮಾಡಿಕೊಂಡಿದ್ದರು. ವಿಧ್ಯುಕ್ತವಾಗಿ ಸೇರುವುದು ಮಾತ್ರ ಬಾಕಿಯಿತ್ತು . ಬಹುಶಃ ಗೋಖಲೆಯುವರಿಗೆ ಭೆಟ್ಟಿಯಾಗುವುದಕ್ಕಿಂತ ಮುಂಚೆಯೇ ಸಾರ್ವಜನಿಕ ಸೇವೆಯ ಹಂಬಲ ಅವರಲ್ಲಿ ಅವ್ಯಕ್ತವಾಗಿ ಅಂಕುರಿಸತೊಡಗಿತ್ತು. ದೀನ ದಲಿತರಿಗೆ ಸೇವೆ ಸಲ್ಲಿಸಬೇಕೆಂಬ ಅಭಿಲಾಷೆ ಆಗಲೇ ಅವರಲ್ಲಿ ಮನೆ ಮಾಡಿತ್ತು. ಆದರೆ ಅವರ ಅಣ್ಣ ಮಹೇಂದ್ರ ಪ್ರಸಾದ ಅವರನ್ನು ಗೋಖಲೆಯವರ ಸೊಸಾಯಿಟಿಗೆ ಸೇರದಂತೆ ತಡೆದರು.

ರಾಜೇಂದ್ರ ಪ್ರಸಾದರಿಗೆ ತಮ್ಮ ಸೋದರನ ಬಗ್ಗೆ ಅಪಾರ ಪ್ರೀತಿ ಮತ್ತು ಭಕ್ತಿ. ತಮ್ಮ ಪಾಲಕ, ಮಾರ್ಗದರ್ಶಿಯಾಗಿದ್ದ ಅಣ್ಣನಿಗೆ ಅವರು ಅನೇಕ ವಿಧದಿಂದ ಋಣಿಯಾಗಿದ್ದರು ತಮ್ಮಣ್ಣನ ಈ ಕ್ರಮದಿಂದ ರಾಜೇಂದ್ರ ಪ್ರಸಾದರಿಗೆ ನಿಸ್ಸಂಶಯವಾಗಿಯೂ ನಿರಾಶೆಯಾಯಿತು ಆದರೂ ಮೌನವಾಗಿ ಪರಿಸ್ಥಿತಿಗೆ ಹೊಂದಿಕೊಂಡು ವಿಧಿ ವಿಲಾಸಕ್ಕೆ ತಮ್ಮನ್ನು ಅರ್ಪಿಸಿಕೊಂಡರು ಆದಾಗ್ಯೂ ರಾಜೇಂದ್ರ ಪ್ರಸಾದರಿಗೆ ಸುದೈವ ಕಾಯ್ದುಕೊಂಡಿತ್ತು ಅವರು ಗೋಖಲೆಯವರ ಪದತಲದಲ್ಲಿ ಕೂಡಲು ಸಾಧ್ಯವಾಗದ್ದರೆ ಹೋಗಲಿ ಅವರ ನೆಚ್ಚಿನ ಶಿಷ್ಯರಾಗಿದ್ದ ಮೋಹನದಾಸ ಕರಮಚಂದ ಗಾಂಧೀಜಿಯ ಕಟ್ಟಾ ಅನುಯಾಯಿಯಾಗುವ ಅವಕಾಶ ರಾಜೇಂದ್ರರಿಗೆ ದಕ್ಕಿತು. 1965ರಲ್ಲಿ ಗಾಂಧೀಜಿ ದಕ್ಷಿಣ ಆಫ್ರಿಕೆಯಿಂದ ಹಿಂದಿರುಗಿ ತಮ್ಮ ರಾಜ್ಯವಾದ ಗುಜರಾತಿನ ಅಹಮದಾಬಾದಿನಲ್ಲಿ ವಾಸ್ತವ್ಯ ಹೂಡಿದ್ದರು. ಸಾಬರಮತಿ ನದಿಯ ತೀರದ ಮೇಲಿದ್ದ ತಮ್ಮ ಆಶ್ರಮದಲ್ಲಿ ಭದ್ರವಾಗಿ ಕಾಲೂರಿದ ನಂತರ ಮಹಾತ್ಮಾಜೀ ನಾಗರಿಕ ಅವಿಧೇಯತೆ ಆಂದೋಲನ ಆರಂಭಿಸಿದರು ಇನ್ನೂ ಸರಿಯಾಗಿ ಹೇಳುವುದಾದರೆ, ಪುನರಾರಂಭಿಸಿದರು.1917-18ರ 'ಖೇಡಾ ಸತ್ಯಾಗ್ರಹ' ಕ್ಕಿಂತ ಮುಂಚೆಯೇ ಗಾಂಧೀಜಿ 1917ರಲ್ಲಿಯೇ ಬಿಹಾರಿಗೆ ಹೋಗಿದ್ದರು. ಚಂಪಾರಣ ಜಿಲ್ಲೆಯಲ್ಲಿ ರೈತರ ಮೇಲಾಗುತ್ತಿದ್ದ ದಬ್ಬಾಳಿಕೆ ಮತ್ತು ವಿದೇಶೀಯರ ಶೋಷಣೆಯನ್ನು ತಡೆಯುವ ಉದ್ದೇಶದಿಂದ ಅವರು ಚಂಪಾರಣ ಆಂಧೋಲನವನ್ನು ಆರಂಭಿಸಿದ್ದರು. ಶತಮಾನಗಳಿಂದಲೂ ಅವಮಾನ ಮತ್ತು ಶೋಷಣೆಗೆ ಒಳಗಾಗಿದ್ದ ಅಮಾಯಕ ರೈತಾಪಿಗಳ ಶ್ರೇಯೋಭಿವೃದ್ಧಿಗಾಗಿ ಗಾಂಧೀಜಿಯವರಿಂದ ಆರಂಭಿಸಲಾಗಿದ್ದ ಈ ಹೊಸ ನಮೂನೆಯ ಹೋರಾಟದಲ್ಲಿ ಬಿಹಾರಿನ ವಕೀಲರ ಒಂದು ತಂಡ ಸಕ್ರಿಯವಾಗಿ ಸಹಾಯಕ್ಕೆ ನಿಂತಿತು. ಇಂಥ ಸಂದರ್ಭದಲ್ಲಿ ಸಾರ್ವಜನಿಕ ಸೇವೆಯ ಆಕಾಂಕ್ಷೆ ಒಳಗೊಳಗೆ ಹುರಿಗೊಳ್ಳುತ್ತಿದ್ದ ರಾಜೇಂದ್ರರ ಮನಸ್ಸು ಸಹಜವಾಗಿಯೇ ಆ ಕಡೆಗೆ ಆಕರ್ಷಿಸಲ್ಪಟ್ಟಿತು. ಯುವ ವಕೀಲರಾಗಿದ್ದ ರಾಜೇಂದ್ರ ಪ್ರಸಾದರಿಗೆ ಅದೊಂದು ಸತ್ಯದ ಆಂದೋಲನವಾಗಿ ಕಾಣಿಸಿತು.

ಚಂಪಾರಣ ಪ್ರಯೋಗವು ನಿಜವಾಗಿಯೂ ಭಾರತದಲ್ಲಿಯ ಮೊಟ್ಟ ಮೊದಲ ಸಾಮೂಹಿಕ ಹೋರಾಟದ ಉದಾಹರಣೆಯಾಗಿತ್ತು ಇಡೀ ದೇಶದಲ್ಲಿ ವಿದ್ಯುತ್ ಸಂಚಾರವಾದಂತಾಗಿ ಶಕ್ತಿ ಸಂಚಯಗೊಂಡಿತು. ಗಾಂಧೀಜಿ ಚಂಪಾರಣದ ಅನುಭವದಿಂದ ಸತ್ಯಾಗ್ರಹ ವಿಧಾನಕ್ಕೆ ಹೊಸಹೊಸ ಆಯಾಮಗಳನ್ನು ನೀಡಿದರು. ಚಂಪಾರಣದ ಸಾಧನೆಯ ಪರಿಣಾಮವಾಗಿ ಡಾ॥ ರಾಜೇಂದ್ರ ಪ್ರಸಾದರಂಥ ಅನೇಕ ಪ್ರಖರ ಬುದ್ಧಿ ಜೀವಿಗಳು ಗಾಂಧೀಜಿಯ ಅನುಯಾಯಿಗಳಾದರು. ಮಹಾತ್ಮರು ಜನಪ್ರಿಯ ಹೋರಾಟಕ್ಕೆ ಆಧ್ಯಾತ್ಮಿಕ ಶಕ್ತಿ ತಂದುಕೊಟ್ಟರು. ಇಂಥ ಆಧ್ಯಾತ್ಮಿಕ ಶಕ್ತಿಯಿಂದ ಸರ್ವರನ್ನೂ ಆಕರ್ಷಿಸುತ್ತಿದ್ದ ಆ ಆಂದೋಲನದಲ್ಲಿ ರಾಜೇಂದ್ರ ಪ್ರಸಾದರಂಥ ವ್ಯಕ್ತಿಗಳು ಮನಸಾರೆ ಬಂದು ಸೇರಿಕೊಂಡದ್ದು, ಜೀವನ ಪರ್ಯಂತವೂ ಗಾಂಧೀಜಿಯ ನೆಚ್ಚಿನ ಶಿಷ್ಯರಾಗಿ ಅಲ್ಲಿಯೇ ಉಳಿದುಕೊಂಡದ್ದು, ಆಶ್ಚರ್ಯದ ಸಂಗತಿಯೇನಲ್ಲ. 'ಚಂಪಾರಣ ಸತ್ಯಾಗ್ರಹದ' ಸವಿವರವಾದ ಕಥೆಯನ್ನು ಬಾಬು ರಾಜೇಂದ್ರ ಪ್ರಸಾದರು ಅದೇ ಹೆಸರಿನ 225 ಪುಟದ ಪುಸ್ತಕದಲ್ಲಿ ಬಹು ಸಮರ್ಥವಾಗಿ ದಾಖಲೆಗೊಳಿಸಿದ್ದಾರೆ. ಅದು ಹಿಂದೀಯಲ್ಲಿ ಬರೆದದ್ದು 1919ರಲ್ಲಿ; ಪ್ರಕಟವಾದದ್ದು 1922ರಲ್ಲಿ .ಅದರ ಇಂಗ್ಲೀಷ್ ಅನುವಾದ 1928ರ ಮಾರ್ಚನಲ್ಲಿ ಪ್ರಕಟವಾಯಿತು. ಈ ಗ್ರಂಥವನ್ನು ರಾಜೇಂದ್ರ ಪ್ರಸಾದರು 'ದಲಿತ ಮಾನವತೆಗೆ ಅರ್ಪಿಸಿದ್ದಾರೆ. ಗಾಂಧೀಜಿಯವರೊಂದಿಗಿದ್ದ ನೇರ ಮತ್ತು ಜೀವಂತ ಸಂಪರ್ಕದಿಂದಾಗಿ ರಾಜೇಂದ್ರ ಪ್ರಸಾದರು ರಾಷ್ಟ್ರೀಯ ಆಂದೋಲನದ ಮುಂಚೂಣಿಗೆ ಬಂದರು. ಅವರು ಸಹಜವಾಗಿಯೇ ಪ್ರಮುಖ ಕಾಂಗ್ರೆಸಿಗರಾದರು ರಾಜೇಂದ್ರ ಪ್ರಸಾದರು ನಮ್ಮ ದೇಶಕ್ಕೆ ಸಲ್ಲಿಸಿದ ಪ್ರತಿಯೊಂದು ಸೇವೆಯಲ್ಲಿಯೂ ಗಾಂಧೀಜಿಯವರ ಆಧ್ಯಾತ್ಮಿಕ ಶಕ್ತಿ ಅವರಿಗೆ ಪ್ರೇರಣೆ ನೀಡಿದೆ. ರಾಜೇನ್ ಬಾಬು ಗ್ರಾಮೀಣ ಭಾರತವನ್ನೆಂದೂ ಮರೆಯಲಿಲ್ಲ. ಅವರ ಲೆಕ್ಕಾಚಾರದಲ್ಲಿ ಯಾವಾಗಲೂ ಗ್ರಾಮೀಣ ಭಾರತಕ್ಕೆ ಅಗ್ರಸ್ಥಾನ ಭಾರತದ ಹಳ್ಳಿಗಾಡು, ಅದರ ಮಿಲಿಯಂತರ ಜನರು ಸಹಾ ಅವರ ಕಣ್ಮುಂದಿರುತ್ತಿದ್ದರು ನಿಜವಾಗಿಯೂ ಭಾರತ ಇದ್ದದ್ದು ಮತ್ತು ಈಗ ಇರುತ್ತಿರುವುದೂ ಅಸಂಖ್ಯಾತ ಹಳ್ಳಿಗಳಲ್ಲಿ ರಾಜೇಂದ್ರ ಪ್ರಸಾದರು ಯಾವಾಗಲೂ ಗ್ರಾಮೀಣ ಜನತೆಗೆ ಅವರ ಸಮಸ್ಯೆಗಳಿಗೆ ಅತ್ಯುನ್ನತ ಪ್ರಾಶಸ್ತ್ಯ ಕೊಡುತ್ತಿದ್ದರು. ಗಾಂಧೀಜಿಯ ಚತುರ್ದಶಾಂಸ 'ರಚನಾತ್ಮಕ ಕಾರ್ಯಕ್ರಮ' ಅವರ ಮೇಲೆ ಆಳವಾದ ಪ್ರಭಾವ ಬೀರಿತ್ತು. ಆದ್ದರಿಂದ ಅವರು 'ಕೆಲವು ಸಲಹೆಗಳ' ರೂಪರೇಷಗಳನ್ನೊಳಗೊಂಡ 48 ಪುಟದ ಒಂದು ಪುಸ್ತಿಕೆಯನ್ನು ಹೊರತಂದಿದ್ದರು. ಪಾಟ್ನಾ ಉಚ್ಚ ನ್ಯಾಯಾಲಯದಲ್ಲಿ ವಕೀಲರಾಗಿದ್ದ ರಾಜೇಂದ್ರ ಪ್ರಸಾದರು, ಈ ಇಡೀ ಉಪಖಂಡದ ಶೋಷಿತ ಜನತೆಯ ಮಹತ್ತರ ಕಾರಣಕ್ಕಾಗಿ ಅಹರ್ನಿಶಿ ದುಡಿಯುವ ನೇತಾರನಾಗಿ ಹೊರಹೊಮ್ಮುವ ವರೆಗಿನ ದೀರ್ಘ ಪಯಣ ತುಂಬಾ ಘಟನಾಪೂರ್ಣವಾದದ್ದು. ಅದೊಂದು ಕಠಿಣತಮವಾದ ಪಯಣವಾಗಿತ್ತು ಅಷ್ಟೇ ಅನಿರೀಕ್ಷಿತ, ರೋಮಾಂಚಕಾರಿ ಘಟನೆಗಳಿಂದಲ್ಲೂ ಕೂಡಿತ್ತು; ಅದೊಂದು ಅಪ್ಯಾಯಮಾನಕರವೂ, ಆತ್ಮಸಂತೃಪ್ತಿಕರವೂ ಆದ ಮಹಾ ಅಭಿಮಾನವಾಗಿತ್ತು. ಜನತೆಗಾಗಿ ಸೇವೆ, ಜನತೆಯ ಸೇವೆಯ ಒಂದು ಮಹಾನ್ ಮಾರ್ಗವಾಗಿತ್ತು ಮತ್ತು ಅಷ್ಟೇ ಹರ್ಷದಾಯಕ ಹವ್ಯಾಸವಾಗಿತ್ತು. ಗಾಂಧೀಜಿಯ ರಚನಾತ್ಮಕ ಕಾರ್ಯಕ್ರಮದ ಬಗ್ಗೆ ರಾಜೇನ್ ಬಾಬುಗಿದ್ದ ನಂಬುಗೆ, ನಿಷ್ಠೆ ನೆಪ ಮಾತ್ರದ ಆಚರಣೆಯ ಸಂಗತಿಯಾಗಿರಲಿಲ್ಲ ಅದು ಅವರ ದೈನಂದಿನ ಕ್ರಿಯೆಗೆ ಗತಿಗೂಡಿಸಬಲ್ಲ ಜೀವಂತ ವಿಚಾರಧಾರೆಯಾಗಿತ್ತು; ಜನತೆಯೊಂದಿಗಿನ ಸಂಸರ್ಗಕ್ಕೆ ನೈಜ ಭಾಷೆಯಾಗಿತ್ತು. ಅದೊಂದು

ಚಾರಿತ್ರಿಕ ಆಕಸ್ಮಿಕ ಅವರು ಮಹಾತ್ಮಾ ಗಾಂಧೀಜಿಯ ಆಧ್ಯಾತ್ಮಿಕ ಪ್ರಭಾವಲಯಕ್ಕೆ ದಿಢೀರನೆ ಬಂದೊಡನೆಯೇ ಅವರಿಗೆ ಈ ಅನುಭವವಾಗಿತ್ತು. ಅವರು ತಮ್ಮ ಬದುಕಿನಾದ್ಯಂತ ಗಾಂಧೀಜಿಯ ಆಧ್ಯಾತ್ಮಿಕ ನೇತೃತ್ವದ ಅಡಿಯಲ್ಲಿಯೇ ನಡೆದರು.

ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾಗಿ ಡಾ॥ ಪ್ರಸಾದರು ನೀಡಿದ ಕಾಣಿಕೆ ಅಪಾರವಾದದ್ದು ಮತ್ತು ಅಷ್ಟೇ ಮಹತ್ವವುಳ್ಳದ್ದು. ಅವರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ದೇಶದ ಅಸಂಖ್ಯಾತ ಜನರ ಅಕ್ಕರೆ ಆದರಗಳನ್ನು ಗಳಿಸಿಕೊಂಡರು. ಅವರು ಎಲ್ಲಿಯೇ ಹೋಗಲಿ ಎಲ್ಲರ ಗಮನದ ಕೇಂದ್ರ ಅವರಾಗಿರುತ್ತಿದ್ದರು; ಅವರ ಬಗ್ಗೆ ಉನ್ನತ ಗೌರವ ಹೊಂದಿರುತ್ತಿದ್ದ ಜನತೆಯ ಪ್ರಶಂಸೆಯ ಧಾರೆ ಧುಮ್ಮಿಕ್ಕಿ ಹರಿಯುತ್ತಿತ್ತು.

ಜನತೆಯ ಮಧ್ಯ ಅವರಿಗಿದ್ದ ನೈಜ ಜನಪ್ರಿಯತೆಯಿಂದಾಗಿ ಅವರು ರಾಷ್ಟ್ರಪತಿ ಭವನದಿಂದ ನಡೆಸುತ್ತಿದ್ದ ಕಾರ್ಯಕಲಾಪಗಳಿಗೆ ನಿಷ್ಪಕ್ಷಪಾತ ಗುಣ ಸಹಜವಾಗಿಯೇ ಮೇಳವಿಸುತ್ತಿತ್ತು. ರಾಷ್ಟ್ರಪತಿ ಭವನದ ಘನತೆ ಗೌರವ ಕಾಯುತ್ತ ಅವರು ತೆಗೆದುಕೊಳ್ಳುತ್ತಿದ್ದ ತೀರ್ಮಾನಗಳು ಸ್ವತಂತ್ರವಾಗಿರುತ್ತಿದ್ದವು. ಡಾ॥ ರಾಜೇಂದ್ರ ಪ್ರಸಾದರು 1946ರ ಸೆಪ್ಟಂಬರ್ 2 ರಂದು ರಚನೆಯಾಗಿದ್ದ ಮಧ್ಯಂತರ ಸರ್ಕಾರದಲ್ಲಿ ಕೃಷಿ ಮತ್ತು ಆಹಾರ ಮಂತ್ರಿಗಳಾಗಿ ಸೇವೆ ಸಲ್ಲಿಸಿದರು ತೀರ ಸಂದಿಗ್ಧ ಪರಿಸ್ಥಿತಿಯಲ್ಲಿ ಅದೊಂದು ಮಹತ್ವದ ಜವಾಬ್ದಾರಿಯಾಗಿತ್ತು. ಆದರೂ ಅವರು ಅದನ್ನು ತುಂಬ ಯಶಸ್ವಿಯಾಗಿ ನಿರ್ವಹಿಸಿದರು. ಅವರ ಮನಮೆಚ್ಚುವ ಯಶಸ್ಸು ಅದಾಗಿತ್ತು. 1947ರ ಆಗಸ್ಟ 15 ರಂದು ನಮಗೆ ಸ್ವಾತಂತ್ರ್ಯ ಬಂದಾಗಲೂ ಅವರು ಕೇಂದ್ರ ಸಂಪುಟದ ಸಚಿವರಾಗಿಯೇ ಮುಂದುವರಿಯಬಹುದಿತ್ತು. ಆದರೆ ಏತನ್ಮಧ್ಯೆ ಅವರು ಭಾರತದ ಸಂವಿಧಾನ ಸಭೆಯ ಅಧ್ಯಕ್ಷರಾಗಿ ಚುನಾಯಿತರಾದರು. ಸಂವಿಧಾನ ಸಭೆಯ ಅಧ್ಯಕ್ಷೀಯ ಸ್ಥಾನ ತುಂಬ ಗಂಭೀರ ಮತ್ತು ಸೃಜನಶೀಲ ಸ್ವರೂಪದಾಗಿತ್ತು. ಹೀಗಾಗಿ, ಅವರು ಸಂಪುಟ ದರ್ಜೆಯ ಸ್ಥಾನದೊಂದಿಗೆ ಅದನ್ನೂ ನಿಭಾಯಿಸುವುದು ತುಂಬ ದುಸ್ತರದ ಕೆಲಸವಾಗಿತ್ತು. ಪರಿಣಾಮವಾಗಿ, ಸಚಿವ ಸ್ಥಾನವನ್ನು ಬಿಟ್ಟುಕೊಟ್ಟರು. ಇದರಿಂದ ಸಂವಿಧಾನ ಸಭೆಗೆ ಆದ ಲಾಭಕ್ಕಿಂತಲೂ ಕೇಂದ್ರ ಮಂತ್ರಿ ಮಂಡಲಕ್ಕಾದ ಹಾನಿಯೇ ಹೆಚ್ಚು.

ಸಂವಿಧಾನ ಸಭೆ 1946ರ ಡಿಸೆಂಬರ್ 9 ರಂದು ನವದೆಹಲಿಯಲ್ಲಿ ಮೊದಲಬಾರಿಗೆ ಸಭೆ ಸೇರಿತು. ಎರಡು ದಿನಗಳ ನಂತರ ಡಿಸೆಂಬರ್ 11 ರಂದು ಡಾ॥ ರಾಜೇಂದ್ರ ಪ್ರಸಾದರು ಸಂವಿಧಾನ ಸಭೆಯ ಅಧ್ಯಕ್ಷರಾಗಿ ಚುನಾಯಿತರಾದರು. ಇದು ಡಾ॥ ರಾಜೇಂದ್ರ ಪ್ರಸಾದರ ಹೃನ್ಮನಗುಣಾತಿಶಯಗಳಿಗೆ ಇಡೀ ರಾಷ್ಟ್ರ ನೀಡಿದ ಮನ್ನಣೆ, ಅವರ ವ್ಯಕ್ತಿತ್ವಕ್ಕೆ ತೋರಿದ ವಿಶ್ವಾಸದ ಕುರುಹಾಗಿತ್ತು. ಡಾ॥ ರಾಜೇಂದ್ರ ಪ್ರಸಾದರು ಅವಿರೋಧವಾಗಿ ಆಯ್ಕೆಯಾದಾಗ, ಅಲ್ಲಿ ನೆರೆದ ಸಂವಿಧಾನ ಶಿಲ್ಪಿಗಳ ಭಾವನೆಗೆ ಧನಿಗೊಟ್ಟವರು ಡಾ॥ ಸರ್ವೇಪಲ್ಲಿ ರಾಧಾಕೃಷ್ಣನ್, ಡಾ॥ ಪ್ರಸಾದರನ್ನು ಅಭಿನಂದಿಸಿ ಆಡಿದ ತತ್ವಜ್ಞಾನಿ ಮುತ್ಸದ್ದಿಯ ಮಾತುಗಳಿವು:

"ಸಂವಿಧಾನವು ನಮ್ಮ ದೇಶದ ಮೂಲಭೂತ ಕಾಯ್ದೆಯಾಗಿರುತ್ತದೆ. ನಮ್ಮ ಅಧ್ಯಕ್ಷರು ಬಿಹಾರಿನವರಾಗಿದ್ದದ್ದು ಒಂದು ಆಕಸ್ಮಿಕವೇನಲ್ಲ. ಬಿಹಾರದ ಚಿತ್ ಶಕ್ತಿ ಅವರ ವ್ಯಕ್ತಿತ್ವವನ್ನೆಲ್ಲ ಆವರಿಸಿಕೊಂಡಿದೆ. ಭಾರತೀಯ ತತ್ವಾದರ್ಶತವಾಗಿರುವ ಸಜ್ಜನಿಕೆಯ ಅಜೇಯತೆ ಅವರ ನರನಾಡಿಗಳಲ್ಲಿ ಹರಿಯುತ್ತದೆ. ಮಹಾಭಾರತದ ಪ್ರಕಾರ, ನಯವಿನಯದಿಂದ ಕೂಡಿದ ಸಜ್ಜನಿಕೆ

ಕಠಿಣತಮವಾದದ್ದನ್ನೂ ಮೆಟ್ಟಿ ನಿಲ್ಲಬಲ್ಲದು, ಅದು ಮಾರ್ದವವಾದದ್ದನ್ನೂ ಜಯಿಸಬಲ್ಲದು. ಸದ್ವಿನಯದ ಸಜ್ಜನಿಕೆಗೆ ಅಜೇಯವಾದದ್ದು, ಅಸಾಧ್ಯವಾದದ್ದು ಯಾವುದೂ ಇಲ್ಲ. ಆದ್ದರಿಂದ ಸಜ್ಜನಿಕೆಯೇ ಅತ್ಯಂತ ಚೂಪಾದ ಆಯುಧವಾಗಿದೆ. ಡಾ|| ರಾಜೇಂದ್ರ ಪ್ರಸಾದರು ಇಂಥ ಸಜ್ಜನಿಕೆಗೆ, ಸದ್ಭಾವದ ಸಾಕಾರವಾಗಿದಾರೆ. ಅವರು ಶಿವದ ಸತ್‌ಪಾತ್ರರಾಗಿದ್ದಾರೆ; ಅವರ ಸಹನೆ, ಸಂಯಮ ಅಪಾರ, ನಿರ್ಭಿತತೆ ಅವರ ಎದ್ದು ಕಾಣುವ ಗುಣವಾಗಿದೆ. ಅನೇಕ ಕಷ್ಟ ಕೋಟಲೆಯ ಕುಲುಮೆಯಲ್ಲಿ ಹಾಯ್ದು ಪುಟವಿಕ್ಕಿದ ವ್ಯಕ್ತಿತ್ವ ಅವರದ್ದಾಗಿದೆ."

ಸಂವಿಧಾನ ಸಭೆಯ ಅಧ್ಯಕ್ಷರಾಗಿದ್ದ ಡಾ|| ಪ್ರಸಾದರು ತಮ್ಮನ್ನು ಅಭಿನಂದಿಸಿ ಪ್ರಶಂಸೆಯ ಹೊಳೆಹರಿಸಿದ್ದ ಸಭಿಕರಿಗೆ ವಂದಿಸಿ ಆಡಿದ ಮಾತುಗಳು ಅವರ ವಿನಯ ಮತ್ತು ಕೃತಜ್ಞತೆಗೆ ಸಾಕ್ಷಿಯಾಗಿದ್ದವು: "ಈ ಸಭೆಯ. ಒಂದು ಸ್ವತಂತ್ರ, ಸ್ವಯಂ ನಿರ್ಧಾರಕ ಮತ್ತು ಸ್ವಯಂ ನಿಯಂತ್ರಕ ನಿಕಾಯವಾಗಿದೆ ಇದರ ನಡವಳಿಕೆಗಳಲ್ಲಿ ಹೊರಗಿನ ಯಾವುದೇ ಶಕ್ತಿ ಹಸ್ತಕ್ಷೇಪ ಮಾಡುವಂತಿಲ್ಲ ಇದರ ನಿರ್ಧಾರಗಳನ್ನು ಹೊರಗಿನವರ್‍ಯಾರ ಬುಡಮೇಲು ಮಾಡುವದಾಗಲೀ, ಬದಲಿಸುವುದಾಗಲೀ ಅಥವಾ ತಿದ್ದುವದಾಗಲೀ ಸಾಧ್ಯವಿಲ್ಲ". ಸಂವಿಧಾನ ಸಭೆಯು ನಿಜವಾಗಿಯೂ ಒಂದು ಸರ್ವೋಚ್ಚ ಸಭೆಯಾಗಿತ್ತು ತುಂಬ ತೀವ್ರಗತಿಯಲ್ಲಿ ಮತ್ತು ಸುಯೋಗ್ಯವಾದ ರೀತಿಯಲ್ಲಿ ಒಂದು ಪ್ರಜಾಸತ್ತಾತ್ಮಕ ಸಂವಿಧಾನ ರೂಪಿಸಿಕೊಡುವ ಜವಾಬ್ದಾರಿ ಅದರದಾಗಿತ್ತು. ವಿಶಾಲವೂ ವೈವಿಧ್ಯಮಯವೂ ಏಕಕಾಲಕ್ಕೆ ಪ್ರಾಚೀನವೂ ಆಧುನಿಕವೂ ಆಗಿದ್ದ ಭಾರತದಂಥ ಬೃಹತ್ ರಾಷ್ಟ್ರಕ್ಕೆ ಒಂದು ಸಂವಿಧಾನವನ್ನು ಶಿಲ್ಪಿಸುವ ಹೊಣೆ ತುಂಬ ಗುರುತರವಾದದ್ದು. ಅವಸರವಸರದಲ್ಲಿ, ಯದ್ವಾತದ್ವಾ ಹೇಗಾದರೂ ಮಾಡಿ ಮುಗಿಸಬೇಕಾದ ಕೆಲಸ ಆದಾಗಿರಲಿಲ್ಲ. ತೋರಿಕೆಗೆ ಅಸಾಧ್ಯವಾಗಿದ್ದ ಈ ಮಹತ್ ಕಾರ್ಯವನ್ನು ಲೌಲನಿಕವಾಗಿ ಮೂರೇ ವರ್ಷಗಳಷ್ಟು ಕಡಿಮೆ ಅವಧಿಯಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ್ದು ಒಂದು ಪವಾಡವೇ ಸರಿ. ಇದು ಸಾಧ್ಯವಾದದ್ದು ಮುಖ್ಯವಾಗಿ ದೃಷ್ಟಾರರಾಗಿದ್ದ ಮುಖಂಡರು ಮತ್ತು ಸಮರ್ಪಣಾಭಾವದ ಸದಸ್ಯರ ಸಹನೆ ಮತ್ತು ಶ್ರಮದಿಂದ.

ಗ್ರ್ಯಾನವಿಲ್ ಆಸ್ಟಿನ್ ಅವರು ಈ ಸಂಗತಿಯನ್ನು ಕುರಿತು ಬಹು ಮನೋಜ್ಞವಾಗಿ ಹೇಳಿದ್ದಾರೆ:"ಈ ಕಾರ್ಯವನ್ನು ನಿರ್ವಹಿಸುತ್ತಿದ್ದಾಗ ಸದಸ್ಯರ ಮುಂದಿದ್ದ ಆದರ್ಶ ಮತ್ತು ಅವರಿಗೊದಗಿ ಬಂದು ಶಕ್ತಿ, ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಮಹೋನ್ನತ ಉದ್ದೇಶಕ್ಕಾಗಿ ಹುಟ್ಟಿಬಂದ ಆದರ್ಶ, ಶಕ್ತಿಗಳೇ ಆಗಿದ್ದವು. ಒಂದು ಸಂವಿಧಾನವು ತನ್ನಷ್ಟಕ್ಕೆ ತಾನೇ ಒಂದು ಆಧುನಿಕ ಭಾರತವನ್ನು ನಿರ್ಮಿಸಲಾರದೆಂಬುದನ್ನು ಸದಸ್ಯರು ಮನಗಂಡಿದ್ದರು. ಆದರೆ ಅದು ನವಭಾರತದ ನಿರ್ಮಾಣದ ದಾರಿಯನ್ನು ಬೆಳಗಿಸಬೇಕೆಂಬ ಉದ್ದೇಶ ಅವರದಾಗಿತ್ತು." ಭಾರತದ ಸಂವಿಧಾನ ಸಲಹೆಗಾರನಾಗಿ ವಿಶೇಷವಾಗಿ ನೇಮಕಗೊಂಡಿದ್ದ ಸರ್ ಬಿ. ಎನ್. ರಾವ್ ಮತ್ತು ಅನುಭವಸ್ಥ ಸಂವಿಧಾನ ಪಂಡಿತರಾಗಿದ್ದ ಡಾ|| ಬಿ. ಆರ್. ಅಂಬೇಡ್ಕರ್, ಅಲ್ಲಾದಿ ಕೃಷ್ಣ ಸ್ವಾಮಿ ಅಯ್ಯರ್, ಎನ್.ಗೋಪಾಲಸ್ವಾಮಿ ಅಯ್ಯಂಗಾರ್, ವಿ.ಟಿ. ಕೃಷ್ಣಮಾಚಾರಿ, ಕೆ. ಎಮ್. ಮುನ್ಷಿಕೆ. ಸಂತಾನಂ, ಕೆ.ಜಿ. ಶಹಾ, ಮುಂತಾದ ನುರಿತ ಮುತ್ಸದ್ದಿ ದಿಗ್ಗಜಗಳು, ಸ್ವಾತಂತ್ರ್ಯ ಹೋರಾಟದ ಮುಂದಾಳುಗಳು ತಮ್ಮ ಪ್ರತಿಭೆಯನ್ನು ಧಾರೆಯರೆದು ರಚಿಸಿದ ನಮ್ಮ ಸಂವಿಧಾನ ನಿಜವಾಗಿಯೂ ನಮ್ಮ ವರ್ತಮಾನ ಮತ್ತು ಭವಿಷ್ಯತ್ತಿನ ಜನಾಂಗದ ದಾರಿಯನ್ನು

ದೀಪ್ತಗೊಳಿಸಬಲ್ಲದಾಗಿದೆ. ಗ್ರ್ಯಾನವಿಲ್ ಆಸ್ಟಿನ್ ಸಂಕ್ಷಿಪ್ತವಾಗಿ ನಮ್ಮ ನಾಲ್ಕು ಜನ ರಾಷ್ಟ್ರ ನಿರ್ಮಾಪಕ ನೇತಾರರ ಮೇಲೆ ತನ್ನ ಗಮನ ಕೇಂದ್ರೀಕರಿಸಿದ್ದಾನೆ.ಅವರೇ ಪಂಡಿತ ಜವಾಹರಲಾಲ್ ನೆಹರು ಸರ್ದಾರ್ ವಲ್ಲಭಭಾಯಿ ಪಟೇಲ, ರಾಜೇಂದ್ರ ಪ್ರಸಾದ ಮತ್ತು ಮೌಲಾನಾ ಅಬುಲ ಕಲಾಂ ಆಜಾದ್ ಅಮೇರಿಕೆಯ ಆ ವಿಖ್ಯಾತ ಲೇಖಕ, ಚರಿತ್ರಕಾರನ ಮಾತುಗಳಿವು:"ನೆಹರು ಪಟೇಲ, ಪ್ರಸಾದ ಮತ್ತು ಅಜಾದ್ ವಾಸ್ತವವಾಗಿ ಈ ನಾಲ್ಕು ನಾಯಕ ಮಣಿಗಳು ಸಂವಿಧಾನ ಸಭೆಯ ಒಳಗೇ ಬಂದು ಅಲ್ಪಸಂಖ್ಯಾತರ ಅಧಿಪತ್ಯವನ್ನು ಸ್ಥಾಪಿಸಿದರು." *

ಮೂರು ವರ್ಷಗಳ ಗಂಭೀರ ಮತ್ತು ಸತತ ಶ್ರಮದ ನಂತರ ಸಂವಿಧಾನ ಸಭೆಯ ಸದಸ್ಯರ ಪ್ರಯತ್ನಗಳು ಫಲನೀಡಿದ್ದವು; ಸಂವಿಧಾನ ಸಭೆಗೆ ವಹಿಸಿಲಾಗಿದ್ದ ಸಂವಿಧಾನ ರಚನೆಯ ಕೆಲಸ ಪೂರ್ತಿಗೊಂಡಿತ್ತು. 1949 ನವೆಂಬರ್ 26 ರಂದು ಯಾವುದೇ ಭಿನ್ನಾಭಿಪ್ರಾಯವಿಲ್ಲದೆ, ದೀರ್ಘ ಹರ್ಷೋದ್ಗಾರಗಳ ಮಧ್ಯೆ ಅದನ್ನು ಸ್ವೀಕರಿಸಲಾಯಿತು. ಸಂವಿಧಾನವನ್ನು ವಿಧ್ಯುಕ್ತವಾಗಿ ಮಂಡಿಸಿ, ಡಾ॥ ಅಂಬೇಡ್ಕರರು ತಮ್ಮ ವಿದ್ವತ್ ಪೂರ್ಣ ಹಾಗೂ ವಿಚಾರ ಪ್ರಚೋದಕ ಭಾಷಣ ಮಾಡಿದ ಮೇಲೆ ಅಧ್ಯಕ್ಷ ಪ್ರಸಾದರು ಕೆಲವು ಮಾತುಗಳನ್ನಾಡ ಬಯಸಿದರು. ಅವರು ಹಿಂದೀಯಲ್ಲಿ ಮಾತಾಡಿದರು. ಮಹತ್ತರ ಕೆಲಸವನ್ನು ನಿಗದಿತ ವೇಳೆಯಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ್ದಕ್ಕೆ ಸಭೆಯನ್ನು ಅಭಿನಂದಿಸಿ ಮಾತನಾಡುತ್ತ, ಅವರು ಸಂವಿಧಾನ ರಚನೆಯ ಸಂದರ್ಭದಲ್ಲಿ ಸದಸ್ಯರು ಪರಿಶೀಲಿಸಿದ ಹಲವಾರು ಅಂಶಗಳ ಚರಿತ್ರೆಯನ್ನು ವಿಶ್ಲೇಷಿಸುತ್ತಾ, ಅವರು ಬಳಸಿದ ತರ್ಕವನ್ನು ವಿವರಿಸುತ್ತಾ, ದೀರ್ಘವಾಗಿ ಮಾತನಾಡಿದರು. ಇನ್ನು ಅಧ್ಯಕ್ಷರ ಸ್ಥಾನದ ಕುರಿತು ಹೇಳಿದ ಮಾತು ಇಂತಿವೆ:

> "ನಾನು ಒಬ್ಬ ಚುನಾಯಿತ ಅಧ್ಯಕ್ಷ ಮತ್ತು ಒಂದು ಚುನಾಯಿತ ಶಾಸನ ಸಭೆಯ ನಡುವೆ ಸಾಮರಸ್ಯದ ಹೊಂದಾಣಿಕೆಯನ್ನು ಸ್ಥಾಪಿಸಬೇಕಾಗಿತ್ತು. ಈ ಉದ್ದೇಶಕ್ಕಾಗಿ ನಾವು ಹೆಚ್ಚೂ ಕಡಿಮೆ ಬ್ರಿಟಿಷ್ ರಾಜನ ಸ್ಥಾನಮಾನವನ್ನೇ ನಮ್ಮ ಅಧ್ಯಕ್ಷರಿಗೆ ದೊರೆಯುವಂತೆ ವ್ಯವಸ್ಥೆಗೊಳಿಸಿದ್ದೇವೆ. ಇದು ತೃಪ್ತಿದಾಯಕವಾಗಿರಬಹುದು. ಅಥವಾ ಇರಲಿಕ್ಕಿಲ್ಲ. ಕೆಲವರ ಪ್ರಕಾರ ಅಧ್ಯಕ್ಷರಿಗೆ ಹೆಚ್ಚಿನ ಅಧಿಕಾರ ಕೊಡಲಾಗಿದೆ. ಇನ್ನೂ ಕೆಲವರ ಅನಿಸಿಕೆಯೆಂದರೆ, ಅಧ್ಯಕ್ಷರು ಚುನಾಯಿತ ಅಧ್ಯಕ್ಷರಾಗಿರುವುದರಿಂದ ಅವರಿಗೆ ಈಗಿರುವುದಕ್ಕಿಂತಲೂ ಹೆಚ್ಚಿನ ಅಧಿಕಾರ ಕೊಡಬೇಕಾಗಿತ್ತು."

ಅನಂತರರ ಡಾ॥ ರಾಜೇಂದ್ರ ಪ್ರಸಾದರು ರಾಷ್ಟ್ರಪತಿ ಚುನಾವಣೆಯ ವಿಧಿ ವಿಧಾನಗಳನ್ನು ಕುರಿತು ಮಾತನಾಡಿದರು ಅವರ ದೃಷ್ಟಿಯಲ್ಲಿ ರಾಷ್ಟ್ರಾಧ್ಯಕ್ಷರು ರಾಷ್ಟ್ರದ ಸಂವಿಧಾನಿಕ ಅಧ್ಯಕ್ಷೀಯ ಸ್ಥಾನ ಪಡೆದಿರುತ್ತಾರೆಂದು ಅಂತಿಮವಾಗಿ ಒಪ್ಪಿಕೊಂಡರು. ಆ ಕುರಿತು ಹೆಚ್ಚಿಗೆ ಮಾತಾಡದೆ ಆ ವಿಷಯವನ್ನು ಅಲ್ಲಿಗೇ ಬಿಟ್ಟರು . ಅಧ್ಯಕ್ಷರ ಹುದ್ದೆಯ ಕಾರ್ಯದಕ್ಷತೆಯ ಕುರಿತು ಅವರು ಅಂದು ತಳೆದಿದ್ದ ನಿರುದ್ದೇಶಿತ ಮೌನ ಮುಂದೆ ಅರ್ಥಪೂರ್ಣವಾಗಿ ಪರಿಣಮಿಸಿತು; ಜನವರಿ 26, 1950ರಿಂದ 1962ರ ಮೇ 12 ರ ವರೆಗೆ ಅವರು ರಾಷ್ಟ್ರಪತಿ ಹುದ್ದೆಯಲ್ಲಿದ್ದಾಗ ತಮ್ಮ ದಕ್ಷತೆಯಿಂದ ಆ ಹುದ್ದೆಗೆ ಘನತೆ ತಂದು ಕೊಟ್ಟರು. ಆ ಮೇಲೆ ಅವರು ನಮ್ಮ ಸಂವಿಧಾನದಲ್ಲಿ

* ಆಸ್ಟಿನ್, ಗ್ರಾನವಿಲ್ ದಿ ಇಂಡಿಯನ್ ಕಾನ್‌ಸ್ಟಿಟ್ಯೂಶನ್: ಕಾರ್ನರ್ ಸ್ಟೋನ್ ಆಫ್ ಎನೇಶನ್, ಆಕ್ಸಫರ್ಡ್, ಲಂಡನ್, 1966.

ಮಾಡಿಕೊಡಲಾಗಿರುವ ವಯಸ್ಕ ಮತದಾನದ ಅವಕಾಶ ಕುರಿತು ಮಾತನಾಡಿದರು. ಅದು ಅವರ ದೃಷ್ಟಿಯಲ್ಲಿ ತುಂಬ ಧೈರ್ಯದ ಮತ್ತು ಬುದ್ಧಿವಂತಿಕೆಯ ಹೆಜ್ಜೆಯಾಗಿತ್ತು. ಸಂವಿಧಾನದಲ್ಲಿ ಆ ಅವಕಾಶವನ್ನು ಸೃಷ್ಟಿಸುವುದರ ಮೂಲಕ ಮಹಾಜನತೆಯಲ್ಲಿ ವಿಶ್ವಾಸ ವ್ಯಕ್ತಪಡಿಸಲಾಗಿದೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಆ ಕುರಿತು ಅವರಾಡಿದ ಮಾತುಗಳು ಮನನೀಯವಾಗಿವೆ:

"ವಯಸ್ಕ ಮತದಾನದ ಬಗ್ಗೆ ಕೆಲವರು ತಮ್ಮ ಸಂಶಯ ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ ಅದೊಂದು ವಿವೇಕದ ಕ್ರಮವಲ್ಲ ವೈಯಕ್ತಿಕವಾಗಿ ಹೇಳುವುದಾದರೆ, ನಾನು ಅದನ್ನೊಂದು ಪ್ರಯೋಗವೆಂದು ಭಾವಿಸಿದ್ದೇನೆ. ಅದರ ಭವಿಷತ್ತಿನ ಪರಿಣಾಮದ ಕುರಿತು ಈಗಾಗಲೇ ಯಾರೊಬ್ಬರೂ ಏನೂ ಹೇಳುವುದು ಸಾಧ್ಯವಿಲ್ಲ. ಇದರಿಂದ ನಾನೇನೂ ದಿಗಿಲುಗೊಂಡಿಲ್ಲ. ನಾನೊಬ್ಬ ಹಳ್ಳಿಗಾಡಿನ ಮನುಷ್ಯ ನನ್ನ ಬೇರುಗಳು ಇನ್ನೂ ಅಲ್ಲಿಯೇ ಇವೆ. ಆದ್ದರಿಂದ ನಮ್ಮ ಮತದಾರರ ಒಂದು ಬಹು ದೊಡ್ಡ ಭಾಗ ಹಳ್ಳಿಯಲ್ಲಿಯೇ ವಾಸಿಸುತ್ತಿದೆ. ಈ ಹಳ್ಳಿಗರನ್ನು ನಾನು ಚೆನ್ನಾಗಿ ಬಲ್ಲೆ. ಗ್ರಾಮಾಂತರದ ಈ ಮಹಾಜನತೆ ವಾಸ್ತವವಾಗಿಯೂ ತುಂಬಾ ಜಾಣರು. ಸದಸದ್ ವಿವೇಕವುಳ್ಳವರು. ಇಂದಿನ ಪಟ್ಟಣದ ನಯ ನಾಜೂಕಿನ ಜನಕ್ಕೆ ಅವರ ಸಂಸ್ಕೃತಿ ಸೇರಲಿಕ್ಕಿಲ್ಲ ಆದರೂ ಅವರದೇ ಆದ ಒಂದು ಘನವಾದ ಸಂಸ್ಕೃತಿ ಅವರಿಗಿದೆ. ಆದ್ದರಿಂದ ಅವರ ಭವಿಷತ್ತಿನ ಬಗ್ಗೆ ನನಗೆ ಅಪನಂಬುಗೆಗಳೇನೂ ಇಲ್ಲ."

ಒಂದೊಂದು ಶಬ್ದವನ್ನು ಜಾಗರೂಕತೆಯಿಂದ ಆಯ್ದು ನಿರ್ಭಿತಿಯಿಂದ ಮಾಡಿದ ಅವರ ಈ ಸಮಾರೋಪ ಭಾಷಣದ ಕೊನೆಯಲ್ಲಿ ಅವರು ಎರಡು ವಿಷಯಗಳ ಕುರಿತು ತಮ್ಮ ಖೇದ ವ್ಯಕ್ತಪಡಿಸಿದರು. ಅಧ್ಯಕ್ಷ ಪ್ರಸಾದರ ಮಾತಿನಲ್ಲಿಯೇ ಹೇಳುವುದಾದರೆ, "ನನಗೆ ಎರಡು ವಿಷಯಗಳ ಕುರಿತು ವಿಷಾದವೆನಿಸುತ್ತಿದೆ; ಅದನ್ನು ನಾನು ಮಾನ್ಯ ಸದಸ್ಯರ ಜೊತೆ ಹಂಚಿಕೊಳ್ಳಬಯಸುತ್ತಿದ್ದೇನೆ. ಶಾಸನ ಸಭೆಯ ಸದಸ್ಯರಿಗೆ ಯಾವುದಾರೊಂದು ಅರ್ಹತೆ ನಿಗದಿಮಾಡಬೇಕಾಗಿತ್ತೆಂದು ನನ್ನ ಅಪೇಕ್ಷೆ ಆಡಳಿತ ನಡೆಸುವವರಿಗೆ, ಅದಕ್ಕೆ ಸಹಾಯ ಮಾಡುವವರಿಗೆ ಉನ್ನತೋನ್ನತ ಅರ್ಹತೆಗಳನ್ನು ನಿಗದಿಪಡಿಸಿರುವ ನಾವು, ಶಾಸನಗಳನ್ನು ರಚಿಸುವ ಶಾಸಕರಿಗೆ ಯಾವುದೇ ಅರ್ಹತೆಯನ್ನು ನಿಗದಿ ಮಾಡದೇ ಇರುವುದು ತುಂಬಾ ಅಸಂಗತವಾದದ್ದು. ಅವರು ಕೇವಲ ಚುನಾಯಿತರಾದರೆ ಸಾಕೆ? ಕಾಯ್ದೆ ರಚಿಸುವವರು ತತ್‌ಸಂವಾದಿಯಾದ ಬೌದ್ಧಿಕ ಸಾಮರ್ಥ್ಯ ಪಡೆದಿರಬೇಡವೆ? ಇದ್ದಕ್ಕಿಂತಲೂ ಹೆಚ್ಚಾಗಿ ಯಾವುದೇ ಸಂದರ್ಭ ಸನ್ನಿವೇಶದಲ್ಲಿ ಸಂತುಲಿತ ದೃಷ್ಟಿ ತಳೆಯಲು, ಸ್ವತಂತ್ರವಾಗಿ ವರ್ತಿಸಲು, ಇದೆಲ್ಲಕ್ಕೂ ಮಿಗಿಲಾಗಿ, ಬದುಕಿನ ಮೂಲಭೂತ ಸಂಗತಿಗಳ ಬಗ್ಗೆ ನಿಷ್ಠೆಯಿಂದ ನಡೆದುಕೊಳ್ಳಲು ಸಮುಚಿತ ಯೋಗ್ಯತೆ ಪಡೆದಿರ ಬೇಡವೆ? ಒಂದೇ ಮಾತಿನಲ್ಲಿ ಹೇಳುವುದಾದರೆ, ಚಾರಿತ್ರ್ಯ ಎನ್ನುವುದನ್ನು ಮೈಗೂಡಿಸಿಕೊಂಡಿರಬೇಡವೆ?" ಕೂಡಲೆ ಎಲ್ಲಾ ಸದಸ್ಯರು ಒಕ್ಕೊರಲಿನಿಂದ ಸಮ್ಮತಿ ಸೂಚಿಸುತ್ತಾ "ಕೇಳಿರಿ, ಕೇಳಿರಿ" ಎಂದರು. ಅಧ್ಯಕ್ಷರು ಮುಂದುವರೆದು:"ಯಾವುದೇ ಒಬ್ಬ ವ್ಯಕ್ತಿಯ ನೈತಿಕ ಗುಣಗಳನ್ನು ಅಳೆಯಲು ಮಾನದಂಡಗಳನ್ನು ರೂಪಿಸುವದು ಅಸಾಧ್ಯ ಮತ್ತು ಎಲ್ಲಿಯವರೆಗೆ ಇದು ಅಸಾಧ್ಯವಾಗಿರುತ್ತದೋ ಅಲ್ಲಿಯವರೆಗೆ ನಮ್ಮ ಸಂವಿಧಾನ ದೋಷಪೂರ್ಣವಾಗಿರುತ್ತದೆ. ಡಾ|| ಪ್ರಸಾದರ 'ಎರಡನೇ ವ್ಯಥೆಯೆಂದರೆ', "ನಾವು ನಮ್ಮ ಸಂವಿಧಾನವನ್ನು ಭಾರತೀಯ

ಭಾಷೆಯೊಂದರಲ್ಲಿ ರಚನೆ ಮಾಡಲು ಸಾಧ್ಯವಾಗದೇ ಇದ್ದದ್ದು." ಆದರೆ ಅಧ್ಯಕ್ಷರು ಮುಂದುವರಿದು ಒಪ್ಪಿಕೊಂಡರು:"ಈ ಎರಡೂ ವಿಷಯುಗಳಲ್ಲಿ ನಮಗೆ ಎದುರಾಗಿದ್ದ ಸಮಸ್ಯೆಗಳು ಅಪರಿಹಾರ್ಯವಾಗಿದ್ದವು". ಆದರೂ "ಅದರಿಂದ ನಮಗಾದ ವಿಷಾದದ ತೀವ್ರಯೇನೂ ಕಮ್ಮಿಯಾಗಲಿಲ್ಲ" ಎಂದು ತಮ್ಮ ಖೇದವನ್ನು ವ್ಯಕ್ತಪಡಿಸಿದರು. ತಮ್ಮ ಮಾತುಗಳನ್ನು ಮುಗಿಸುತ್ತಾ ನಮ್ಮ ಪ್ರಜಾತಾಂತ್ರಿಕ ಸಂವಿಧಾನ ಸರಿಯಾಗಿ ಕೆಲಸ ನಿರ್ವಹಿಸಬೇಕಾದರೆ, ಅದು ಸಾರ್ಥಕಗೊಳ್ಳಬೇಕಾದರೆ, ಅದಕ್ಕೆ ಬೆಂಬಲರೂಪವಾಗಿ ಸದೃಢವಾದ ಸಂಪ್ರದಾಯಗಳು ನೆಲೆಗೊಳ್ಳುವ ಅವಶ್ಯಕತೆಯಿದೆ ಎಂದು ಒತ್ತಿ ಹೇಳಿದರು. ಪ್ರಜಾತಾಂತ್ರಿಕ ಸಂಸ್ಥೆಗಳಲ್ಲಿರುವವರು "ಮತ್ತೊಬ್ಬರ ಅಭಿಪ್ರಾಯವನ್ನು ಗೌರವಿಸಲು ಸಿದ್ದರಾಗಿರಬೇಕು, ಕೊಡ ಕೊಳ್ಳುವ, ರಾಜಿ ಹೊಂದಾಣಿಕೆ ಮಾಡಿಕೊಳ್ಳುವ ಸಾಮರ್ಥ್ಯವನ್ನು ರೂಢಿಸಿಕೊಳ್ಳಬೇಕು, ಎಂದು ಡಾ॥ ಪ್ರಸಾದರು ಉಪದೇಶ ಪರವಾದ ಮಾತುಗಳನ್ನು ಹೇಳಿದರು. ಇಂದು ನಾಲ್ಕು ದಶಕಗಳಿಗೂ ಮಿಕ್ಕಿ ಮುನ್ನಡೆದಿರುವ ನಮ್ಮ ಪ್ರಜಾಪ್ರಭುತ್ವದಲ್ಲಿ ಸಂಸದೀಯ ಸಂಸ್ಥೆಗಳ ಚೌಕಟ್ಟು ಸುದೈವದಿಂದ ಇನ್ನೂ ಅಚ್ಯುತವಾಗಿಯೆ ಇದೆ. ಡಾ॥ ಪ್ರಸಾದರು ಅಂದು ಆಡಿದ ಮಾತುಗಳನ್ನು ಈಗ ಮತ್ತೆ ಜಾಗರೂಕತೆಯಿಂದ ಧೇನಿಸಬೇಕಾದ ಅವಶ್ಯಕತೆಯಿದೆ. ಅಂದು ಅವರು ಕೊಟ್ಟ ಕರೆಯನ್ನು ಇನ್ನೂ ಹೆಚ್ಚಿನ ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ಉದ್ದೇಶಪೂರ್ವಕವಾಗಿ ಜಾರಿಗೊಳಿಸಬೇಕಾಗಿದೆ.

ಡಾ॥ ರಾಜೇಂದ್ರ ಪ್ರಸಾದರು ಒಬ್ಬ ವಿದ್ವತ್‌ಪೂರ್ಣ ವಕೀಲರಾಗಿದ್ದರು; ಎಲ್ಲರ ಪ್ರೀತಿಗೂ ಪಾತ್ರರಾಗಿದ್ದರು, ಒಡನಾಡಿಗಳಾಗಿದ್ದರು, ಒಬ್ಬ ತುಂಬ ಜಿಗುಟುತನದ ಹೋರಾಟಗಾರರಾಗಿದ್ದರು, ಒಬ್ಬ ದಕ್ಷ ಆಡಳಿತಗಾರರಾಗಿದ್ದಂತೆಯೇ ಒಬ್ಬ ಸಮರ್ಥ ಸಂಸದೀಯ ಪಟುವಾಗಿದ್ದರು. ಇದಲ್ಲಕ್ಕೂ ಹೆಚ್ಚಾಗಿ ಅವರೊಬ್ಬ ಸಭ್ಯ, ಸುಸಂಸ್ಕೃತ ವ್ಯಕ್ತಿಯಾಗಿದ್ದರು ನಂಬಿಗಸ್ತ ರಾಷ್ಟ್ರೀಯ ನಾಯಕರಾಗಿದ್ದ ಅವರು ತಮ್ಮ ಸರಳತೆ, ಶ್ರೇಷ್ಠತೆಯಿಂದಾಗಿ ಸರ್ವರ ಗೌರವಕ್ಕೂ ಪಾತ್ರರಾಗಿದ್ದರು. ಅವರು ನಮ್ಮ ರಾಷ್ಟ್ರಪತಿ ಹುದ್ದೆಗೆ ಕೀರ್ತಿ ತಂದುಕೊಟ್ಟದ್ದಲ್ಲದೆ, ಭಾರತದ ಐಕ್ಯತೆಗಾಗಿ ನಿರಂತರ ದುಡಿಮೆ ಸಲ್ಲಿಸಿದರು. ಭಾರತದ ಮಾಹಾನ್ ಪರಂಪರೆಗೆ ಅತುಲ ನಿಷ್ಠೆ ತೋರುತ್ತಿದ್ದ ಅವರು ಮಹಾತ್ಮಾ ಗಾಂಧೀಜಿಯ ಹೆಜ್ಜೆಯಲ್ಲಿ ಹೆಜ್ಜೆಯಿಡುತ್ತಾ ಸಾರ್ವಜನಿಕ ಸೇವೆಯ ಪಾಠಗಳನ್ನು ಹೃದ್ಗತ ಮಾಡಿಕೊಂಡಿದ್ದರು. ತಮ್ಮ ಮಾತು ಕೃತಿ ಎಲ್ಲದರಲ್ಲೂ ರಾಷ್ಟ್ರಪಿತನ ಚೇತನ ತಾನೇ ತಾನಾಗಿ ವ್ಯಾಪಿಸುವಂತೆ ಎಚ್ಚರಿಕೆ ವಹಿಸುತ್ತಿದ್ದರು. ಭಾರತದ ಕೋಗಿಲೆಯೆಂದು ಖ್ಯಾತರಾಗಿದ್ದ ಸರೋಜಿನಿ ನಾಯ್ಡು ಡಾ॥ ರಾಜೇಂದ್ರ ಪ್ರಸಾದರ ಪ್ರಿಯ ಸಹೋದ್ಯೋಗಿಗಳಲ್ಲಿ ಒಬ್ಬರಾಗಿದ್ದರು. ಡಾ॥ ಪ್ರಸಾದರು ಸಂವಿಧಾನ ಸಭೆಯ ಅಧ್ಯಕ್ಷರಾಗಿ ಚುನಾಯಿತರಾದಾಗ ಶ್ರೀಮತಿ ನಾಯ್ಡು ಆಡಿದ ಕಾವ್ಯಮಯ ಮಾತುಗಳು ಇಂತಿವೆ:

> "ಅವರ ವ್ಯಕ್ತಿತ್ವಕ್ಕೆ ಅರ್ಹ ಅಭಿನಂದನೆ ಸಲ್ಲಿಸಲು ಶಬ್ದಗಳು ಸಿಗವು. ಅಷ್ಟು ಅನಿರ್ವಚನೀಯವಾದದ್ದು ಅವರ ವ್ಯಕ್ತಿತ್ವ. ಸರ್ವರ ಹೃದಯ ಗೆದ್ದ ಬಿಚ್ಚುಗತ್ತಿಯ ಶೂರ ಸೈನಿಕನಾಗಿ ನಾನು ಅವರನ್ನು ಕಲ್ಪಿಸಿಕೊಳ್ಳಲಾರೆ. ಬದಲಾಗಿ, ಕೈಯಲ್ಲಿ ಶಾಂತಿ ಸಮತೆಯ ಸಂಕೇತ ಲಿಲ್ಲಿ ಹಿಡಿದ ದೇವದೂತನನ್ನಾಗಿ ಮಾತ್ರ ಪರಿಭಾವಿಸಬಲ್ಲೆ. ಯಾಕೆಂದರೆ, ಜನಮನವನ್ನವರು ಸೂರೆಗೊಂಡದ್ದು ಶಾಂತಿ ಸೈರಣೆಯ ಮೂಲಕ ಅವರ ಶಕ್ತಿ ಸಾಮರ್ಥ್ಯದ

ಒಂದಂಗವಾಗಿದ್ದ ಮಾಧುರ್ಯ, ಅವರ ಅನುಭವದ ಭಾಗವಾಗಿದ್ದ ಅವಧಾನ, ಸ್ಪಟಿಕ ಸ್ಪಷ್ಟ ನಿರ್ಮಲ ದೃಷ್ಟಿ, ಸೃಜನ ಶೀಲ ಪ್ರತಿಭೆ ಮತ್ತು ಸೃಷ್ಟಿ ಶೀಲ ಶ್ರದ್ಧೆ ಈ ಮುಂತಾದ ಗುಣಗಳು ಅವರನ್ನು ಭಗವಾನ್ ಬುದ್ಧನ ಪದತಲದ ಸಾನಿಧ್ಯಕ್ಕೆ ತಂದು ನಿಲ್ಲಿಸಿದ್ದವು. ಅವರು ಇಂದಿನ ಭಾರತದ ಭಾಗ್ಯವಿಧಾತನ ಸಂಕೇತವಾಗಿದ್ದಾರೆ. ಇನ್ನೂ ಪಾರತಂತ್ರ್ಯದ ಬಂಧನದಲ್ಲಿರುವ ನಮ್ಮ ತಾಯ್ನಾಡಿನ ವಿಮೋಚನೆಗೆ ದಾರಿ ರೂಪಿಸುವಲ್ಲಿ ಅವರು ಸಹಾಯ ಮಾಡಬಲ್ಲರೆಂಬ ಭರವಸೆ ನನಗಿದೆ. ಸ್ವಾತಂತ್ರ್ಯ, ಪ್ರೀತಿ ಮತ್ತು ಶಾಂತಿಯ ಕೈದೀವಿಗೆ ಹಿಡಿದು ಮುನ್ನಡೆಯುತ್ತಾ ನಮ್ಮ ನ್ಯಾಯಯುತ ಸ್ಥಾನಕ್ಕೆ ನಾವು ತಲುಪುವಂತೆ ಮಾಡಬಲ್ಲರೆಂಬ ವಿಶ್ವಾಸ ನನಗಿದೆ. ”

## ಡಾ|| ರಾಜೇಂದ್ರ ಪ್ರಸಾದ : ಸಾರ್ಥಕ ಬದುಕಿನ ಶ್ರೇಷ್ಠ ನೇತಾರ

- ಸುಶೀಲಾ ನಾಯರ *

ಮಹಾತ್ಮಾ ಗಾಂಧೀಜಿ ತೋರಿದ ದಾರಿಯಲ್ಲಿ ನಡೆಯುತ್ತಾ ಭಾರತದ ಸ್ವಾತಂತ್ರ್ಯಕ್ಕಾಗಿ ದುಡಿದ ರಾಷ್ಟ್ರೀಯ ನೇತಾರ ನಕ್ಷತ್ರಪುಂಜಗಳಲ್ಲಿ ಡಾ|| ರಾಜೇಂದ್ರ ಪ್ರಸಾದರದ್ದು ಉಜ್ವಲವಾಗಿ ಹೊಳೆವ ವಿಶಿಷ್ಟ ವ್ಯಕ್ತಿತ್ವ ಕೊನೆಯ ಗಳಿಗೆಯವರೆಗೂ ರಾಷ್ಟ್ರಪತಿ ಪ್ರಣೀತ ಆದರ್ಶ ಮೌಲ್ಯಗಳಿಗೆ ನಿಷ್ಠರಾಗಿದ್ದ ಕೆಲವೇ ಕೆಲವು ಜನರಲ್ಲಿ ಅವರೂ ಒಬ್ಬರು. ಕಾಂಗ್ರೆಸ್ ನಾಯಕರಲ್ಲಿ ತಾವು ತುಳಿಯಬೇಕಾದ ದಾರಿಯ ಬಗ್ಗೆ ಗೊಂದಲವುಂಟಾದಾಗಲೆಲ್ಲ ಒಂದು ಪ್ರಭಲ ವಿಭಾಗ ಅಹಿಂಸೆಯ ಇಕ್ಕಟ್ಟಿನ ದಾರಿಯಲ್ಲಿ ನಡೆಯಲಾಗಿದೆ, ಆಗಾಗ ಪಥಭ್ರಷ್ಟರಾಗುತ್ತಿದ್ದುದ್ದುಂಟು. ಮೇಲಾಗಿ, ಸ್ವೇಚ್ಛೆಯ ದಾರಿ ಅವರಿಗೆ ತುಂಬಾ ಸುಲಭವೆನಿಸುತ್ತಿತ್ತು.ಇಂಥ ಅನೇಕ ಸಂದರ್ಭಗಳಲ್ಲಿ ಗಾಂಧೀಜಿ ಅತೀವ ನೊಂದುಕೊಳ್ಳುತ್ತಿದ್ದರು. ಆದರೆ ರಾಜೇಂದ್ರ ಪ್ರಸಾದರು ಮಹಾತ್ಮರ ಮಾರ್ಗದಿಂದ ಒಂದಿಷ್ಟೂ ಅತ್ತಿತ್ತ ಸರಿಯದೆ, ಆ ದಾರಿ ಮಾತ್ರ ನಿರ್ದುಷ್ಟವಾದುದ್ದೆಂದೂ ಸಮುಚಿತವಾದುದ್ದೆಂದೂ ಪ್ರಗಾಢವಾಗಿ ನಂಬಿ ನಡೆದರು.

ಡಾ|| ರಾಜೇಂದ್ರ ಪ್ರಸಾದರು 1884ರ ಡಿಸೆಂಬರ್ 3 ರಂದು ಉತ್ತರ ಬಿಹಾರಿನ ಸಾರಣ ಜಿಲ್ಲೆಯ ಜಿರಾದೇಹಿ ಗ್ರಾಮದಲ್ಲಿ ಜನಿಸಿದರು. ಸಾಕಷ್ಟು ಭೂಮಿ ಕಾಣೆಯಿಂದ ಸಮೃದ್ಧವಾಗಿದ್ದ ಕಾಯಸ್ಥ ಕುಟುಂಬ ಅವರದು. 1896ರಲ್ಲಿ, ಅವರಿಗೆ ಹನ್ನೆರಡು ತುಂಬುತ್ತಿದ್ದಂತೆಯೇ, ರಾಜವಂಶೀ ದೇವಿಯೊಂದಿಗೆ ವಿವಾಹವಾದರು. ಉನ್ನತ ಶಿಕ್ಷಣವನ್ನು ಕಲ್ಕತ್ತೆಯಲ್ಲಿ ಪೂರೈಸಿದ ಪ್ರಸಾದರು 1907 ರಲ್ಲಿ ಎಂ. ಎ ಪಾಸಾದರು. ಆಮೇಲೆ 1910ರಲ್ಲಿ ಕಾನೂನು ಪದವಿಯನ್ನು ಪಡೆದರು. ತಾವೊಬ್ಬ ಯಶಸ್ವಿ ವಕೀಲರಾಗಬೇಕೆಂಬ ಹಂಬಲ ಹೊತ್ತು 1915ರಲ್ಲಿ ಕಾನೂನಿನ ಸ್ನಾತಕ್ಕೋತ್ತರ ಪದವಿಯನ್ನು ಗಳಿಸಿಕೊಂಡರು. ಆದರೂ 1911 ರಿಂದ 1920ರವರೆಗೆ ನಡೆದ ಅವರ ವಕೀಲಿ ವೃತ್ತಿ ನಿರಂತರವಾಗೇನೂ ನಡೆಯಲಿಲ್ಲ. ಮೊದಲಿಗೆ ಕಲ್ಕತ್ತೆಯ ಉಚ್ಚ ನ್ಯಾಯಾಲಯದಲ್ಲಿ, ಆಮೇಲೆ ಪಾಟ್ನಾ ಉಚ್ಚ ನ್ಯಾಯಾಲಯದಲ್ಲಿ ತಮ್ಮ ವೃತ್ತಿ ಕೈಗೊಂಡರು ಏತನ್ಮಧ್ಯೆ ಕಲ್ಕತ್ತೆಯ ಒಂದು ಕಾಯ್ದೆ ಕಾಲೇಜಿನಲ್ಲಿ ಎರಡು ವರ್ಷ ಉಪನ್ಯಾಸಕರಾಗಿಯೂ ಸೇವೆ ಸಲ್ಲಿಸಿದರು.

ವಿಧ್ಯಾರ್ಥಿ ಜೀವನದುದ್ದಕ್ಕೂ ಡಾ|| ರಾಜೇಂದ್ರ ಪ್ರಸಾದರು ಉಜ್ವಲ ಶೈಕ್ಷಣಿಕ ದಾಖಲೆಯನ್ನು ನಿರ್ಮಿಸುತ್ತಲೇ ಬಂದರು. ಇನ್ನು ವಕೀಲರಾಗಿ ತೀರ ಕಡಿಮೆ ಅವಧಿಯಲ್ಲಿಯೇ ಸಾಕಷ್ಟು ಹೆಸರು ಮಾಡಿದರು.

ವಕೀಲರಾಗಿ ತಮ್ಮ ವೃತ್ತಿ ಜೀವನವನ್ನು ಸಂಸ್ಥಾಪಿಸಿಕೊಳ್ಳುವಾಗಲೇ ಅವರು ಸಾರ್ವಜನಿಕ ಕಾರ್ಯಕಲಾಪಗಳಿಗೆ ತಮ್ಮ ಚಟುವಟಿಕೆಯನ್ನು ಚಾಚತೊಡಗಿದ್ದರು. 1912ರಲ್ಲಿ ನಡೆದ ಹಿಂದೀ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. ಅದರ ಮರು ವರ್ಷವೇ ಮೊಹಂಗೀರ್‌ನಲ್ಲಿ ನಡೆದ ಬಿಹಾರ ವಿದ್ಯಾರ್ಥಿ ಸಮ್ಮೇಳನದ ಅಧ್ಯಕ್ಷತೆ ವಹಿಸಿದರು.

---

* ಡಾ|| ಸುಶೀಲಾ ನಾಯರ ಮಾಜಿ ಕೇಂದ್ರ ಸಚಿವೆ, ಖ್ಯಾತ ಗಾಂಧಿವಾದಿ, ಸ್ವಾತಂತ್ರ್ಯ ಹೋರಾಟಗಾರ್ತಿ, ಮತ್ತು ಸಾಮಾಜಿಕ ಕಾರ್ಯಕರ್ತೆ.

ರಾಜೇಂದ್ರ ಪ್ರಸಾದರಿಗೆ ಗಾಂಧೀಜಿಯ ಪರಿಚಯವಾದದ್ದು 1917ರ ಚಂಪಾರಣ ಸತ್ಯಾಗ್ರಹದ ಸಂದರ್ಭದಲ್ಲಿ ನೀಲಿ ಬೆಳೆಗಾರರು ಚಂಪಾರಣದ ಬಡ ಗ್ರಾಮಸ್ಥರನ್ನು ಶೋಷಿಸುತ್ತಿದ್ದರು . ಈ ಶೋಷಣೆ ಬಹುದೀರ್ಘ ಕಾಲದಿಂದ ನಡೆದು ಬರುತ್ತಿತ್ತು. ಚಂಪಾರಣದ ರೈತಾಪಿಗಳು ಕಾಯ್ದೆಯ ಮೊರೆಹೋಗುವದನ್ನೊಳಗೊಂಡು ಮಾಡಿದ ಎಲ್ಲಾ ಪ್ರಯತ್ನಗಳು ನಿಷ್ಫಲವಾಗಿದ್ದವು; ಅವರ ಸಮಸ್ಯೆಗೆ ಪರಿಹಾರ ಮರೀಚಿಕೆಯಾಗಿ ಮುಂದೋಡುತಿತ್ತು. ವಿದೇಶೀ ಸರಕಾರ ಶೋಷಕರ ಪರವಾಗಿತ್ತು. ನ್ಯಾಯಾಲಯಗಳೂ ಬಡರೈತನಿಗೆ ನ್ಯಾಯ ಒದಗಿಸುವಲ್ಲಿ ಸೋತಿದ್ದವು. ರೈತಾಪಿಗಳ ಕೂಲಿ ತೀರಾ ಕನಿಷ್ಟವಾಗಿತ್ತು ಇದಲ್ಲದೆ ನೀಲಿ ಬೆಳೆಗಾರರು ಮತ್ತು ಅವರ ಅಧಿಕಾರಿಗಳು ಅನೇಕ ಕಾನೂನು ಬಾಹಿರ ರೀತಿಯಲ್ಲಿ ರೈತಾಪಿಗಳನ್ನು ಹಿಂಡಿ ಹಿಪ್ಪೆ ಮಾಡುತ್ತಿದ್ದರು.

ರೈತಾಪಿಗಳು ಆಗಾಗ ಬಂಡೆದ್ದು ಅನೇಕ ಸಲ ಜೈಲಿಗೂ ಹೋಗಿದ್ದರು. ನೀಲಿ ಬೆಳೆಗಾರರು ಮತ್ತು ಅವರ ಹಸ್ತಕರ ಶೋಷಣೆ ಇನ್ನೂ ಜೋರಾಗಿ ನಡೆಯುತಿತ್ತು. ರೈತಾಪಿಗಳು ತುಂಬಾ ಬಡವರಾಗಿದ್ದರು. ಅವರಲ್ಲನೇಕರು ಅನ್ನಾನ್ನ ನಿರ್ಗತಿಕರಾಗಿದ್ದರು. ಅವರಿಗಾಗಲೀ, ಅವರ ಮಡದಿ ಮಕ್ಕಳಿಗಾಗಲೀ ಯಾವುದೇ ಶಿಕ್ಷಣ ಅಥವಾ ಆರೋಗ್ಯದ ಸೌಲಭ್ಯಗಳಿರಲಿಲ್ಲ. ಅತ್ಯಂತ ಅಮಾನವೀಯ ಸ್ಥಿತಿಯಲ್ಲಿ ಬೆವರು ಸುರಿಸಿ ದುಡಿಯುತ್ತ, ಅವಮಾನ ಅಸಡ್ಡೆಗೆ ಗುರಿಯಾಗಿದ್ದರು.

1916ರಲ್ಲಿ ಕಾಂಗ್ರೆಸ್ಸಿನ ಲಕ್ನೌ ಅಧಿವೇಶನದಲ್ಲಿ ರಾಜಕುಮಾರ ಶುಕ್ಲಾ ಎಂಬ ವ್ಯಕ್ತಿ -ಸ್ವತಃ ಅವನು ನೀಲಿ ಬೆಳೆಗಾರರ ಶೋಷಣೆಯ ಬಲಿಪಶುವಾಗಿದ್ದ - ಗಾಂಧೀಜಿಯ ಗಮನವನ್ನು ಚಂಪಾರಣದ ಸಮಸ್ಯೆಯತ್ತ ಸೆಳೆಯುವಲ್ಲಿ ಯಶಸ್ವಿಯಾಗಿದ್ದ. ಸಮಸ್ಯೆಯ ವಿವರ ಕೇಳಿದೊಡನೆಯೇ ಅದರಲ್ಲಿ ತುಂಬಾ ಆಸಕ್ತಿ ವಹಿಸಿದ ಗಾಂಧೀಜಿ, 1917ರ ಆರಂಭದಲ್ಲಿಯೇ ಪರಿಸ್ಥಿತಿಯನ್ನು ಖುದ್ದಾಗಿ ಪರಿಶೀಲಿಸಲು ಬಿಹಾರಿಗೆ ಬಂದರು. ರಾಜಕುಮಾರ ಶುಕ್ಲಾ ಗಾಂಧೀಜಿಯನ್ನು ಪಾಟ್ನಾದಲ್ಲಿ ರಾಜೇಂದ್ರ ಪ್ರಸಾದರ ಮನೆಗೆ ಕರೆದುಕೊಂಡು ಹೋದನು. ಮನೆಯ ಮಾಲಿಕರಾಗಿದ್ದ ಬಾಬೂಜಿ ಮನೆಯಲ್ಲಿರಲಿಲ್ಲ. ಅವರ ಸೇವಕರು ಗಾಂಧೀಜಿ ಮತ್ತು ರಾಜಕುಮಾರ ಶುಕ್ಲಾ ತಮ್ಮ ಯಜಮಾನರ ಬಡ ಕಕ್ಷಿದಾರರಿರಬಹುದೆಂದು ಭಾವಿಸಿ, ಅವರಿಗೆ ಒಂದು ಹೊರಮನೆಯಲ್ಲಿ ವಾಸ್ತವ್ಯಕ್ಕೆ ಅನುಕೂಲ ಮಾಡಿ ಕೊಟ್ಟರು. ಅವರು ಶೌಚಾಲಯ ಮತ್ತು ಸ್ನಾನಗೃಹವನ್ನು ಬಳಸಗೊಡಲಿಲ್ಲ. ಆಮೇಲೆ ಗಾಂಧೀಜಿ ಮುಝ್ಹೂರಲ್ ಹಕ್ ಅವರನ್ನು ಸಂಪರ್ಕಿಸಿದರು. ಗಾಂಧೀಜಿಗೆ ಇಂಗ್ಲೇಂಡಿನಲ್ಲಿದ್ದಾಗಲೇ ಪರಿಚಯವಾಗಿದ್ದ ಹಕ್ ಅವರು ಸಧ್ಯ ಪಾಟ್ನಾದಲ್ಲಿ ಪ್ರಮುಖ ವಕೀಲರೂ ಕಾಂಗ್ರೆಸಿನ ಮುಖಂಡರೂ ಆಗಿದ್ದರು. ವಿಷಯ ತಿಳಿದೊಡನೆಯೇ ಮುಝ್ಹೂರಲ್ ಹಕ್ ಅವರು ಗಾಂಧೀಜಿಯನ್ನು ಅವರ ಮನೆಗೆ ಕರೆದೊಯ್ದರು. ಗಾಂಧೀಜಿ ಅದೇ ದಿನ ರಾತ್ರಿ ರಾಜಕುಮಾರ ಶುಕ್ಲಾರೊಂದಿಗೆ ಚಂಪಾರಣಕ್ಕೆ ಪ್ರಯಾಣ ಬೆಳೆಸಿದರು ಮುಝ್ಹಫರ್‌ಪುರನಲ್ಲಿ ಆಚಾರ್ಯ ಕೃಪಲಾನಿಯವರು ಅವರನ್ನು ಸ್ವಾಗತಿಸಿದರು. ಕೃಪಲಾನಿಯವರು ಆಗ ಸ್ಥಳೀಯ ಕಾಲೇಜೊಂದರಲ್ಲಿ ಪ್ರಾಧ್ಯಾಪಕರಾಗಿದ್ದರು. ಪಾಟ್ನಾದ ತಮ್ಮ ಮನೆಯಲ್ಲಿ ತಮ್ಮ ಅನುಪಸ್ಥಿತಿಯಲ್ಲಿ ಗಾಂಧೀಜಿಯವರನ್ನು ನಡೆಸಿಕೊಂಡ ಬಗ್ಗೆ ತಿಳಿದು, ರಾಜೇಂದ್ರ ಪ್ರಸಾದರಿಗೆ ಅತ್ಯಂತ ಮುಜುಗರವಾಯಿತು. ಅವರು ಕೂಡಲೆ ಚಂಪಾರಣಕ್ಕೆ ಹೋಗಿ ಗಾಂಧೀಜಿಯನ್ನು ಕೂಡಿಕೊಂಡು ಅವರ ಶಿಷ್ಯರಲ್ಲೊಬ್ಬರಾದರು.

ನೀಲಿ ಕೃಷಿಕರ ಸ್ಥಿತಿಗಳನ್ನು ಆಮೂಲಾಗ್ರವಾಗಿ ಅರಿಯಲು ನಿರ್ಧರಿಸಿದ್ದ ಗಾಂಧೀಜಿ ಶೋಷಣೆಗೆ ಒಳಗಾದ ಎಲ್ಲರಿಂದಲೂ ಹೇಳಿಕೆಗಳನ್ನು ಸಂಗ್ರಹಿಸಲು, ಅವರ ದೂರುಗಳನ್ನು ದಾಖಲೆ ಮಾಡಿಕೊಳ್ಳಲು ಆರಂಭಿಸಿದರು. ತಲಸ್ಪರ್ಶಿ ತನಿಖೆ ಆರಂಭಿಸುವ ಮುಂಚೆ ಅವರು ಜಿಲ್ಲಾಧಿಕಾರಿಗಳನ್ನು ಮತ್ತು ಪ್ಲಾಂಟರ್ಸ ಅಸೋಶಿಯೆಶನ್ನಿನ ಅಧಿಕಾರಿಗಳನ್ನು ಭೆಟ್ಟಿ ಮಾಡಿದರು. ಅವರು ಗಾಂಧೀಜಿಯ ದಾರಿಯಲ್ಲಿ ಸಾಕಷ್ಟು ಅಡತಡೆ ಉಂಟು ಮಾಡಲು ಪ್ರಯತ್ನಿಸಿದರು. ಜಿಲ್ಲಾ ಮ್ಯಾಜಿಸ್ಟ್ರೇಟರು ಗಾಂಧೀಜಿಗೆ ಗಡಿ ಪಾರು ಮಾಡುವ ಆಜ್ಞೆ ಹೊರಡಿಸಿದರು. ಆದರೆ ಗಾಂಧೀಜಿ ಅದನ್ನು ಪಾಲಿಸದೆ ಧಿಕ್ಕರಿಸಿದರು. ಇದರಿಂದ ರಾಜೆಂದ್ರ ಪ್ರಸಾದ ಮತ್ತು ಇತರ ನ್ಯಾಯವಾದಿಗಳ ಮೇಲೆ ತುಂಬ ಪ್ರಭಾವವಾಯಿತು. ಒಂದು ವೇಳೆ ಗಾಂಧೀಜಿಯನ್ನು ಜೈಲಿಗೆ ಕಳಿಸಿದರೆ ತಾವು ಆ ತನಿಖೆ ಕಾರ್ಯವನ್ನು ಕೈಗೆತ್ತಿಕೊಂಡು ಮುಂದುವರಿಯಲು ನಿರ್ಧರಿಸಿದರು. ಅವಶ್ಯವಿದ್ದರೆ ಗಾಂಧೀಜಿಯನ್ನನ್ನುಸರಿಸಿ ತಾವು ಜೈಲಿಗೆ ಹೋಗಲು ತೀರ್ಮಾನಿಸಿದರು. ಅದರಿಂದ ಗಾಂಧೀಜಿಗೆ ತುಂಬಾ ಸಂತೋಷವಾಯಿತು. ಇಂಥ ಕಟ್ಟಾ ಕಾರ್ಯಕರ್ತರು ದೊರೆತಿರುವುದರಿಂದ ಅಂತಿಮ ಯಶಸ್ಸು ಕಟ್ಟಿಟ್ಟ ಬುತ್ತಿ ಎಂದು ಹೇಳಿದ್ದರು. ಕೊನೆಗೆ ಗಡಿ ಪಾರು ಆಜ್ಞೆಯನ್ನು ಹಿಂತೆಗೆದುಕೊಂಡು ಅಧಿಕಾರಿಗಳು ತನಿಖೆ ಮುಂದುವರಿಯಲು ಅವಕಾಶ ಮಾಡಿಕೊಟ್ಟರು.

ರೈತಾಪಿಗಳ ಹೇಳಿಕೆಗಳನ್ನು ದಾಖಲೆ ಮಾಡಿಕೊಳ್ಳಲು ಲೇಖಕರು, ತನಿಖೆ ಸುಸೂತ್ರವಾಗಿ ನಡೆಸಲು ಕಾನೂನಿನ ಜ್ಞಾನವಿದ್ದ ಕಾರ್ಯಕರ್ತರು, ಗ್ರಾಮಾಂತರ ಜನರ ಅನಿಸಿಕೆಗಳನ್ನು ಭಾಷಾಂತರಿಸಲು ದುಭಾಷಿಗಳು-ಮುಂತಾದವರು ಬೇಕಾಗಿದ್ದರು. ಸಾರ್ವಜನಿಕ ಸೇವಾಭಾವದಿಂದ ಪ್ರೇರಿತರಾದ ಅನೇಕ ವಕೀಲರು ಸ್ವಯಂಸೇವಕರಾಗಿ ಸೇವೆಸಲ್ಲಿಸಲು ಮುಂದೆ ಬಂದರು. ಅವರಲ್ಲಿ ಅತ್ಯಂತ ಪ್ರಮುಖರೆಂದರೆ, ಗೋರಖ ಪ್ರಸಾದ, ಬ್ರಿಜಕಿಶೋರ ಪ್ರಸಾದ್, ರಾಜೇಂದ್ರ ಪ್ರಸಾದ್, ರಾಮನವಮಿ ಪ್ರಸಾದ್, ಮತ್ತು ಧರಣೀಧರ ಪ್ರಸಾದ. 1917ರ ಏಪ್ರಿಲ್ 17 ರಿಂದ ಅವರು ರೈತಾಪಿಗಳ ಹೇಳಿಕೆಗಳ ದಾಖಲೀಕರಣ ಆರಂಭಿಸಿದರು. ಮೊದಲು ಮೋತಿಹರಿಯಲ್ಲಿ ಆರಂಭಿಸಿ ಬೆಟ್ಟಿಯಾವರೆಗೆ ಕಾರ್ಯ ವಿಸ್ತರಿಸಿದರು. ಬೆಳಗಿನ ಜಾವದಿಂದ ರಾತ್ರಿ ಬಹಳ ಹೊತ್ತಿನವರೆಗೆ ಸತತ ದುಡಿಯುತ್ತಾ ಮೂರೇ ಮೂರು ವಾರಗಳಲ್ಲಿ ನಾಲ್ಕು ಸಾವಿರಕ್ಕೆ ಕಡಿಮೆ ಇಲ್ಲದಷ್ಟು ಹೇಳಿಕೆಗಳನ್ನು ಸಂಗ್ರಹಿಸಿದರು. ಅವುಗಳನ್ನಾಧರಿಸಿ, ಗಾಂಧೀಜಿ ಸಂಬಂಧಪಟ್ಟ ಅಧಿಕಾರಿಗಳಿಗೆ ಒಂದು ವಿಸ್ತೃತ ವರದಿಯನ್ನು ಕಳಿಸಿದರು. ತತ್ಪರಿಣಾಮವಾಗಿ ಸರಕಾರ ತನಿಖೆಯನ್ನು ಆರಂಭಿಸಿತು. ಗಾಂಧೀಜಿ ನೀಲಿ ಕೃಷಿಕರ ಪ್ರತಿನಿಧಿಯಾಗಿ ತನಿಖಾ ಸಮಿತಿಯ ಸದಸ್ಯರಾದರು. ಈ ಸಮಿತಿಯ ವರದಿ, ಚಂಪಾರಣದಲ್ಲಿ ಶತಮಾನಗಳಿಂದಲೂ ನಡೆದು ಬರುತ್ತಿದ್ದ ನೀಲಿ ಕೃಷಿಕರ ಶೋಷಣೆಯನ್ನು ಕೊನೆಗೊಳಿಸಲಿತ್ತು. ರಾಜೇಂದ್ರ ಪ್ರಸಾದ ಮತ್ತು ಬ್ರಿಜ್ ಕಿಶೋರ ಪ್ರಸಾದರ ಕುರಿತು ತಮ್ಮ ಆತ್ಮ ಚರಿತ್ರೆಯಲ್ಲಿ ಬರೆಯುತ್ತಾ ಗಾಂಧೀಜಿ ದಾಖಲಿಸಿರುವ ಸಂಗತಿ ಗಮನಾರ್ಹವಾಗಿದೆ:'ಅವರದೊಂದು ಅನುಪಮ ಜೋಡಿಯಾಗಿತ್ತು. ಅವರು ನನ್ನ ಬಗ್ಗೆ ತೋರುತ್ತಿದ್ದ ಭಕ್ತಿ ಗೌರವಾದರಗಳ ಕಾರಣದಿಂದಾಗಿ, ಅವರ ಸಹಾಯವಿಲ್ಲದೆ ನಾನು ಒಂದೇ ಒಂದು ಹೆಜ್ಜೆ ಮುಂದಿಡುವುದು ಅಸಾಧ್ಯವಾಗಿತ್ತು.' ರಾಜೇಂದ್ರ ಪ್ರಸಾದರದು ಸಂಪ್ರದಾಯಿಕ ಹಿಂದೂ ಕುಟುಂಬ. ಅವರು ಬ್ರಾಹ್ಮಣರು ತಯಾರಿಸಿದ ಅಥವಾ ತಮ್ಮ ಜಾತಿಯವರೇ ಸಿದ್ಧ ಪಡಿಸಿದ ಅಡಿಗೆಯನ್ನು ಮಾತ್ರ ಊಟ ಮಾಡುತ್ತಿದ್ದರು. ಕಾಯಕಷ್ಟದ ದುಡಿಮೆ ಅವರಿಗೆ ಗೊತ್ತಿರದ ಸಂಗತಿಯಾಗಿತ್ತು. ಗಾಂಧೀಜಿಗೆ ಸಹಾಯ ಸಲ್ಲಿಸಲು ಬಂದಿದ್ದ

ಎಲ್ಲ ವಕೀಲರೂ ಹೆಚ್ಚಾಗಿ ಇಂಥ ನೆಲೆ ಹಿನ್ನಲೆಯುಳ್ಳವರೇ ಆಗಿದ್ದರು. ಆದ್ದರಿಂದ ತಮ್ಮ ಕೆಲಸ ಕಾರ್ಯಗಳನ್ನು ಮಾಡಲು ತಂತಮ್ಮ ಸೇವಕರನ್ನು ಜೊತೆಗೆ ಕರೆತಂದಿದ್ದರು. ಆದರೆ ಗಾಂಧೀಜಿಯ ಶಿಸ್ತು ಇದಕ್ಕೆ ತದ್ವಿರುದ್ಧವಾಗಿತ್ತು. ಯಾವ ಸೇವಕರ ಸಹಾಯವಿಲ್ಲದೆ ಎಲ್ಲರೂ ತಂತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವುದನ್ನು ಕಲಿಯುವದು ಅನಿವಾರ್ಯವಾಯಿತು. ರಾಜೇಂದ್ರ ಪ್ರಸಾದ ಮತ್ತು ಇತರರು ತಮ್ಮ ಸ್ನಾನಕ್ಕೆ ಬಟ್ಟೆ ಒಗೆಯಲು ಅವಶ್ಯವಿದ್ದ ನೀರನ್ನು ತಾವೇ ಸೇದಿಕೊಂಡು ತರತೊಡಗಿದರು. ತಮ್ಮ ಕೋಣೆಗಳ ಕಸಗುಡಿಸುವುದನ್ನು, ಊಟೋಪಚಾರದ ನಂತರ ತಮ್ಮ ತಟ್ಟೆ, ಪಾತ್ರೆ ಪಡಗಗಳನ್ನು ಸರದಿ ಪ್ರಕಾರ ತಾವೇ ತೊಳೆಯುವದನ್ನು ಕಲಿತು ಕೊಂಡರು. ಅವರೆಲ್ಲ ತಂತಮ್ಮ ಜಾತಿ ಭೇದ ಮರೆತು ಒಂದೇ ಕುಟುಂಬದವರಂತೆ ಸಹ ಪಂಕ್ತಿ ಭೋಜನ ಮಾಡುವುದನ್ನು ಕಲಿತರು. ಅಂದಿನ ಬಿಹಾರಿನಲ್ಲಿ ಇವು ಕ್ರಾಂತಿಕಾರಿ ಬದಲಾವಣೆಗಳೇ ಆಗಿದ್ದವು.

ರಾಜೇನ್ ಬಾಬು ಮತ್ತು ಇನ್ನಿತರ ವಕೀಲರು ತಮ್ಮ ಮುಂದೆ ಸಣ್ಣ ಸಣ್ಣ ಡೆಸ್ಕುಗಳನ್ನು ಇಟ್ಟುಕೊಂಡು ನೆಲದ ಮೇಲೆ ಕುಳಿತು ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ರೈತಾಪಿಗಳ ಹೇಳಿಕೆಗಳನ್ನು ದಾಖಲೆ ಮಾಡಿಕೊಳ್ಳುತ್ತಿದ್ದರು. ಮಧ್ಯಾಹ್ನದ ಊಟದ ಅನಂತರ ಒಂದರಗಳಿಗೆಯ ವಿಶ್ರಾಂತಿ ಬಿಟ್ಟರೆ ದಿನವಿಡೀ ಕೈ ಪುರುಸೊತ್ತಿಲ್ಲದೆ ಕೆಲಸ ಮಾಡುತ್ತಿದ್ದರು. ಸಾಯಂಕಾಲ ಗಾಂಧೀಜಿಯೊಂದಿಗೆ ವಿಹಾರಕ್ಕೆ ಹೋಗುತ್ತಿದ್ದರು. ಅಲ್ಲಿ ಅವರು ಗಾಂಧೀಜಿಯೊಂದಿಗೆ ನಡೆಸುತ್ತಿದ್ದ ಮಾತುಕತೆ, ಚರ್ಚೆ, ಜಿಜ್ಞಾಸೆಗಳೆಲ್ಲವೂ ಅವರಿಗೆ ಸಾಮಾನ್ಯ ಶಿಕ್ಷಣ ಒದಗಿಸುತ್ತಿದ್ದವು.

ಗಾಂಧೀಜಿ ನೀಲಿ ಬೆಳೆಗಾರರ ಶೋಷಣೆಯಿಂದ ಗ್ರಾಮೀಣ ರೈತಾಪಿಗಳನ್ನು ಮುಕ್ತಗೊಳಿಸುವುದರಲ್ಲೇನೋ ಯಶಸ್ವಿಯಾದರು. ಆದರೆ ಅದಷ್ಟರಿಂದಲೇ ಅವರಿಗೆ ತೃಪ್ತಿಯಾಗಲಿಲ್ಲ. ಚಂಪಾರಣದ ಗ್ರಾಮಸ್ಥರ ಬದುಕಿನ ಸ್ಥಿತಿಗತಿಗಳನ್ನು ಸುಧಾರಿಸಬೇಕೆಂಬುದು ಅವರ ಬಯಕೆಯಾಗಿತ್ತು. ತನಿಖೆ ನಡೆದ ಅವಧಿಯಲ್ಲಿ ಕಸ್ತೂರಬಾ ಮತ್ತು ಆಶ್ರಮದ ಇತರ ಮಹಿಳೆಯರು, ಬಡಜನರಿಗಾಗಿ ಕೆಲವು ಔಷಧಗಳನ್ನು ಹಂಚುವ, ಶಾಲೆಗಳನ್ನು ನಡೆಸುವ ಯೋಜನೆಗಳನ್ನು ಹಾಕಿ ಕೊಟ್ಟರು. ಆಶ್ರಮದ ಮಹಿಳೆಯರು ರೋಗ ರುಜಿನಗಳಿಂದ ನರಳುತ್ತಿರುವವರ ಆರೈಕೆ ಮಾಡುವುದರ ಜೊತೆಗೆ ಗ್ರಾಮದ ಎಲ್ಲಾ ಮಕ್ಕಳು ಮತ್ತು ವಯಸ್ಕರಿಗೆ ಓದು ಬರಹ ಕಲಿಸತೊಡಗಿದರು. ಆರೋಗ್ಯದ ಪ್ರಾಥಮಿಕ ನಿಯಮಗಳನ್ನು ಹೇಳಿಕೊಡುವ ಶುಚಿತ್ವದ ಮಹತ್ವವನ್ನು ಮನಗಾಣಿಸಿದರು. ಗಾಂಧೀಜಿಯ ಈ ಕೆಲಸದಲ್ಲಿ ಭಾರತದ ವಿವಿಧ ಭಾಗದ ಜನ ಬಂದು ಕೈಗೂಡಿಸಿದರು. ರಾಜೇಂದ್ರ ಪ್ರಸಾದ ಮತ್ತು ಅವರ ಇತರ ಸಹೋದ್ಯೋಗಿಗಳಿಗೆ ರಚನಾತ್ಮಕ ಕಾರ್ಯಗಳ ದೀಕ್ಷೆ ದೊರೆಯಿತು.

ಅಂದಿನಿಂದ ಮುಂದೆ ರಾಜೇಂದ್ರ ಪ್ರಸಾದರು ಎಂದೂ ಹಿಂತಿರುಗಿ ನೋಡಲಿಲ್ಲ. ಗಾಂಧೀಜಿ ಹಮ್ಮಿಕ್ಕೊಳ್ಳುತ್ತಿದ್ದ ಎಲ್ಲಾ ಚಟುವಟಿಕೆಗಳ ಮುಂಚೂಣಿಯಲ್ಲಿ ಇರುತ್ತಿದ್ದರು. ಪ್ರಸಾದರೇ 1918ರಲ್ಲಿ ಅವರು ಪಾಟ್ನಾದಲ್ಲಿ 'ಸರ್ಚಲೈಟ್ ' ಎಂಬ ಇಂಗ್ಲೀಷ್ ದೈನಿಕ ಆರಂಭಿಸಿದರು. ಆಮೇಲೆ ಎರಡು ವರ್ಷಗಳ ನಂತರ 1920ರಲ್ಲಿ ಹಿಂದೀ ಸಾಪ್ತಾಹಿಕ 'ದೇಶ್' ಆರಂಭಿಸಿದರು. 1920ರಲ್ಲಿ ಗಾಂಧೀಜಿ ಅಸಹಕಾರ ಆಂದೋಲನ ಆರಂಭಿಸಿದಾಗ ರಾಜೇಂದ್ರ ಪ್ರಸಾದರು ಶುರುವಿನಿಂದಲೂ ಅದರಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಪಾಟ್ನಾದಲ್ಲಿ ಮಝರುಹರ್‌ವುಲ್‌ಹಕ್ ಅವರ ಜೊತೆಗೂಡಿ, ಆಂದೋಲನವನ್ನು ಮುಂದುವರಿಸಿಕೊಂಡು ಹೋಗಲು, ಪ್ರಸಾದರು

ಸ್ವರಾಜ್ ಸಭಾವನ್ನು ಸಂಘಟಿಸಿದರು. ನ್ಯಾಶನಲ್ ಕಾಲೇಜನ್ನು ಸಂಸ್ಥಾಪಿಸಿ ಅದರ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿದರು. ಅವರ ಸಕ್ರಿಯ ಮಾರ್ಗದರ್ಶನದಲ್ಲಿ ಅಸಹಕಾರ ಆಂದೋಲನ ಭರದಿಂದ ಬೆಳೆದು ಬಿಹಾರದ ಉದ್ದಗಲಕ್ಕೂ ವ್ಯಾಪಿಸಿತು. ಸ್ವರಾಜ್ ಖಾದಿ ಮತ್ತು ಪಾನ ನಿಷೇಧದ ಸಂದೇಶವನ್ನು ಬಿಹಾರ ಪ್ರಾಂತದ ಮೂಲೆ ಮೂಲೆಯ ಹಳ್ಳಿಗೂ ಮುಟ್ಟಿಸಲಾಯಿತು. ರಾಜೇಂದ್ರ ಪ್ರಸಾದರು 'ಮಹಾತ್ಮಾ ಗಾಂಧೀಜಿಯ ಸನ್ನಿಧಿಯಲ್ಲಿ' ಎಂಬ ಗ್ರಂಥದಲ್ಲಿ ಹೇಳಿದಂತೆ, ಇಡೀ ಪ್ರಾಂತದ ಪ್ರತಿಯೊಂದು ಉಪವಿಭಾಗಕ್ಕೂ ಭೇಟಿ ನೀಡಿದರು.

1922 ರ ಚೌರಿ ಚೌರಾದ ಹಿಂಸಾತ್ಮಕ ಘಟನೆಯ ನಂತರ ಗಾಂಧೀಜಿ ಅಸಹಕಾರ ಆಂದೋಲನವನ್ನು ಹಿಂತೆಗೆದುಕೊಂಡಾಗ ಅನೇಕ ಜನ ಅವರನ್ನು ಕಟುವಾಗಿ ಟೀಕಿಸಿದರು. ಅಖಿಲ ಭಾರತದ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಹಲವಾರು ಕಾಂಗ್ರೆಸಿಗರು ಗಾಂಧೀಜಿಯ ಆ ನಿಲುವನ್ನು ಕುರಿತು ತಮ್ಮ ಉದ್ವಿಗ್ನತೆಯನ್ನು ವ್ಯಕ್ತಪಡಿಸಿದರು. ದೆಹಲಿಯಲ್ಲಿ ನಡೆದ ಆ ಸಭೆಯಲ್ಲಿ ಗಾಂಧೀಜಿಯನ್ನು ತರಾಟೆಗೆ ತೆಗೆದುಕೊಂಡವರೇ ಹೆಚ್ಚಾಗಿದ್ದರು. ಆದರೆ ಗಾಂಧೀಜಿಯ ಆ ಕ್ರಮಕ್ಕೆ ಸಂಪೂರ್ಣ ಸಹಮತಿ ಸೂಚಿಸಿದ ಕೆಲವೇ ಕೆಲವರಲ್ಲಿ ರಾಜೇಂದ್ರ ಪ್ರಸಾದರು ಒಬ್ಬರಾಗಿದ್ದಾರೆ. ಆನಂತರ ಅದೇ ವರ್ಷದ ಮಾರ್ಚ್ ತಿಂಗಳಲ್ಲಿ ಗಾಂಧೀಜಿಯನ್ನು ಬಂಧಿಸಿ ವಿಚಾರಣೆ ನಡೆಸುತ್ತಿದ್ದಾಗ ರಾಜೇಂದ್ರ ಪ್ರಸಾದರು ನ್ಯಾಯಾಲಯಲ್ಲಿ ಹಾಜರಿದ್ದರು. ನ್ಯಾಯಾಧೀಶರು ಗಾಂಧೀಜಿಗೆ ಆರು ವರ್ಷದ ಜೈಲು ಶಿಕ್ಷೆ ಘೋಷಿಸಿದೊಡನೆಯೆ ರಾಜೇಂದ್ರರ ದುಃಖ ಉಮ್ಮಳಿಸಿ ಬಂದು ಕಣ್ಣೀರು ಧಾರೆಯಾಗಿ ಹರಿದವು.

ಗಾಂಧೀಜಿಯ ಗೈರು ಹಾಜರಿಯಲ್ಲಿ ಕಾಂಗ್ರೆಸ್ ಒಡೆದು ಇಬ್ಬಾಗವಾಯಿತು: ಗಾಂಧೀಜಿ ಕೊಟ್ಟಿದ್ದ ಕಾರ್ಯಕ್ರಮದ ಬದಲಾವಣೆಯ ಪರವಾಗಿದ್ದ ಪರಿವರ್ತನವಾದಿಗಳ ಬಣ ಶಾಸನ ಸಭೆಗಳಲ್ಲಿ ಪಾಲ್ಗೊಳ್ಳಲು ಬಯಸಿತು. ಅದಕ್ಕೆ ವಿರುದ್ಧವಾದ ಅಪರಿವರ್ತನವಾದಿಗಳ ಇನ್ನೊಂದು ಬಣಾವು ಅಸಹಕಾರ ಅಂಥೊಲನದ ನಿಲುವಿಗೇ ಅಂಟಿಕೊಂಡು ನ್ಯಾಯಾಲಯ, ಸರಕಾರಿ ಶಾಲೆ ಕಾಲೇಜುಗಳು, ಶಾಸನ ಸಭೆಗಳು- ಮುಂತಾದವನ್ನು ಬಹಿಷ್ಕರಿಸ ಬಯಸಿತು. ಮೊದಲನೇ ಬಣದಲ್ಲಿ ಸಿ. ಆರ್. ದಾಸ್, ಮೋತಿಲಾಲ್ ನೆಹರು, ವಿಠಲ್ ಭಾಯಿ ಪಟೇಲ್, ಮದನ್ ಮೋಹನ್ ಮಾಳವಿಯಾ ಮತ್ತು ಅಲಿ ಸಹೋದರರಂಥ ಘಟಾನುಘಟಿಗಳಿದ್ದರು. ಇನ್ನು ಎರಡನೆಯ ಬಣದಲ್ಲಾದರೂ, ತೀರಾ ಅಪರಿಚಿತ ಯುವ ಕಾಂಗ್ರೆಸ್ಸಿಗರಿದ್ದರು. ಅವರಲ್ಲಿ ಪ್ರಮುಖರೆಂದರೆ, ರಾಜೇಂದ್ರ ಪ್ರಸಾದ, ಶ್ರೀರಾಜಗೋಪಾಲಾಚಾರಿ, ವಲ್ಲಭಭಾಯಿ ಪಟೇಲ್ ಮುಂತಾದವರು. ಅದರೂ ಇವರು ಆ ನುರಿತ ಹಿರಿಯ ದಿಗ್ಗಜಗಳಿಗೆ ಸರಿಮಿಗಿಲಾಗಿ ನಿಂತುಕೊಂಡರು.

1922 ರ ಡಿಸೆಂಬರ್‌ನಲ್ಲಿ ಗಯಾದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಸ್ವಾಗತ ಸಮಿತಿಯ ಕಾರ್ಯದರ್ಶಿಯಾಗಿದ್ದ ರಾಜೇಂದ್ರರ ಹೆಗಲಿಗೆ ಹೆಚ್ಚಿನ ಹೊಣೆಯಿತ್ತು. ಅಧಿವೇಶನದ ಯಶಸ್ವಿಗೆ ಮಾಡಬೇಕಾಗಿದ್ದ ಎಲ್ಲಾ ಪೂರ್ವ ಸಿದ್ಧತೆಗಳ ಹೊರೆ ಪ್ರಸಾದರೇ ಹೊರಬೇಕಾಯಿತು. ಹಣಕಾಸಿನ ಕೊರತೆಯೇ ಸಮಿತಿ ಎದುರಿಸುತ್ತಿದ್ದ ಮುಖ್ಯ ಸಮಸ್ಯೆಯಾಗಿತ್ತು. ರಾಜೇಂದ್ರ ಪ್ರಸಾದರು ಹಗಲಿರುಳೆನ್ನದೆ ಶ್ರಮಿಸುತ್ತ ತಮ್ಮ ಶಕ್ತಿ ಸಾಮರ್ಥ್ಯವನ್ನು ಪಣಕ್ಕಿಟ್ಟು ಕೆಲವೇ ದಿನಗಳಲ್ಲಿ ಸಾವಿರಾರು ರೂಪಾಯಿಗಳನ್ನು ಸಂಗ್ರಹಿಸಿ, ನಿಧಿಯ ಅಭಾವವನ್ನು ನೀಗಿಸುವಲ್ಲಿ ಯಶಸ್ವಿಯಾದರು. ತಾವು

ಗಾಂಧೀಜಿಯಿಂದ ಕಲಿತ ಪಾಠವೇ ಈ ಯಶಸ್ಸಿಗೆ ಕಾರಣವೆಂದು ಹೇಳಿ, ಅದರ ಕೀರ್ತಿಯನ್ನು ಗಾಂಧೀಜಿಗೆ ಸಮರ್ಪಿಸಿದರು. ಇದರಿಂದ ಪ್ರಭಾವಿತರಾದ ಬಿಹಾರಿನ ಅನೇಕ ಜನ ನೇತಾರರು ನಿಧಿ ಸಂಗ್ರಹ ಕಾರ್ಯಕ್ರಮದಲ್ಲಿ ಪಾಲ್ಗೊಂಡೂ ಕೆಲಕಾಲದಲ್ಲಿಯೇ ಸಾಕಷ್ಟು ಹಣ ಕೂಡಿಸುವುದಕ್ಕೆ ಸಹಾಯ ಮಾಡಿದರು. ಅಹಮದಾಬಾದ್ ಅಧಿವೇಶನಕ್ಕೆ ಅಧ್ಯಕ್ಷರಾಗಿ ಚುನಾಯಿತರಾಗಿದ್ದ ಸಿ. ಆರ್. ದಾಸ್ ಆಗ ಜೈಲಿನಲ್ಲಿದ್ದುದರಿಂದ ಅವರು ಅಧ್ಯಕ್ಷಸ್ಥಾನ ವಹಿಸಲು ಸಾಧ್ಯವಾಗಿರಲಿಲ್ಲ ಆದ್ದರಿಂದ ಗಯಾ ಅಧಿವೇಶನದಲ್ಲಿ ಅವರನ್ನು ಮತ್ತೆ ಅಧ್ಯಕ್ಷರನ್ನಾಗಿ ಮಾಡಲಾಯಿತು. ಅವರು ಶಾಸನ ಸಭೆಗಳಲ್ಲಿ ಪಾಲ್ಗೊಳ್ಳುವುದರ ಪರವಾಗಿದ್ದರು. ರಾಜೇಂದ್ರ ಪ್ರಸಾದರು ಬಹುಸಂಖ್ಯಾತರ ಜೊತೆಗೆ ಶಾಸನ ಸಭೆಗಳನ್ನು ಬಹಿಷ್ಕರಿಸುವ ತೀರ್ಮಾನಕ್ಕೆ ಬದ್ಧರಾಗಿದ್ದರು. ಕೊನೆಗೆ ಇವರ ನಿಲುವಿಗೆ ಜಯ ದೊರೆಯಿತು.

ಈ ಅಧಿವೇಶನದಲ್ಲಿ ರಾಜೇಂದ್ರ ಪ್ರಸಾದರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ಚುನಾಯಿತರಾದರು. ಆಮೇಲೆ ಅವರು ರಾಜಾಜಿ ಮತ್ತು ಇತರ ಪ್ರಮುಖ ನಾಯಕರೊಡಗೂಡಿ ಭಾರತದ ಅನೇಕ ಪ್ರಾಂತಗಳಿಗೆ ಭೇಟ್ಟಿ ನೀಡಿದರು. ಮುಂದಿನ ಹಲವಾರು ವರ್ಷಗಳವರೆಗೆ ಖಾದಿ ಮತ್ತು ರಾಷ್ಟ್ರೀಯ ಶಿಕ್ಷಣದ ಕಾರ್ಯವನ್ನು ಎಡೆಬಿಡದೆ ನಡೆಸಿಕೊಂಡು ಬಂದರು.

1924ರಲ್ಲಿ, ಅನಾರೋಗ್ಯದ ಕಾರಣದಿಂದಾಗಿ ಬಿಡುಗಡೆ ಹೊಂದಿದ ಮೇಲೆ ಗಾಂಧೀಜಿ ಕಾಂಗ್ರೆಸ್ಸಿನ ರಾಜಕೀಯ ಕೆಲಸವನ್ನು 'ಪರಿವರ್ತನವಾದಿ'ಗಳಿಗೆ ವಹಿಸಿಕೊಟ್ಟು ತಮ್ಮನ್ನು ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ನಿರ್ಧರಿಸಿದರು. ರಚನಾತ್ಮಕ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗುವ ಉದ್ದೇಶಕ್ಕಾಗಿ ಅವರು ಅಖಿಲ ಭಾರತದ ನೂಲಿಗರ ಸಂಘ, ಅಖಿಲ ಭಾರತದ ಗ್ರಾಮೋದ್ಯೋಗ ಸಂಘ, ಹಿಂದೂಸ್ಥಾನಿ ತಾಲಿಮಿ ಸಂಘ, ಹರಿಜನ ಸೇವಕ ಸಂಘ, ಮುಂತಾದ ಸಂಘ ಸಂಸ್ಥೆಗಳನ್ನು ಸಂಘಟಿಸಿದರು. ರಾಜೇಂದ್ರರು ಈ ಎಲ್ಲ ಚಟುವಟಿಕೆಗಳಲ್ಲಿಯೂ ಮುಂಚೂಣಿಯಲ್ಲಿದ್ದರು. ಅವರ ಈ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಎಷ್ಟರ ಮಟ್ಟಿಗೆ ಮಗ್ನರಾಗಿದ್ದರೆಂದರೆ ಕೌನ್ಸಿಲ್ ಪ್ರವೇಶದ ಕುರಿತು ಆಗ ನಡೆಯುತ್ತಿದ್ದ ವಾದ ವಿವಾದದಲ್ಲಿ ಒಂದಿನಿತೂ ಆಸಕ್ತಿ ತೋರುವ ಮನಸ್ಸು, ಸಮಯ ಅವರಿಗಿರಲಿಲ್ಲ. 1926 ಮತ್ತು 1927ರಲ್ಲಿ ನಡೆದ ಹಿಂದೀ ಸಾಹಿತ್ಯ ಸಮ್ಮೇಳನಗಳ ಗೋಷ್ಠಿಗಳಿಗೆ ಅಧ್ಯಕ್ಷತೆ ವಹಿಸಿದ್ದನ್ನು ಬಿಟ್ಟರೆ 1923 ರಿಂದ 1927 ರವರೆಗೆ ಅವರು ತಮ್ಮ ಸಂಪೂರ್ಣ ಸಮಯವನ್ನು ಗಾಂಧೀಜಿ ರೂಪಿಸಿದ್ದ ರಚನಾತ್ಮಕ ಚಟುವಟಿಕೆಗಳಿಗೇ ಮೀಸಲಿರಿಸಿದ್ದರು.

1930ರ ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ರಾಜೇಂದ್ರ ಪ್ರಸಾದರಿಗೂ ಎಂದಿಲ್ಲದ ಧಾವಂತ, ಎಡಬಿಡದೆ ನಡೆದಾಟ ಸತ್ಯಾಗ್ರಹದಲ್ಲಿ ಪಾಲ್ಗೊಂಡ ಉಪ್ಪು ತಯಾರಿಸಲು ಹೋಗುವ ಅನೇಕ ತಂಡೋಪತಂಡಗಳಿಗೆ ಮಾರ್ಗದರ್ಶನ ಮಾಡುವ, ಸತ್ಯಾಗ್ರಹಿಗಳಲ್ಲಿ ಸ್ಫೂರ್ತಿತುಂಬಿ ಹುರಿದುಂಬಿಸುವ, ಧೈರ್ಯ- ಸ್ಥೈರ್ಯ ಉಕ್ಕಿಸುವ ಮುಂತಾದುವೇ ಕೈ ಪುರಸೊತ್ತಿಲದ ಕೆಲಸ. ಅವರು ಉಪ್ಪಿನ ತಯಾರಿಕೆಯ ಉಸ್ತುವಾರಿಯನ್ನು ನೋಡಿಕೊಳ್ಳುವದಲ್ಲದೆ, ಅದನ್ನು ಸಾರ್ವಜನಿಕ ಸಭೆಗಳಲ್ಲಿ ಹರಾಜು ಹಾಕಿ ಮಾರಾಟ ಮಾಡುವ ಕೆಲಸವನ್ನೂ ನಿರ್ವಹಿಸುತ್ತಿದ್ದರು. ಸತ್ಯಾಗ್ರಹಿಗಳ ಗುಂಪಿನ ಮೇಲೆ ಪೊಲೀಸರು ಹಲ್ಲೆ ನಡೆಸಿ, ಬ್ರಹತ್ ಸಂಖ್ಯೆಯ ಸತ್ಯಾಗ್ರಹಿಗಳನ್ನು ಬಂಧಿಸಿದರು.

ಆದರೆ ಪ್ರತಿಯಾಗಿ ಸತ್ಯಾಗ್ರಹಿಗಳ್ಯಾರ ಹಿಂಸೆಯಲ್ಲಿ ತೊಡಗಿದ ಒಂದೇ ಒಂದು ಘಟನೆಯೂ ಜರುಗಲಿಲ್ಲ. ಸ್ವತಃ ರಾಜೇಂದ್ರ ಪ್ರಸಾದರಿಗೂ ಪೊಲೀಸರಿಂದ ಲಾಠಿ ಏಟುಗಳು ಬಿದ್ದವು.

ಆಂದೋಲನದ ಆರಂಭದ ಘಟ್ಟದಲ್ಲಿ ಅಧಿಕಾರಿಗಳು ರಾಜೇಂದ್ರರನ್ನು ಮುಟ್ಟುವ ಗೋಜಿಗೆ ಹೋಗಲಿಲ್ಲ ಯಾಕೆಂದರೆ, ಅದರಿಂದ ದೊಡ್ಡ ಗೊಂದಲವೇ ಉದ್ಭವಿಸಬಹುದೆಂಬ ಭೀತಿ ಅವರಿಗಿತ್ತು. ಆಮೇಲೆ 1930ರ ಜುಲೈ 6 ರಂದು ಅವರನ್ನು ಬಂಧಿಸಿ ತಮ್ಮ ಸುಪರ್ದಿಗೆ ತೆಗೆದುಕೊಂಡರು. ಆರು ತಿಂಗಳ ಜೈಲು ಶಿಕ್ಷೆ ವಿಧಿಸಿ ಛಾಪ್ರಾ ಜೈಲಿನಿಂದ ಹಜಾರಿಬಾಗ್ ಜೈಲಿಗೆ ಸ್ಥಳಾಂತರಿಸಿದರು. ಪ್ರಸಾದರು ತಮ್ಮ ಶಿಕ್ಷೆಯ ಹೆಚ್ಚಿನ ಭಾಗದ ಕಾಲವನ್ನು ಅಲ್ಲಿಯೇ ಕಳೆದರು.

1934ರ ಜನವರಿ 15 ರಂದು ಉತ್ತರ ಬಿಹಾರಿನಲ್ಲಿ ಭಯಂಕರವಾದೊಂದು ಭೂಕಂಪ ಸಂಭವಿಸಿತು. ಆ ಭೂಕಂಪದ ತೀವ್ರತೆ ಎಷ್ಟಾಗಿತ್ತೆಂದರೆ, ಲಾಹೋರಿನಿಂದ ಶಿಲ್ಲಾಂಗ್‌ವರೆಗೆ ಭೂಮಿ ನಡುಗಿತ್ತು. ದಕ್ಷಿಣದಲ್ಲಿ ತುಂಬಾ ದೂರದಲ್ಲಿದ್ದ ಮುಂಬೈ ಮತ್ತು ವಿಜಯವಾಡಗಳಲ್ಲಿಯೂ ಕಂಪನದ ಅನುಭವವಾಗಿತ್ತು. ಪ್ರಳಯಸದೃಡವಾಗಿದ್ದ ಆ ಭೂಕಂಪ 25 ಸಾವಿರ ಜೀವಗಳನ್ನು ಬಲಿತೆಗೆದುಕೊಂಡಿತು. ಇನ್ನು ಆಸ್ತಿ ಪಾಸ್ತಿಯ ಹಾನಿಯೇ, ಲೆಕ್ಕಕ್ಕೆ ಮೀರಿದ್ದಾಗಿತ್ತು. ಅನೇಕ ನಗರಗಳು ನೆಲಸಮವಾಗಿದ್ದವು. ರಸ್ತೆಗಳು ಸೇತುವೆಗಳು ಧ್ವಂಸವಾಗಿದ್ದವು. ಸುಮಾರು 30,000 ಚದರ ಮೈಲುಗಳಷ್ಟು ವ್ಯಾಪಕವಾಗಿ ಹಬ್ಬಿದ ಆ ವಿನಾಶಕಾರಿ ಘಟನೆ ತುಂಬ ಭಯಂಕರವಾಗಿತ್ತು. ದರ್‌ಬಾಂಗ್, ಮುಝೂಫರ್‌ಪೂರ್, ಚಂಪರಣ, ಪೂರ್ಣಿಯ ಮತ್ತು ಭಾಗಲ್‌ಪೂರ್ ಪ್ರದೇಶಗಳು ಅತ್ಯಂತ ಹೆಚ್ಚಿನ ಹಾನಿಗೆ ಒಳಗಾಗಿದ್ದವು.

ಆ ಕಲ್ಪನಾತೀತ ಅನಾಹುತ ಸಂಭವಿಸಿದಾಗ ರಾಜೇಂದ್ರ ಪ್ರಸಾದರು ಜೈಲಿನಲ್ಲಿದ್ದರು. ಆದರೆ ಕೂಡಲೆ ಅವರನ್ನು ಬಿಡುಗಡೆ ಮಾಡಲಾಯಿತು. ಅವರ ಆರೋಗ್ಯವೇನೋ ಅಷ್ಟು ಚೆನ್ನಾಗಿರಲಿಲ್ಲ. ಆದರೂ ಅವರು ಪರಿಹಾರ ಕಾರ್ಯದ ಹೊಣೆ ಹೊರುವುದಕ್ಕೆ ವಿಳಂಬ ಮಾಡಲಿಲ್ಲ. ಅವರು ಸಂತ್ರಸ್ತರಿಗಾಗಿ ಸಂಘಟಿಸಿದ ಪರಿಹಾರ ಕಾರ್ಯ ತುಂಬ ಸುವ್ಯವಸ್ಥಿತವಾಗಿತ್ತು. ಭಾರತದಾದ್ಯಂತ ಈ ವಿಕೂಪಕ್ಕೆ ಮರುಗಿದ ಜನರು ತಮ್ಮ ಉದಾರವಾದ ಸಹಾಯದ ಹಸ್ತ ಚಾಚಿದರು. 74 ರಷ್ಟು ಪರಿಹಾರ ಸಂಘಟನೆಗಳು ತಮ್ಮ ಕಾಣಿಕೆಯನ್ನು ನೀಡಿದವು. ಗಾಯಗೊಂಡವರಿಗೆ, ಮನೆ ಮಾರು ಕಳೆದುಕೊಂಡವರಿಗೆ ಒಂದಿಷ್ಟು ಪರಿಹಾರ ನೀಡಿ ಸಾಂತ್ವನಗೊಳಿಸಲು ಅನುಕೂಲವಾಯಿತು. ಆದರೆ ಪರಿಹಾರ ಕಾರ್ಯದ ಹೆಚ್ಚಿನ ಭಾರವೆಲ್ಲ ಬಿಹಾರಿನ ಕೇಂದ್ರ ಪರಿಹಾರ ಸಮಿತಿಯ ಮೇಲೇ ಬಿದ್ದಿತ್ತು. ಡಾ॥ ರಾಜೇಂದ್ರ ಪ್ರಸಾದರೇ ಆ ಸಮಿತಿಯ ಅಧ್ಯಕ್ಷರಾಗಿದ್ದರು; ಮಿಗಿಲಾಗಿ, ಅದರ ದಾತೃ ಚೇತನವಾಗಿದ್ದರು. ಆಗ ಗಾಂಧೀಜಿ ಹರಿಜನ ಸಮಸ್ಯೆಯ ಕುರಿತು ಕೆಲಸ ಮಾಡುತ್ತ ದಕ್ಷಿಣ ಭಾರತದಲ್ಲಿ ಪ್ರಯಾಣಿಸುತ್ತಿದ್ದರು. ರಾಜೇಂದ್ರ ಪ್ರಸಾದರು ಅವರ ಮನವೊಲಿಸಿ ಅವರು, ಭಯಂಕರ ವಿಪತ್ತಿಗೆ ಒಳಗಾಗಿದ್ದ ಬಿಹಾರಿನಲ್ಲಿ ಸಂಚರಿಸಬೇಕೆಂದು ವಿನಂತಿಸಿದರು. ಗಾಂಧೀಜಿ ಒಪ್ಪಿದ್ದೇ ತಡ, ಅವರ ಜೊತೆಗೂಡಿ 12 ನೇ ಮಾರ್ಚನಿಂದ 9 ಏಪ್ರಿಲ್‌ವರೆಗೆ ಬಿಹಾರದ ತುಂಬ ತಿರುಗಾಡಿದರು. ಪರಿಹಾರ ಕಾರ್ಯಕ್ಕೆ ಸಂಗ್ರಹಿಸಲಾಗಿದ್ದ ಹಣಕಾಸಿನ ಲೆಕ್ಕ ಪತ್ರವಿಡಲು ಸಹಾಯ ಮಾಡುವುದಕ್ಕೆ ಜೆ.ಸಿ. ಕುಮಾರಪ್ಪನವರ ಸೇವೆ ಬಳಸಿಕೊಳ್ಳಲು ಗಾಂಧೀಜಿ ಅನುಮತಿಸಬೇಕೆಂದು ಕೇಳಿಕೊಂಡರು.

ಪರಿಹಾರ ಸಮಿತಿಗೆ ಒದಗಿ ಬಂದಿದ್ದ ಎಲ್ಲ ಹಣಕಾಸಿನ ಲೆಕ್ಕ ಸರಿಯಾಗಿ ದಾಖಲಿಸಿ ಲೆಕ್ಕ ಪರಿಶೋಧಕರಿಂದ ತಪಾಸಣೆ ಮಾಡಿಸಲಾಯಿತು. ಆಮೇಲೆ ಕೆಲವು ಜನ ರಾಜೇಂದ್ರ ಪ್ರಸಾದರ ಮೇಲೆ ಬಹುದೊಡ್ಡ ಮೊತ್ತದ ಹಣದ ದುರಪಯೋಗದ ಆಪಾದನೆ ಮಾಡಿ, ಮುಖಕ್ಕೆ ಮಸಿ ಒರೆಸುವ ಪ್ರಯತ್ನ ಮಾಡಿದರು. ಆದರೆ ರಾಜೇನ್ ಬಾಬು ಎಲ್ಲ ಆಯವ್ಯಯ್ಯದ ಲೆಕ್ಕ ಸುಸ್ಪಷ್ಟವಾಗಿ ಸೂಚಿಸುವಂತೆ ತಪಾಸಣೆ ಮಾಡಿದ ದಾಖಲೆಗಳ ಎರಡು ಸಂಪುಟಗಳನ್ನು ಸಾದರ ಪಡಿಸಿದ ಮೇಲೆ ಟೀಕಾಕಾರರು ಬಾಯ್ಮುಚ್ಚಿಕೊಳ್ಳಬೇಕಾಯಿತು.

1938ರ ಕಾಂಗ್ರೆಸ್ ಅಧಿವೇಶನದ ನಂತರ ಸಂಘಟನೆಯಲ್ಲಿ ಅಪೂರ್ವ ಬಿಕ್ಕಟ್ಟು ಕಾಣಿಸಿಕೊಂಡಿತು. ಆಗ ಕಾಂಗ್ರೆಸಿನ ಅಧ್ಯಕ್ಷರಾಗಿದ್ದ ಸುಭಾಷ್ ಬೋಸರು ನಾಗರಿಕ ಕಾಯ್ದೆ ಭಂಗ ಚಳುವಳಿಯ ಬಗ್ಗೆ ತೋರಿದ ಅಸಮ್ಮತಿ ಮತ್ತು ಅಸಮಧಾನದ ಕಾರಣಳಿಂದಾಗಿ ಅಧ್ಯಕ್ಷರು ಮತ್ತು ಕಾರ್ಯಸಮಿತಿಯ ನಡುವೆ ಭಿನ್ನಾಭಿಪ್ರಾಯ ತಲೆದೋರಿತು. ಕಾರ್ಯಸಮಿತಿಯ ಅಧ್ಯಕ್ಷರನ್ನು ಅನುಸರಿಸಲು ಸಿದ್ಧವಿರಲಿಲ್ಲ ಅವರಿಬ್ಬರ ಮಧ್ಯೆ ಕಾಣಿಸಿಕೊಂಡ ಬಿರುಕು ಎಷ್ಟು ದೊಡ್ಡದಾಗಿತ್ತೆಂದರೆ, ಅಧ್ಯಕ್ಷರು ಮತ್ತು ಕಾರ್ಯಸಮಿತಿ ಕೂಡಿ ಒಂದೇ ಒಂದು ಹೆಜ್ಜೆ ಮುಂದೆ ಹೋಗುವುದೂ ಸಾಧ್ಯವಿರಲಿಲ್ಲ. ಬಿಕ್ಕಟ್ಟಿನ ತೀವ್ರತೆಯನ್ನು ಗಮನಿಸದ ಗಾಂಧೀಜಿ, ಸುಭಾಸ್ ಬೋಸರು ಇಡೀ ಕಾಯ್ದೆ ಸಮಿತಿಯ ರಾಜೀನಾಮೆಯನ್ನು ಅಂಗೀಕರಿಸಿ ತಮ್ಮ ಆಯ್ಕೆಯ ಹೊಸ ಕಾರ್ಯ ಸಮಿತಿಯನ್ನು ರಚಿಸಿಕೊಳ್ಳಬೇಕೆಂದು ಅಥವಾ ಸ್ವತಃ ಅವರೇ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಬೇಕೆಂದು ಸಲಹೆ ನೀಡಿದರು. 1939ರ ಏಪ್ರಿಲ್ 30 ರಂದು ಬೋಸ್ ರಾಜೀನಾಮೆ ನೀಡಿದ ಮೇಲೆ ರಾಜೇಂದ್ರ ಪ್ರಸಾದರು ಅಧ್ಯಕ್ಷರಾಗಿ ಕಾಂಗ್ರೆಸ್ಸಿನ ಚುಕ್ಕಾಣಿ ಹಿಡಿದರು. ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡಿದ್ದ ಅಂದಿನ ದಿನಗಳಲ್ಲಿ ಆ ಜವಾಬ್ದಾರಿ ತುಂಬಾ ಗಂಭೀರವಾಗಿಯೇ ಇತ್ತು. ಆದರೂ ರಾಜೇಂದ್ರ ಬಾಬು ತಮ್ಮ ಕರ್ತವ್ಯವನ್ನು ತುಂಬ ಸಮರ್ಥವಾಗಿ ನಿರ್ವಹಿಸಿದರು. ಎತ್ತಿಕೊಂಡ ಕಾರ್ಯದ ಬಗ್ಗೆ ಅವರ ಏಕಾಗ್ರಚಿತ್ತತೆಯೇ ಆ ಯಶಸ್ವಿಗೆ ಕಾರಣಿಭೂತವಾಗಿತ್ತು.

ಎರಡನೇ ಮಹಾಯುದ್ಧ ಆರಂಭವಾದಾಗ, ಕಾಂಗ್ರೆಸ್ಸಿನ ಮುಂದೆ ಒಂದು ಸಮಸ್ಯೆ ಎದ್ದುನಿಂತಿತು. ಯುದ್ಧದ ಬಗ್ಗೆ ಕಾಂಗ್ರೆಸ್ ಯಾವ ನಿಲುವು ತಳೆಯಬೇಕು? -ಯುದ್ಧವನ್ನು ಸಮರ್ಥಿಸಬೇಕೊ ಅಥವಾ ಅದನ್ನು ವಿರೋಧಿಸಬೇಕೋ ಎಂಬುವದೇ ಆ ಸಮಸ್ಯೆಯಾಗಿತ್ತು. ಅಪಾರ ಸಾವು ನೋವಿಗೆ ಕಾರಣವಾಗುವ ಯುದ್ಧವನ್ನು ಬೆಂಬಲಿಸಿದರೆ, ಕಾಂಗ್ರೆಸ್ ತನ್ನ ಅಹಿಂಸಾ ತತ್ವಕ್ಕೆ ತಿಲಾಂಜಲಿಯಿತ್ತಂತಾಗುತ್ತಿತ್ತು. ಈ ದೃಷ್ಟಿಯಿಂದ ಅದಕ್ಕೆ ಇದೊಂದು ಉಭಯ ಸಂಕಟವಾಗಿತ್ತು. ಕಾಂಗ್ರೆಸ್ಸಿನಲ್ಲಿಯ ಒಂದು ಪ್ರಭಾವಶಾಲಿ ವಿಭಾಗದ ನಿಲುವು ಬೇರೆಯಾಗಿತ್ತು. ರಾಷ್ಟ್ರೀಯ ಸರಕಾರವನ್ನು ರಚಿಸುವ ತಮ್ಮ ಬೇಡಿಕೆಗೆ ಬ್ರಿಟಿಷ್ ಆಳರಸರು ಸಮ್ಮತಿ ಸೂಚಿಸುವುದಾದರೆ, ಕಾಂಗ್ರೆಸ್‌ಯುದ್ಧವನ್ನು ಬೆಂಬಲಿಸಬೇಕೆನ್ನುವುದು ಅವರ ಅಭಿಪ್ರಾಯವಾಗಿತ್ತು. ಆದರೆ ಗಾಂಧೀಜಿಯ ನಿಲುವು ಇದಕ್ಕೆ ತೀರಾ ವ್ಯತಿರಿಕ್ತವಾಗಿತ್ತು. ಯುದ್ಧವನ್ನು ಬೆಂಬಲಿಸುವದೆಂದರೆ, ಹಿಂಸೆಯನ್ನು ಬೆಂಬಲಿಸಿ ಅದರಲ್ಲಿ ಪಾಲ್ಗೊಳ್ಳುವದೆಂದೇ ಅರ್ಥ ಎಂಬುದು ಗಾಂಧೀಜಿಯ ಅನಿಸಿಕೆ. ಅದರಲ್ಲಿ ತಾವು ಪಾಲ್ಗೊಳ್ಳಲು ಸಿದ್ಧರಿಲ್ಲವೆಂದು ಖಂಡ ತುಂಡವಾಗಿಯೇ ಹೇಳಿದರು. ರಾಜೇಂದ್ರ ಪ್ರಸಾದರು ಗಾಂಧೀಜಿಯ ನಿಲುವಿಗೆ ತಮ್ಮ ಸಂಪೂರ್ಣ ಸಮ್ಮತಿ

ಸೂಚಿಸಿ, ಕಾರ್ಯ ಸಮಿತಿಯ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಕೊಟ್ಟರು. ಆ ವಿಷಯದಲ್ಲಿ ಗಾಂಧೀಜಿಯನ್ನು ಚಾಚೂ ತಪ್ಪದೆ ಅನುಸರಿಸಿದ ಇನ್ನೊಬ್ಬ ಸದಸ್ಯರೆಂದರೆ, ಖಾನ್ ಅಬ್ದುಲ್ ಗಫಾರ್ ಖಾನ್. ಅವರು ಗಾಂಧೀಜಿಯ ನೆಚ್ಚಿನ ಅನುಯಾಯಿಯಾಗಿದ್ದರಲ್ಲದೆ, ಅಷ್ಟೇ ಕಟ್ಟಾ ಅಹಿಂಸಾವಾದಿಗಳೂ ಆಗಿದ್ದರು. ರಾಜೇಂದ್ರ ಪ್ರಸಾದರು ತಮ್ಮ ರಾಜೀನಾಮೆಯನ್ನು ಹಿಂತಿರುಗಿ ಪಡೆಯಬೇಕೆಂದು ಅವರ ಮನವೊಲಿಸಲಾಯಿತು. ಬ್ರಿಟಿಷ್ ಆಳರಸರು ಕಾಂಗ್ರೆಸ್ಸಿನ ರಾಷ್ಟ್ರೀಯ ಸರಕಾರ ರಚನೆಯ ಬೇಡಿಕೆಗೆ ಕೂಡಲೆ ಸಮ್ಮತಿಸುವ ಯಾವ ಸಾಧ್ಯತೆಗಳೂ ಇರದಿದ್ದುದರಿಂದ ಕಾಂಗ್ರೆಸ್ ಯುದ್ಧವನ್ನು ಬೆಂಬಲಿಸುವ ಪ್ರಮೇಯ ಉದ್ಭವಿಸುವದು ಅಸಂಭವವೆಂದು ಹೇಳಿ, ರಾಜೇಂದ್ರ ತಮ್ಮ ರಾಜೀನಾಮೆಯನ್ನು ಹಿಂತೆಗೆದುಕೊಳ್ಳುವಂತೆ ವಿನಂತಿಸಲಾಯಿತು. ಆದರೆ ಗಫಾರ್ ಖಾನ್ ಅವರು ತಮ್ಮ ನಿಲುವನ್ನು ಕಿಂಚಿತ್ತೂ ಸಡಿಲಿಸಲಿಲ್ಲ.

ಬ್ರಿಟಿಷರು ಕಾಂಗ್ರೆಸ್‌ನ ರಾಷ್ಟ್ರೀಯ ಸರ್ಕಾರದ ಬೇಡಿಕೆಯನ್ನು ಸಾರಾಸಗಟಾಗಿ ತಿರಸ್ಕರಿಸಿದ್ದರ ಪರಿಣಾಮವಾಗಿ, ಕಾಂಗ್ರೆಸ್ ಗಾಂಧೀಜಿಯ ಮಾರ್ಗದರ್ಶನದಲ್ಲಿ ವ್ಯಕ್ತಿಗತ ನಾಗರೀಕ ಕಾಯ್ದೆ ಭಂಗ ಚಳುವಳಿಯನ್ನು ಆರಂಭಿಸಿತು. ಆಗ ರಾಜೇಂದ್ರ ಪ್ರಸಾದರು ಅಸ್ವಸ್ಥರಾಗಿದ್ದುದರಿಂದ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳಲಿಲ್ಲ. ಅನಾರೋಗ್ಯದಿಂದ ನರಳುವವನು ಬಂಧನಕ್ಕೊಳಗಾಗುವುದೆಂದರೆ, ತನ್ನ ವೈದ್ಯಕೀಯ ಉಪಚಾರ ಭಾರವನ್ನು ಸರ್ಕಾರದ ಮೇಲೆ ಹಾಕಿದಂತೆಯೇ ಅಥವಾ ಸರ್ಕಾರ ತನ್ನನ್ನು ಬಂಧಿಸಲು ಹಿಂದೆ ಮುಂದೆ ನೋಡುವಂತೆ ಮಾಡಿದಂತೆಯೇ ಸರಿ. ಎರಡೂ ರೀತಿಯಿಂದಲೂ ಅದು ಸಮುಚಿತವಾದುದ್ದಲ್ಲ ಎಂಬುದು ಗಾಂಧೀಜಿಯ ಅಭಿಪ್ರಾಯವಾಗಿತ್ತು.

ಯುದ್ಧ ಮುಂದುವರಿದಂತೆ ಜಪಾನ್ ಭರದಿಂದ ಭಾರತದೆಡೆಗೆ ಹೆಜ್ಜೆ ಹಾಕುತ್ತಿತ್ತು. ಆದಾಗಲೆ ಭಾರತದ ದಕ್ಷಿಣ ಪೂರ್ವದ ರಾಷ್ಟ್ರಗಳೆಲ್ಲ ಅದರ ಕಾಲ್ತುಳಿತಕ್ಕೆ ಸಿಕ್ಕು, ನಜ್ಜು ಗುಜ್ಜಾಗಿದ್ದವು. ಇಂಥ ಸಂದರ್ಭದಲ್ಲಿ ಭಾರತದ ರಕ್ಷಣೆ ಮಹತ್ವದ ಪ್ರಶ್ನೆಯಾಯಿತು. ಆದರೆ ರಕ್ಷಣೆಗೆ ತೆಗೆದುಕೊಳ್ಳಬೇಕಾದ ಯಾವುದೇ ಕ್ರಮವು ಅಹಿಂಸಾತ್ಮಕವಾಗಿರಬೇಕೆಂಬುದು ಗಾಂಧೀಜಿಯ ಅಚಲ ನಿಲುವಾಗಿತ್ತು. ಪರಿಸ್ಥಿತಿಯನ್ನು ಪರಿಶೀಲಿಸಲು 1942ರ ಏಪ್ರಿಲ್‌ನಲ್ಲಿ ಅಖಿಲಭಾರತ ಕಾಂಗ್ರೆಸ್ ಸಮಿತಿ ಅಲಹಾಬಾದಿನಲ್ಲಿ ಸಭೆ ಸೇರಿತು. ಗಾಂಧೀಜಿ ಅದರಲ್ಲಿ ಭಾಗವಹಿಸಲಿಲ್ಲವಾದರೂ, ಒಂದು ಕರಡು ಗೊತ್ತುವಳಿಯನ್ನು ಕಳಿಸಿದ್ದರು. ಜವಾಹರಲಾಲ ನೆಹರೂ, ರಾಜಗೋಪಾಲಾಚಾರಿ, ಸರೋಜಿನಿ ನಾಯ್ಡು, ಮೌಲಾನಾ ಆಜಾದ್ ಮುಂತಾದವರು ಆ ಗೊತ್ತುವಳಿಯನ್ನು ವಿರೋಧಿಸಿದರು. ಪರಿಣಾಮವಾಗಿ, ರಾಜೇಂದ್ರ ಪ್ರಸಾದರು ಎಲ್ಲರಿಗೂ ಸ್ವೀಕರಾರ್ಹವೆನಿಸಬಹುದಾದ ಇನ್ನೊಂದು ಗೊತ್ತುವಳಿಯನ್ನು ಮಂಡಿಸಿದರು. ಆದರೆ ಕೂಡಲೆ ಅದರಿಂದ ಗಾಂಧೀಜಿ ಏನು ತಿಳಿದುಕೊಳ್ಳುವರೋ ಎಂಬ ಸಂದಿಗ್ಧದಿಂದ ಅದನ್ನು ಹಿಂತೆಗೆದುಕೊಂಡರು. ಗಾಂಧೀಜಿ ಮಂಡಿಸಿದ್ದ ಗೊತ್ತುವಳಿಗೆ ಬಹುಪಾಲು ತಿದ್ದುಪಡಿ ತಂದು ಕಾರ್ಯ ಸಮಿತಿ ಅದನ್ನು ಸ್ವೀಕರಿಸಿತು. ಅದಕ್ಕೆ ಗಾಂಧೀಜಿ ಹೆಚ್ಚಿನ ಆಕ್ಷೇಪಣೆಯನ್ನೇನೂ ಎತ್ತಲಿಲ್ಲ. ಎಐಸಿಸಿಯ ಈ ಸಭೆಗೆ ರಾಜೇಂದ್ರ ಬಾಬು ನೀಡಿದ ಕಾಣಿಕೆ ತುಂಬಾ ಮಹತ್ವದ್ದಾಗಿತ್ತು.

ಅನಂತರ ಮುಂಬೈಯಲ್ಲಿ ಸಭೆ ಸೇರಿದ ಎಐಸಿಸಿ 'ಭಾರತ ಬಿಟ್ಟು ತೊಲಗಿ' ಗೊತ್ತುವಳಿಯನ್ನು ಪಾಸು ಮಾಡಿತು. ಕೂಡಲೆ ಸರಕಾರ ಕಾಂಗ್ರೆಸ್ಸಿನ ಮೇಲೆ ತನ್ನ ಪ್ರಹಾರ ಪ್ರಾರಂಭಿಸಿತು. ಆಗ

ರಾಜೇಂದ್ರ ಬಾಬು ಪಾಟ್ನಾದಲ್ಲಿದ್ದರು; ಅನಾರೋಗ್ಯದಿಂದ ಬಳಲುತ್ತಿದ್ದರು. ಅವರು ಮುಂಬೈ ಅಧಿವೇಶನದಲ್ಲಿ ಪಾಲ್ಗೊಂಡಿರಲಿಲ್ಲ. ಆದರೂ ಆಗಸ್ಟ 9 ರಂದು ಅವರನ್ನು ಬಂಧಿಸಲಾಯಿತು. ಆಗಲೆ ಅನಾರೋಗ್ಯದಿಂದ ಬಳಲುತ್ತಿದ್ದ ಅವರ ಸ್ಥಿತಿ ಜೈಲಿನಲ್ಲಿ ಇನ್ನೂ ಹದಗೆಟ್ಟಿತು. ನಿರಂತರವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಸಂಚರಿಸಿ ಬಸವಳಿದಿದ್ದ ದೇಹ ಬಳಲಿ ಬೆಂಡಾಗಿತ್ತು. ಅಸ್ತಮಾ ಮತ್ತು ಆಮಶಂಕೆ ಅವರ ಬೆಂಬಿಡದ ರುಜಿನಗಳಾಗಿದ್ದವು. ವಾರ್ದಾದ ಒಣ ಹವೆ ಅವರ ಆರೋಗ್ಯಕ್ಕೆ ವಗ್ಗುತ್ತಿತ್ತು. ಆದ್ದರಿಂದ ಅವರು ಆಗಾಗ ಗಾಂಧೀಜಿಯನ್ನು ಭೆಟ್ಟಿಯಾಗಲು ಬಂದು ತಮ್ಮ ಆರೋಗ್ಯವನ್ನು ಸುಧಾರಿಸಿಕೊಳ್ಳುತ್ತಿದ್ದರು.

'ಭಾರತ ಬಿಟ್ಟು ತೊಲಗಿ' ಆಂಧೋಲನಕ್ಕೆ ಬಿಹಾರದಲ್ಲಿ ಅಪಾರ ಪ್ರೋತ್ಸಾಹ ದೊರೆಯಿತು. ಆ ಚಳುವಳಿ ಸಂಪೂರ್ಣವಾಗಿ ಅಹಿಂಸಾತ್ಮಕವಾಗಿರದಿದ್ದು. ರಾಜೇಂದ್ರ ಬಾಬೂಜಿಗೆ ಒಂದಿಷ್ಟು ನೋವುಂಟು ಮಾಡಿತ್ತಾದರೂ ಆ ಆಂದೋಲನಕ್ಕೆ ದೊರೆತ ಪ್ರತಿಕ್ರಿಯೆ ತುಂಬ ಆಶಾದಾಯಕವಾಗಿತ್ತು. ರೈಲು ರಸ್ತೆಗಳನ್ನು ಹಾಳುಗೆಡವಲಾಯಿತು. ಟೆಲಿಫೋನ್ ಮತ್ತು ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಲಾಯಿತು; ಅನೇಕ ಪೊಲೀಸ್ ಸ್ಟೇಷನ್‌ಗಳನ್ನು ತಮ್ಮ ಸ್ವಾಧೀನಕ್ಕೆ ತೆಗೆದು ಕೊಳ್ಳಲಾಯಿತು. ಧೀರ್ಘ ಕಾಲದವರೆಗೆ ರೈಲು ಸಂಚಾರ ಅಸ್ತವ್ಯಸ್ತಗೊಂಡಿತು. ರಾಜೇಂದ್ರ ಬಾಬು ವರದಿಸಿದಂತೆ, ಕೆಲವು ಸ್ಥಳಗಲ್ಲಿ ವಾರ ವಾರ ಗಟ್ಟಲೆ ಸರಕಾರದ ಅಧಿಕಾರ ಸ್ಥಗಿತಗೊಂಡಿತ್ತು. ಮುಖಂಡರೆಲ್ಲ ಆಗಲೇ ಜೈಲು ಸೇರಿದ್ದರು. ಜೀವ ಹಾನಿಯಾಗಧಿದ್ದರೆ ಸಾಕು ಅವರ ಚಟುವಟಿಕೆಗಳೆಲ್ಲ ಅಹಿಂಸಾತ್ಮಾಕವೆಂದು ಪರಿಗಣಿಸಬಹುದೆಂಬುದು ಜನತೆಯ ಅನಿಸಿಕೆಯಾಗಿತ್ತು. ಆದರೆ ಅವರ ಆ ಅನಿಸಿಕೆ ತಪ್ಪಾಗಿತ್ತೆಂದು ಗಾಂಧೀಜಿ ಆಮೇಲೆ ವಿವರಿಸಿದ್ದರು.

1945 ಜೂನ್ 15 ರಂದು ರಾಜೇಂದ್ರ ಪ್ರಸಾದ ಮತ್ತು ಇತರ ಕಾಂಗ್ರೆಸ್ ಕಾರ್ಯ ಸಮಿತಿ ಸದಸ್ಯರ ಬಿಡುಗಡೆಯಾಯಿತು. ಅವರು 1945ರ ಜೂನ್ ಇಪ್ಪತ್ತೈದರಿಂದ ಜುಲೈ ಹದಿನಾಲ್ಕರವರೆಗೆ ವೈಸರಾಯ್ ಸಿಮ್ಲಾದಲ್ಲಿ ನಡೆಸಿದ ಸಮ್ಮೇಳನದಲ್ಲಿ ಕಾಂಗ್ರೆಸ್ ಪರವಾಗಿ ಭಾಗವಹಿಸಿದರು.

1946ರ ಸೆಪ್ಟಬಂರ್ 2 ರಂದು ಜವಾಹರಲಾಲ್ ಅವರ ನೇತೃತ್ವದಲ್ಲಿ ಪ್ರಪ್ರಥಮ ರಾಷ್ಟ್ರೀಯ ಸರಕಾರ ಮಧ್ಯಂತರ ಸರ್ಕಾರ ರಚನೆಯಾದಾಗ ಡಾ।। ರಾಜೇಂದ್ರ ಪ್ರಸಾದರು ಆಹಾರ ಮತ್ತು ಕೃಷಿ ಸಚಿವರಾದರು. ಮುಂದೆ ಕೆಲವೇ ದಿನಗಳ ನಂತರ 1946ರ ಡಿಸೆಂಬರ್ 11 ರಂದು ಇದಕ್ಕಿಂತಲೂ ಉನ್ನತ ಹುದ್ದೆಗೇರಿ, ಸಂವಿಧಾನ ಸಭೆಯ ಅಧ್ಯಕ್ಷರಾಗಿ ಆಯ್ಕೆಯಾದರು. ಆ ಮಹತ್ವದ ಸಭೆಯ ಕಾರ್ಯ ಕಲಾಪಗಳನ್ನು ಅವರು ನಿರ್ವಹಿಸುತ್ತಿದ್ದ ರೀತಿ ಅಪಾರ ಮೆಚ್ಚುಗೆ ಗಳಿಸಿತು. ಮೂರು ವರ್ಷಗಳ ವರೆಗೆ ಅಂದರೆ 1949ರ ವರೆಗೆ ಸಂವಿಧಾನ ಸಭೆಯ ಅಧ್ಯಕ್ಷರಾಗಿ ಮುಂದುವರೆದರು. ಈ ಮಧ್ಯ 1947ರ ನವಂಬರ್ 17 ರಂದು ಆಚಾರ್ಯ ಕೃಪಲಾನಿಯವರು ಕಾಂಗ್ರೆಸ್ಸಿನ ಅಧ್ಯಕ್ಷಸ್ಥಾನ ತ್ಯಜಿಸಿದ್ದರಿಂದ ಅದರ ಜವಾಬ್ದಾರಿಯೂ ರಾಜೇಂದ್ರ ಹೆಗಲಿಗೇ ಬಂದಿತ್ತು.

ಡಾ।। ರಾಜೇಂದ್ರ ಪ್ರಸಾದರು ಸ್ವತಂತ್ರ ಭಾರತದ ಪ್ರಥಮ ಅಧ್ಯಕ್ಷರಾಗಿದ್ದುದಷ್ಟೇ ಅಲ್ಲ, ದೀರ್ಘ ಕಾಲದವರೆಗೆ ಅದರ ಅಧ್ಯಕ್ಷರೂ ಆಗಿದ್ದವರು ಅವರು. 1950ರ ಜನವರಿ 26 ರಂದು ಆ ಹುದ್ದೆಯನ್ನುಲಂಕರಿಸಿದ ಅವರು 1952ರ ಮೇ 13 ರವರೆಗೆ ಮಧ್ಯಂತರ ಅಧ್ಯಕ್ಷರಾಗಿ ಸೇವೆ

ಸಲ್ಲಿಸಿದರು. ಆಮೇಲೆ ವಿಧ್ಯುಕ್ತವಾಗಿ ಚುನಾಯಿತರಾದ ಅವರು 1957ರಲ್ಲಿ ಮರು ಚುನಾವಣೆಗೊಂಡು 1962 ಮೇ 12 ರವರೆಗೆ ಸೇವೆ ಸಲ್ಲಿಸಿದರು. ಆ ಮೇಲೆಯೂ ಅವರು ಅಧಿಕಾರದಲ್ಲಿ ಮುಂದುವರಿಯಬೇಕೆಂದು ಅನೇಕ ಜನರ ಬಯಕೆಯಾಗಿತ್ತು. ಆದರೆ ಮುಂದುವರಿಯುವ ಅಭಿಲಾಷೆ ಅವರಿಗಿರಲಿಲ್ಲ. ಮೇಲಾಗಿ ಅವರ ಆರೋಗ್ಯವೂ ತುಂಬವ ಕ್ಷೀಣಿಸಿತು. ಅವರು ನಿವೃತ್ತರಾಗಿ ಪಾಟ್ನಾದಲ್ಲಿಯ ತಮ್ಮ ಸದಾಕತ್ ಆಶ್ರಮಕ್ಕೆ ತೆರಳಿದರು.

ಅವರು ಭಾರತದ ರಾಷ್ಟ್ರಪತಿಗಳಾಗಿ ಸೇವೆ ಸಲ್ಲಿಸಿದ ದೀರ್ಘ ಅವಧಿಯಲ್ಲಿ ಪ್ರಪಂಚದಾದ್ಯಂತ ಭಾರತದ ಘನತೆ ಗೌರವಗಳು ವೃದ್ಧಿಯಾಗಿದ್ದವು. ಅವರು ಭಾರತದ ರಾಷ್ಟ್ರಪತಿ ಹುದ್ದೆಗೆ ಉತ್ತುಂಗ ಸ್ಥಾನಮಾನ ದೊರಕಿಸಿಕೊಟ್ಟರು. ರಾಜೇಂದ್ರ ಪ್ರಸಾದರು ಪ್ರಕಾಂಡ ಪಂಡಿತರಾಗಿದ್ದರು. ಅನೇಕ ವಿಶ್ವ ವಿದ್ಯಾಲಯಗಳು ಅವರಿಗೆ ಗೌರವ ಡಾಕ್ಟರೇಟ್ ನೀಡಿ ತಮ್ಮನ್ನು ತಾವು ಗೌರವಿಸಿಕೊಂಡವು. ಪಾಟ್ನಾ ವಿಶ್ವವಿದ್ಯಾಲಯ ಅವರಿಗೆ 'ಡಿ. ಲಿಟ್' ಪದವಿ ನೀಡಿದರೆ, ಸಾಗರ ವಿಶ್ವ ವಿದ್ಯಾಲಯ ಅವರಿಗೆ 'ಡಾಕ್ಟರ್ ಆಫ್ ಲಾ' ಪದವಿ ನೀಡಿ ಗೌರವಿಸಿತು. ಮೈಸೂರು ಮತ್ತು ಉಸ್ಮಾನಿಯ ವಿಶ್ವ ವಿದ್ಯಾಲಯಗಳೂ ಈ ವಿಷಯದಲ್ಲಿ ಹಿಂದೆ ಬೀಳಲಿಲ್ಲ. ಬನಾರಸ ವಿಶ್ವ ವಿದ್ಯಾಲಯ ಅವರಿಗೆ 'ವಿದ್ಯಾ ವಾಚಸ್ಪತಿ' ಪದವಿ ನೀಡಿ ಸನ್ಮಾನಿಸಿತು.

ವಿನಯ, ತ್ಯಾಗ ಮತ್ತು ರಾಷ್ಟ್ರದ ಮಹತ್ತರ ಕಾರಣಕ್ಕೆ ಸಂಪೂರ್ಣ ಸಮರ್ಪಣ ಭಾವದ ನಿಲುವು ಇವು ರಾಜೇಂದ್ರ ಪ್ರಸಾದರ ವ್ಯಕ್ತಿತ್ವದ ಎದ್ದು ಕಾಣುವ ಗುಣಗಳಾಗಿದ್ದವು. ಅವರೊಬ್ಬ ಧರ್ಮಭೀರುವಾಗಿದ್ದರು. ಗಾಂಧೀಜಿಯ ಮಾತೆಂದರೆ ಅವರಿಗೆ ವೇದವಾಕ್ಯ. ಅಂತೆಯೇ ಅವರು ತಮ್ಮ ಬದುಕಿನುದ್ದಕ್ಕೂ ಗಾಂಧೀಜಿಯ ಆದರ್ಶಗಳನ್ನು ಚಾಚೂ ತಪ್ಪದೆ ಪಾಲಿಸಿದರು. ನನ್ನ ಸಹೋದರ ಪ್ಯಾರೆಲಾಲ್‌ಜಿ ಮತ್ತು ನಾನು ರಾಜೇಂದ್ರ ಪ್ರಸಾದರು ತಮ್ಮ ಕುಟುಂಬದವರ ಜೊತೆಗೂಡಿ ಸಾಯಂಕಾಲ ಮೊಗಲ್ ಗಾರ್ಡನ್ನಿನಲ್ಲಿ ಮಾಡುತ್ತಿದ್ದ ಪ್ರಾರ್ಥನೆಯಲ್ಲಿ ಪಾಲ್ಗೊಳ್ಳುವ ಗೌರವಕ್ಕೆ ಪಾತ್ರರಾಗಿದ್ದೆವು. ಅನಂತರ ಅವರೊಂದಿಗೆ ಊಟ ಮಾಡುವ ಅವಕಾಶವೂ ನಮಗೆ ದೊರೆತಿತ್ತು. ಡಾ॥ ಪ್ರಸಾದರು ತಮ್ಮ ಮೊಮ್ಮಕ್ಕಳೊಂದಿಗೆ ಆಡುವುದನ್ನು ನೋಡುವುದೇ ಒಂದು ಸೊಗಸು. ತಮ್ಮ ಸೇವೆಯಲ್ಲಿ ತೊಡಗಿರುವ ಅತ್ಯಂತ ಸಣ್ಣ ವ್ಯಕ್ತಿಯ ಬಗ್ಗೆಯೂ ಅವರು ತೋರುತ್ತಿದ್ದ ಕಾಳಜಿ ಅನಿರ್ವಚನೀಯ !

ನಿವೃತ್ತಿಯ ನಂತರ ರಾಜೇಂದ್ರ ಪ್ರಸಾದರು ಪಾಟ್ನಾದಲ್ಲಿ ಗಾಂಧೀಜಿಯ ಮಾರ್ಗ ಅನುಸರಿಸುತ್ತ ಅವರ ಅನೇಕ ವಿಚಾರಗಳನ್ನು ಜಾರಿಗೊಳಿಸಲು ಮುತುವರ್ಜಿ ವಹಿಸಿದ್ದರು. ತಮ್ಮಲ್ಲಿಗೆ ಬರುತ್ತಿದ್ದ ಪಂಡಿತರು, ಗಣ್ಯರನ್ನು ತುಂಬ ಅನುನಯದಿಂದ ಬರಮಾಡಿಕೊಳ್ಳುತ್ತಿದ್ದರು. ನ್ಯೂಕ್ಲಿಯರ್ ವಿರೋಧಿ ಆಂದೋಲನ ಅವರ ವಿಶೇಷ ಆಸಕ್ತಿಯ ವಿಷಯವಾಗಿತ್ತು. 1963ರಲ್ಲಿ ಅವರು ತೀರಿಕೊಂಡರು. ಗಂಗಾನದಿಯ ದಡದ ಮೇಲೆ ಸಾಂಪ್ರದಾಯಿಕ ಹಿಂದೂ ರೀತಿಯಲ್ಲಿ ಅವರ ಶವ ಸಂಸ್ಕಾರ ಮಾಡಲಾಯಿತು. ರಾಜೇನ್ ಬಾಬು ಅವರ ನಿರ್ಗಮನದೊಂದಿಗೆ ನಮ್ಮ ಸ್ವಾತಂತ್ರ್ಯ ಹೋರಾಟದ ಅತ್ಯಂತ ಉಜ್ವಲವಾದ ಅಧ್ಯಾಯವೊಂದು ಕೊನೆಗೊಂಡಿತು; ಸ್ವಾತಂತ್ರ್ಯೋತ್ತರ ಭಾರತದ ಸುವರ್ಣ ಕಾಲ ಮುಕ್ತಾಯವಾಯಿತು.

## ಭಾರತ ರತ್ನ: ಡಾ|| ರಾಜೇಂದ್ರ ಪ್ರಸಾದ

-ರಾಮಲಾಲ್ ರಾಹಿ *

ಭಾರತದ ಪ್ರಥಮ ರಾಷ್ಟ್ರಪತಿಯಾಗಿದ್ದ ಭಾರತರತ್ನ ಡಾ|| ರಾಜೇಂದ್ರ ಪ್ರಸಾದರಿಗೆ ವೈಯಕ್ತಿಕವಾಗಿ ಭೆಟ್ಟಿಯಾಗುವ ಅವಕಾಶ ನನಗೆ ದೊರೆತಿರಲಿಲ್ಲವಾದರೂ ಹಿರಿಯರಿಂದ ಅವರ ಬಗ್ಗೆ ಕೇಳಿದಾಗಲೆಲ್ಲಾ ಗೌರವದಿಂದ ನಾವು ಅವರಿಗೆ ತಲೆ ಬಾಗಿಸುತ್ತೇವೆ. ಅವರ ಬದುಕಿನ ವಿಧಾನ, ಅವರು ತೋರಿದ ದಾರಿ ನಮ್ಮಲ್ಲಿ ಅವರ ಬಗ್ಗೆ ಭಕ್ತಿ ಭಾವವನ್ನು ಉಕ್ಕಿಸುತ್ತವೆ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಒಂದೆಡೆ ಅಪಾರ ಸಂಖ್ಯೆಯ ಜನ ಮಹಾತ್ಮಾ ಗಾಂಧೀಜಿಯವರಿಂದ ಸ್ಫೂರ್ತಿಗೊಂಡು ರಾಷ್ಟ್ರದ ಮಹಾನ್ ಕಾರ್ಯಕ್ಕಾಗಿ ತಮ್ಮ ಸರ್ವಸ್ವವನ್ನೂ ಸಮರ್ಪಿಸಲು ಸಿದ್ಧರಾಗಿದ್ದರೆ, ಇನ್ನೊಂದೆಡೆ, ಗಾಂಧೀಜಿ ದೇಶದ ವಿವಿಧ ಭಾಗಗಳಲ್ಲಿ ತಮ್ಮ ಮಟ್ಟದ ಅನೇಕ ಮುಖಂಡರನ್ನು ಸೃಷ್ಟಿಸುವಲ್ಲಿ ನಿರತರಾಗಿದ್ದರು. ಬಿಹಾರಿನ ಇಂತಹ ಮುಖಂಡರಲ್ಲಿ ಒಬ್ಬರು ಡಾ|| ರಾಜೇಂದ್ರ ಪ್ರಸಾದರು. ಅವರನ್ನು ಅನೇಕ ಸಲ "ಪೂರ್ವ ಭಾರತದ ಗಾಂಧೀ" ಎಂದೇ ಸಂಬೋಧಿಸಲಾಗುತ್ತಿತ್ತು. ಭಾರತೀಯ ಸಂಸ್ಕೃತಿಯ ಸಾಕಾರವಾಗಿದ್ದ ಡಾ|| ರಾಜೇಂದ್ರ ಪ್ರಸಾದರು ಇಡೀ ಮಾನವ ಕೋಟಿಯ ಕಲ್ಯಾಣಕ್ಕೆ ತಮ್ಮನ್ನು ತಾವು ಅರ್ಪಿಸಿ ಕೊಂಡಿದ್ದರು. ಅವರ ನೇತೃತ್ವದಲ್ಲಿ ಬಿಹಾರವನ್ನೊಳಗೊಂಡು ಇಡೀ ಪೂರ್ವ ಭಾರತದ ಜನತೆ ಸ್ವಾತಂತ್ರ್ಯ ಹೋರಾಟದಲ್ಲಿ ಸಾಕ್ರಿಯವಾಗಿ ಪಾಲ್ಗೊಂಡರು. ಅಲ್ಲಿನ ಪ್ರತಿಯೊಂದು ಚಳುವಳಿಯ ಹಿಂದೆಯೂ ಡಾ|| ರಾಜೇಂದ್ರ ಪ್ರಸಾದರು ಸ್ಫೂರ್ತಿಯ ಸೆಲೆಯಾಗಿ ನಿಂತಿರುತ್ತಿದ್ದರು.

ಡಾ|| ರಾಜೇಂದ್ರ ಪ್ರಸಾದರು ನಮ್ಮ ಸ್ವಾತಂತ್ರ್ಯ ಆಂದೋಲನದ ಗಣ್ಯ ನಾಯಕರಲ್ಲಿ ಒಬ್ಬರಾಗಿದ್ದರು. ನಮ್ಮ ರಾಷ್ಟ್ರೀಯ ಅಂದೋಲನಕ್ಕೆ ಸಂಬಂಧಪಟ್ಟ ಯಾವೊಂದು ವಿಷಯದ ಬಗ್ಗೆಯೂ ಬಾಪೂಜಿ ಮತ್ತು ಪಂಡಿತ ಜವಾಹರಲಾಲ್ ಕೂಡ ರಾಜೇಂದ್ರ ಬಾಬುರವರ ಅನುಮೋದನೆ ಇಲ್ಲದೆ ತೀರ್ಮಾನ ತೆಗೆದುಕೊಳ್ಳುತ್ತಿರಲಿಲ್ಲ ಎಂಬ ಸಂಗತಿ ಅವರ ವ್ಯಕ್ತಿತ್ವ ಮತ್ತು ಮುಖಂಡತ್ವದ ಮಹತಿಯನ್ನು ಎತ್ತಿ ತೋರಿಸುತ್ತದೆ. "ನನ್ನ ಬಗ್ಗೆ ರಾಜೇಂದ್ರ ಬಾಬು ಅವರಿಗೆ ಇರುವ ಅಕ್ಕರೆ ನನ್ನನ್ನೂ ಅವರ ಮೇಲೆ ಎಷ್ಟು ಅವಲಂಬಿತನನ್ನಾಗಿ ಮಾಡಿತ್ತೆಂದರೆ, ಅವರಿಲ್ಲದೆ ನಾನು ಒಂದೇ ಒಂದು ಹೆಜ್ಜೆಯೂ ಮುನ್ನಡೆಯಲಾರೆ" ಎಂದು ಒಮ್ಮೆ ಸ್ವತಃ ಬಾಪೂಜಿಯೇ ನುಡಿದಿದ್ದರು.

ಡಾ|| ರಾಜೇಂದ್ರ ಪ್ರಸಾದರು ಹುಟ್ಟಿದ್ದು 3 ಡಿಸೆಂಬರ್, 1984 ರಂದು. ಅವರದು ಬಿಹಾರಿನ ಸಾರಣ ಜಿಲ್ಲೆಯ ಜಿರಾದೇಹಿ ಗ್ರಾಮದ ಒಂದು ಕಾಯಸ್ಥ ಕುಟುಂಬ. ಅವರು ಚಿಕ್ಕವರಾಗಿದ್ದಾಗಲೇ ಅವರ ತಂದೆ ತೀರಿಕೊಂಡರು. ಆದರೆ ಅವರ ದೊಡ್ಡಪ್ಪ ಅವರಿಗೆ ತೋರುತ್ತಿದ್ದ ಅಪಾರ ಅಕ್ಕರೆಯಿಂದಾಗಿ, ಅವರಿಗೆ ತಮ್ಮ ತಂದೆಯನ್ನು ಕಳೆದುಕೊಂಡ ತಬ್ಬಲಿತನದ ಭಾವ ಎಂದೂ ಬರುತ್ತಿರಲಿಲ್ಲ.

ರಾಜೇಂದ್ರ ಬಾಬು ಅಪ್ರತಿಮ ಪ್ರತಿಭಾವಂತರಾಗಿದ್ದರು; ಅವರ ಸಾಮರ್ಥ್ಯಕ್ಕೆ ಸಾಟಿ ಇರಲಿಲ್ಲ. ಸಾಂಪ್ರದಾಯಿಕ ರೂಢಿಗನುಗುಣವಾಗಿ ಹನ್ನೆರಡು ತುಂಬುವದರೊಳಗೆ ಅವರ ಮದುವೆಯಾಯಿತು.

---

* ಶ್ರೀ ರಾಹಿಯವರು ಸಂಸತ್ ಸದಸ್ಯರಾಗಿದ್ದಾರೆ (ಲೋಕಸಭೆ).

ಅವರು ಇಂಗ್ಲೀಷ್, ಇತಿಹಾಸ ಮತ್ತು ಅರ್ಥಶಾಸ್ತ್ರ ಮೂರು ವಿಷಯಗಳನ್ನು ಆಯ್ದು ಬಿ. ಎ. (ಆನರ್ಸ್) ಪದವಿ ಪಡೆದರು. ಆ ಮೇಲೆ ಕಲ್ಕತ್ತಾ ವಿಶ್ವವಿದ್ಯಾನಿಲಯದಿಂದ ಎಂ. ಎ ಪಾಸಾದರು. ಕಾಯ್ದೆಯಲ್ಲಿ ಸ್ನಾತಕ ಮತ್ತು ಸ್ನಾತಕ್ಕೋತ್ತರ ಪರೀಕ್ಷೆಗಳನ್ನು ಯಶಸ್ವಿಯಾಗಿ ಪಾಸು ಮಾಡಿದ ಮೇಲೆ ಡಾಕ್ಟರ್ ಆಫ್ ಲಾ ಪದವಿಗಾಗಿ ಸಿದ್ದತೆ ನಡೆಸಿದರು. 1916ರಲ್ಲಿ ಬಿಹಾರ ಉಚ್ಚ ನ್ಯಾಯಾಲಯ ಆರಂಭವಾದ ಮೇಲೆ ಅಲ್ಲಿ ಅವರು ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿದರು. ಕೆಲವೇ ದಿನಗಳಲ್ಲಿ ವೃತ್ತಿಯಲ್ಲಿ ಅಪಾರ ಯಶಸ್ಸು ಗಳಿಸಿದರು.

ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯನ್ನೂ ಸಾಧಿಸಿಕೊಳ್ಳುವುದರ ಜೊತೆಗೆ ರಾಜೇಂದ್ರ ಬಾಬು ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲಾರಂಭಿಸಿದರು. ಪರಿಣಾಮವಾಗಿ ಅನೇಕ ಸಾಮಾಜಿಕ ಹಾಗೂ ವಿದ್ಯಾರ್ಥಿ ಸಂಘಟನೆಗಳೊಂದಿಗೆ ಸಂಬಂಧ ಬೆಳೆಸಿಕೊಂಡರು. ರಾಜೇಂದ್ರ ಬಾಬು ನಖಶಿಖಾಂತವಾಗಿ ಒಬ್ಬ ಸಭ್ಯ ವ್ಯಕ್ತಿಯಾಗಿದ್ದರು. ಸದುವಿನಯವೇ ಸಾಕಾರಗೊಂಡಂತಿದ್ದರು. ಗಾಂಧೀಜಿಯ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಅಂದೋಲನದಲ್ಲಿ ಅವರು ತುಂಬಾ ಕ್ರಿಯಾ ಶೀಲವಾಗಿ ಪಾಲ್ಗೊಂಡಿದ್ದರು. ರಾಷ್ಟ್ರೀಯ ಅನೇಕ ಜವಾಬ್ದಾರಿಯ ಸ್ಥಾನಮಾನಗಳನ್ನು ಅಲಂಕರಿಸಿದ ಅವರು ಸ್ವಾತಂತ್ರ್ಯ ಹೋರಾಟಕ್ಕೆ ಸತ್ವಪೂರ್ಣವಾದ ಮತ್ತು ಅಷ್ಟೇ ಪರಿಣಾಮಕಾರಿಯಾದ ನೇತೃತ್ವ ನೀಡಿದ್ದರು 1920ರ ಕಾಂಗ್ರೆಸ್ಸಿನ ನಾಗಪೂರ ಅಧಿವೇಶನದಲ್ಲಿ ಅವರು ಗಾಂಧೀಜಿಯ ಅಸಹಕಾರ ಆಂದೋಲನದ ಕ್ರಿಯಾ ಯೋಜನೆಗೆ ಅಂತಿಮ ರೂಪ ನೀಡಿದರು.

ಆ ಕ್ರಿಯಾ ಯೋಜನೆ ಇತರ ಅನೇಕ ಸಂಗತಿಗಳನ್ನಲ್ಲದೆ ಈ ಕೆಳಗಿನವುಗಳನ್ನು ಒಳಗೊಂಡಿತ್ತು; ಸರ್ಕಾರ ಕೊಟ್ಟಿದ್ದ ಪದವಿ, ಬಿರುದು -ಬಾವಲಿಗಳನ್ನು ಹಿಂತಿರುಗಿಸುವುದು; ಪರಿಷತ್ತು ನ್ಯಾಯಾಲಯಗಳನ್ನು ಬಹಿಷ್ಕರಿಸುವುದು; ಸರ್ಕಾರಿ ಹುದ್ದೆಗಳನ್ನು ತ್ಯಜಿಸುವುದು; ಸ್ವಾಯತ್ತ ಸ್ವತಂತ್ರ ಪಂಚಾಯುತ್‌ಗಳನ್ನು ಸ್ಥಾಪಿಸುವುದು. ವಿದೇಶಿ ವಸ್ತು, ಭಾಷೆಗಳನ್ನು ಧಿಕ್ಕರಿಸಿ, ಖಾದಿ ಮಂತಾದ ದೇಶಿ ವಸ್ತುಗಳನ್ನು ಬಳಸುವುದು. ಹಿಂದೂ-ಮುಸ್ಲಿಂ ಐಕ್ಯತಾ ಸಂಘಟೆ ಯೊಂದನ್ನು ಅವರು ಸ್ಥಾಪಿಸಿದರು. ಆ ಕಾಲದಲ್ಲಿ ಅದು ಅತ್ಯಂತ ಮಹತ್ವದ್ದಾಗಿತ್ತು. ಬ್ರಿಟಿಷ್ ರಾಜಕುಮಾರ ಭಾರತಕ್ಕೆ ಬಂದಿದ್ದಾಗ ಸಂಘಟಿಸಲಾಗಿದ್ದ ಸ್ವಾಗತ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಅವರು ನಿರಾಕರಿಸಿದರೆಂಬುದು ದಾಖಲಾದ ವಿಷಯವಾಗಿದೆ. ಆಗ ಮುಂಬಯಿಯಲ್ಲಿ ಗಲಭೆಯಾಗಿ 50-60 ಜನ ಸಾವಿಗೀಡಾದರು. ನೂರಾರು ಜನ ಗಾಯಗೊಂಡರು. ಆ ಸಂದರ್ಭದಲ್ಲಿ ರಾಜೇಂದ್ರ ಬಾಬು ಇಟ್ಟ ಧೈರ್ಯ, ಧೀಮಂತಿಕೆಯ ಹೆಜ್ಜೆ ಅವರ ಮುಖಂಡತ್ವವನ್ನು ಇನ್ನೂ ಗಟ್ಟಿ ಗೊಳಿಸಿತು.

ಅವರು ತುಂಬಾ ಸ್ನೇಹ ಜೀವಿಯಾಗಿದ್ದರು. ಪರರ ಬಗ್ಗೆ ಅವರಿಗಿದ್ದ ಕಾಳಜಿ ಎಲ್ಲಾ ಜನ ಸಮುದಾಯಗಳಿಗೆ ಅಚ್ಚು ಮೆಚ್ಚಿನ ವ್ಯಕ್ತಿಯನ್ನಾಗಿ ಮಾಡಿತು. ಆ ಕಾಲದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ರಾಜಕೀಯ ಅಂದೋಲನಗಳಿಗೆ ತಮ್ಮದೇ ಆದ ಕಾಣಿಕೆಯನ್ನು ನೀಡುವುದರ ಮೂಲಕ ಅವರು ರಾಷ್ಟ್ರ ಮಟ್ಟದಲ್ಲಿ ತಮ್ಮ ನಾಯಕತ್ವವನ್ನು ಸಂಸ್ಥಾಪಿಸಿದರು. ಜನರು ಅವರನ್ನು ಬಿಹಾರಿನ ಗಾಂಧೀ ಎಂದು ಕರೆಯುತ್ತಿದ್ದರು. 1918ರಲ್ಲಿ ಅವರು 'ಸರ್ಚ್‌ಲಾಯಿಟ್' ಎಂಬ ಇಂಗ್ಲೀಷ್ ದಿನಪತ್ರಿಕೆಯನ್ನೂ 'ದೇಶ್' ಎಂಬ ಹಿಂದೀ

ಸಾಪ್ತಾಹಿಕವನ್ನೂ ಆರಂಭಿಸಿದರು. ಜನತೆಯ ಮೇಲಾಗುತ್ತಿದ್ದ ದೌರ್ಜನ್ಯ, ದಬ್ಬಾಳಿಕೆಗಳಿಗೆ ಕನ್ನಡಿ ಹಿಡಿಯುವುದೇ ಅವರ ಪತ್ರಿಕೆಗಳ ಉದ್ದೇಶವಾಗಿತ್ತು. ಆಮೇಲೆ ಬಿಹಾರ ವಿದ್ಯಾ ಪೀಠ ಸ್ಥಾಪಿಸಿದರು. ಗಯಾದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದ ಸ್ವಾಗತ ಸಮಿತಿಯ ಅಧ್ಯಕ್ಷರಾಗುವ ಕೀರ್ತಿಯೂ ಅವರಿಗೆ ಸಂಧಿತು.

ರಾಜೇಂದ್ರ ಬಾಬು ಅವರಿಗೆ ಹಿಂದೀ ಬಗ್ಗೆ ಇಟ್ಟ ಪ್ರೀತಿ ಅನುಪಮವಾಗಿತ್ತು. ಆದ್ದರಿಂದಲೇ 1942ರಲ್ಲಿ ಕಾಕಿನಾಡದಲ್ಲಿ ನಡೆದ ಹಿಂದೀ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗುವಂತೆ ಅವರನ್ನು ಕೇಳಿ ಕೊಳ್ಳಲಾಯಿತು. ದರ್ಭಾಂಗ್ ಮತ್ತು ಕಾಂಗ್ರಿ ಗಳಲ್ಲಿ ನಡೆದ ಸಾಹಿತ್ಯ ಸಮ್ಮೇಳನಗಳಿಗೂ ಅವರೇ ಅಧ್ಯಕ್ಷರಾಗಿದ್ದರು. ಹಿಂದೀ ಭಾರತದ ಅಧಿಕೃತ ಭಾಷೆಯಾಗಬೇಕೆಂಬಿದು ಅದು ಭಾರತದ ರಾಷ್ಟ್ರ ಭಾಷೆಯಾಗಬೇಕೆಂಬುವುದು ಅವರ ಬಯಕೆಯಾಗಿತ್ತು. ಸಂವಿಧಾನ ಸಭೆಯ ಅಧ್ಯಕ್ಷರಾಗಿಯೂ ಅವರು ಈ ಪ್ರಸ್ತಾವನೆಯ ಮೇಲೆ ಒತ್ತು ಕೊಟ್ಟಿದ್ದರು. ಅವರ ಪ್ರಕಾರ ಭಾರತದ ಎಲ್ಲಾ ಭಾಷೆಗಳಿಗೂ ಅವುಗಳದೇ ಆದ ಶ್ರೀಮಂತ ಪರಂಪರೆ ಇದೆ. ಆದರೆ ಹಿಂದೀ ಭಾರತದಲ್ಲಿ ಬಹುಸಂಖ್ಯಾತರ ಭಾಷೆಯಾಗಿದ್ದುದರಿಂದ ಅದಕ್ಕೆ ರಾಷ್ಟ್ರೀಯ ಭಾಷೆಯ ಸ್ಥಾನ ಸಲ್ಲುತ್ತದೆಂಬುವುದು ಅವರ ವಾದವಾಗಿತ್ತು.

ಸ್ವಾತಂತ್ರ್ಯ ಹೋರಾಟ ತೀವ್ರಗೊಂಡಂತೆ ಡಾ॥ ರಾಜೇಂದ್ರರ ಪ್ರಸಾದರ ಜನಪ್ರಿಯತೆ ಹೆಚ್ಚುತ್ತಾ ಹೋಯಿತು. ಅವರೊಬ್ಬ ನೇರ ಸ್ವಭಾವದ, ನ್ಯಾಯಪರ ವ್ಯಕ್ತಿಯಾಗಿದ್ದರು. ಅಧಿಕಾರ, ಅಂತಸ್ತು, ಸಿರಿ-ಸಂಪತ್ತಿನ ಬಗ್ಗೆ ಅವರಿಗೆ ಯಾವುದೇ ಆಕರ್ಷಣೆ ಇರಲಿಲ್ಲ. ಸ್ವಾತಂತ್ರ್ಯ ಹೋರಾಟದ ಎಲ್ಲ ಕಷ್ಟ ಕಾರ್ಪಣ್ಯಗಳನ್ನೊದುರಿಸಿ ಹೊರ ಬಂದಿದ್ದ ಅವರ ವ್ಯಕ್ತಿತ್ವ ಇನ್ನೂ ಬಲಗೊಂಡು ಪುಟವಿಕ್ಕಿದಂತಿತ್ತು. 1946ರ ಸೆಪ್ಟೆಂಬರ 2 ರಂದು ಹನ್ನೆರಡು ಮಂತ್ರಿಗಳನ್ನೊಳಗೊಂಡ ಮಧ್ಯಂತರ ಸರ್ಕಾರದ ರಚನೆಯಾಯಿತು. ಅದರಲ್ಲಿ ಆಹಾರ ಮತ್ತೂ ಕೃಷಿ ಇಲಾಖೆ ರಾಜೇಂದ್ರ ಬಾಬುರವರ ಪಾಲಿಗೆ ಬಂದಿತ್ತು. ಆಗ ಎರಡನೇ ಜಾಗತಿಕ ಮಹಾಯುದ್ಧ ನಡೆದುದ್ದರಿಂದ ಇಡೀ ದೇಶ ಆಹಾರದ ಬಿಕ್ಕಟ್ಟನ್ನೆದುರಿಸುತಿತ್ತು. ಆದರೆ, ರಾಜೇಂದ್ರ ಬಾಬು ಅಂದು ತಮಗೆ ಎದುರಾದ ಎಲ್ಲ ಸಮಸ್ಯೆಗಳನ್ನೂ ಯಶಸ್ವಿಯಾಗಿ ಬಗೆಹರಿಸಿದರು.

15 ಆಗಸ್ಟ 1947 ರಂದು ಭಾರತ ಸ್ವಾತಂತ್ರ್ಯವಾಯಿತು. ಸಾರ್ವಭೌಮ, ಸ್ವತಂತ್ರ ಗಣ ತಾಂತ್ರಿಕ ಭಾರತದ ಪ್ರಥಮ ಪ್ರಜೆಯ ಜವಾಬ್ದಾರಿಯನ್ನು ಹೊರಲು ಯೋಗ್ಯವಾದ ವ್ಯಕ್ತಿಗೆ ಹುಡುಕಾಟ ಆರಂಭವಾಯಿತು. ಆಗ ಡಾ॥ ರಾಜೇಂದ್ರ ಪ್ರಸಾದರ ಹೆಸರು ಭಾರತದ ರಾಷ್ಟ್ರಪತಿಯ ಹುದ್ದೆಗೆ ಆಯ್ಕೆಯಾದ್ದದ್ದು ತೀರ ಸುಸಂಗತವಾಗಿತ್ತು. ಪ್ರಾಸಂಗಿಕವಾಗಿ, ಅವರು ರಾಷ್ಟ್ರಪತಿಯ ಹುದ್ದೆಗೆ ಆಯ್ಕೆಯಾಗುವುದಕ್ಕೆ ಮುಂಚೆಯೇ ಎರಡು ವರ್ಷಗಳವರೆಗೆ ಸಂವಿದಾನ ಸಭೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಮುಂದೆ 1952ರಲ್ಲಿ ಅವರು ವಿಧಿವತ್ತಾಗಿ ಭಾರತದ ರಾಷ್ಟ್ರಪತಿ ಸ್ಥಾನಕ್ಕೆ ಆಯ್ಕೆಯಾಗಿ ಸತತ ಹನ್ನೆರಡು ವರ್ಷಗಳವರೆಗೆ ಸೇವೆ ಸಲ್ಲಿಸಿದರು. ಡಾ॥ ಸರ್ವೇಪಲ್ಲಿ ರಾಧಾಕೃಷ್ಣನ್‌ರವರ ಮಾತಿನಲ್ಲಿ ಹೇಳುವುದಾದರೆ, ರಾಜೇಂದ್ರ ಬಾಬು ಜನಕ, ಬುದ್ಧ ಮತ್ತು ಗಾಂಧೀ- ಈ ಮೂರು ಮಹನೀಯರ ಗುಣಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡಿದ್ದರು. ಅಂತೆಯೇ ಅವರು ರಾಷ್ಟ್ರ ಪತಿಯ ಹುದ್ದೆ ತ್ಯಜಿಸುವ ಮುಂಚೆ ಭಾರತದ

ಜನತೆ ದೆಹಲಿಯ ರಾಮಲೀಲಾ ಮೈದಾನದಲ್ಲಿ ಅಭಿನಂದನಾ ಸಮಾರಂಭವನ್ನೇರ್ಪಡಿಸಿ ಅತ್ಯಂತ ಸೂಕ್ತ ರೀತಿಯಲ್ಲಿ ಅವರಿಗೆ ಸನ್ಮಾನಿಸಿತು. ಆ ಸಂದರ್ಭದಲ್ಲಿ ಮಾತನಾಡುತ್ತ ಪಂಡಿತ್ ಜವಾಹರಲಾಲ್ ನೆಹರೂ ಹೇಳಿದ್ದು: "ಕಳೆದ ಈ ಹನ್ನೆರಡು ವರ್ಷಗಳ ಅವಧಿ ಡಾ|| ರಾಜೇಂದ್ರ ಪ್ರಸಾದ ಯುಗ" ಎಂದು ಕರೆಯಲ್ಪಡುತ್ತದೆ." ಆಮೇಲೆ ಅದೇ ವೇದಿಕೆಯಿಂದ ಡಾ|| ರಾಜೆಂದ್ರ ಪ್ರಸಾದರು ಮುಗಿದ ಕೈ ಬಾಗಿದ ಶಿರವಾಗಿ ಆಡಿದ ನುಡಿಗಳಿವು: "ನಾನೇನಾದರೂ ತಪ್ಪು ಮಾಡಿದ್ದರೆ ದೇವರಿಂದಲೂ, ನಿಮ್ಮಿಂದಲೂ ಕ್ಷಮೆಯಾಚಿಸುತ್ತೇನೆ" ಅವರ ಸರಳತೆ, ಸದ್ಗುಣಗಳೇ ಅವರನ್ನು ಒಬ್ಬ ಅಸಾಮಾನ್ಯ ವ್ಯಕ್ತಿಯನ್ನಾಗಿ ರೂಪಿಸಿದ್ದವು. ಅವರು ಭಾರತೀಯ ಸಂಸ್ಕೃತಿಯ ನೈಜ ಪ್ರತೀಕವಾಗಿದ್ದರು. ಹಾಗೆಂದೆ ಅವರ ಬೀಳ್ಕೋಡುಗೆ ಸಮಾರಂಭ ಒಂದು ಚರಿತ್ರಾರ್ಹ ಘಟನೆಯಾಯಿತು.

ಭಾರತದ ರಾಷ್ಟ್ರಪತಿಯಾಗಿ ಸೇವೆಸಲ್ಲಿಸಿದ ನಂತರ ಸಂಸತ್ತಿನ ಸದನದಲ್ಲಿ ಸಂಘಟಿಸಲಾಗಿದ್ದ, ಒಂದು ಭಾರಿಸಮಾರಂಭದಲ್ಲಿ ಅಂದಿನ ರಾಷ್ಟ್ರಪತಿಗಳಾಗಿದ್ದ ಡಾ|| ರಾಧಾಕೃಷ್ಣನ್‌ರವರು ಡಾ|| ರಾಜೇಂದ್ರ ಪ್ರಸಾದರಿಗೆ ಭಾರತ ರತ್ನ ಪ್ರಶಸ್ತಿ ನೀಡಿ ಗೌರವಿಸಿದರು. 1962ರ ಮೇ 13 ರಂದು ರಾಜೇಂದ್ರ ಪ್ರಸಾದರು ದೆಹಲಿ ಬಿಟ್ಟು ತಮ್ಮ ಊರಿಗೆ ತೆರಳಿದರು. ಆ ಮೇಲೆ ಪಾಟ್ನಾದ ಸದಾಖತ್ ಆಶ್ರಮದಲ್ಲಿ ಅವರ ಕೊನೆಯ ಕೆಲವು ದಿನಗಳನ್ನು ಕಳೆದರು. ಜನತೆಯ ಮನಸ್ಸಿನ ಮೇಲೆ "ಅವರ ವ್ಯಕ್ತಿತ್ವ ಅಚ್ಚಳಿಯದ ಮುದ್ರೆಯನ್ನೊತ್ತಿದೆ" ಎಂದು ಪಂಡಿತ ಜವಾಹರಲಾಲ ನೆಹರೂ ಒಮ್ಮೆ ಹೇಳಿದ್ದರು. ಆ ಮಾತು ವೇದ ವಾಕ್ಯ ವಾಯಿತು. ಯಾಕೆಂದರೆ, ಅವರು ದೇಶದ ಅಖಂಡ ಜನತೆಯ ಪ್ರೀತಿಗೆ ಪಾತ್ರರಾಗಿ ಎಂದೆಂದೂ ಮರೆಯಲಾಗದಂತೆ ಜನಮಾನಸದಲ್ಲಿ ಸ್ಥಾಯಿಯಾಗಿದ್ದರೆ.

## ಡಾ|| ರಾಜೇಂದ್ರ ಪ್ರಸಾದ: ನಮ್ಮ ಸಂಸ್ಕೃತಿಯ ಸಂಕೇತ

-ಚೌಧರಿ ರಣವೀರ ಸಿಂಗ್ *

ಉಡಿಗೆ-ತೊಡಿಗೆಗಳಲ್ಲಿ ಅಚ್ಚ ರೈತರಾಗಿದ್ದೂ ನಮ್ಮ ಸಂಸ್ಕೃತಿಯ ಅತ್ಯುತ್ತಮವಾದುದನ್ನೆಲ್ಲ ಪ್ರತಿನಿಧಿಸುತ್ತಿದ್ದ ಬಾಬು ರಾಜೇಂದ್ರ ಪ್ರಸಾದರಂತಹ ಒಬ್ಬ ವ್ಯಕ್ತಿ ನಮ್ಮ ದೇಶದ ಪ್ರಥಮ ರಾಷ್ಟ್ರಪತಿಯಾದ್ದದ್ದು ಸುದೈವವೆಂದೇ ಹೇಳಬಹುದು. ಸ್ವಾತಂತ್ರ್ಯ ಹೋರಾಟದ ದಿಗ್ಗಜರಲ್ಲಿ ಒಬ್ಬರಾಗಿದ್ದ ಅವರು ಮಹಾತ್ಮಾ ಗಾಂಧೀಜಿಯ ಅತ್ಯಂತ ನಂಬುಗೆಯ ಅನುಯಾಯಿಯಾಗಿದ್ದರು ಅವರು ಬಿಹಾರಿನ ದೂರದ ಒಂದು ಹಳ್ಳಿಯಲ್ಲಿ 1884ರಲ್ಲಿ ಜನಿಸಿದರು. ಅಂದರೆ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆಗೆ ಒಂದು ವರ್ಷ ಮುಂಚೆ ಆಮೇಲೆ ಅವರು ಆ ಸಂಘಟನೆಯ ಅಧ್ಯಕ್ಷರಾದರು. ಅವರು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಚುನಾಯಿತರಾದ್ದದ್ದು ಒಮ್ಮೆ ಅಲ್ಲ, ಮೂರು ಸಲ. ಪ್ರಾಥಮಿಕ ಶಾಲೆಯ ಮೂಲಭೂತ ಸೌಲಭ್ಯವೂ ಇರದಿದ್ದ ಹಳ್ಳಿಗಾಡಿನಿಂದ ಬಂದಿದ್ದರೂ ಅವರು ಕಾಲಾನುಕ್ರಮದಲ್ಲಿ ಸಂವಿಧಾನ ಸಭೆಯ ಅಧ್ಯಕ್ಷರಾದರು. ಅಷ್ಟೇ ಅಲ್ಲ, ಪ್ರಪಂಚದಲ್ಲಿಯೇ ಒಂದು ಬ್ರಹತ್ ಪ್ರಜಾಪ್ರಭುತ್ವದ ಮುಖ್ಯಸ್ಥರಾಗಿ ಎರಡು ಅವಧಿಗಳಿಗೆ ಸೇವೆ ಸಲ್ಲಿಸಿದರು. ಇದು ಸಾಧ್ಯವಾದದ್ದು ಅವರ ಉಜ್ವಲ ಬುದ್ಧಿ ಮತ್ತೆ, ತ್ಯಾಗ ಸಮರ್ಪಣಾ ಭಾವ ಹಾಗೂ ಕಠಿಣ ಪರಿಶ್ರಮದಿಂದಲೇ ಹೊರತು ಕೇವಲ ಸುದೈವದಿಂದಲ್ಲ.

ಸ್ವಾತಂತ್ರ್ಯ ಹೋರಾಟದಲ್ಲಿ ರಾಜೇಂದ್ರ ಬಾಬುರವರದ್ದು ಬಹಳ ಜನಪ್ರಿಯವಾದ ಹೆಸರಾಗಿತ್ತು. ನಾನು ಸ್ವಾತಂತ್ರ್ಯ ಹೋರಾಟಗಾರನಾಗಿದ್ದುದರಿಂದ ಅವರ ಪರಿಚಯವಾಗುವುದಕ್ಕೆ. ಮುಂಚೆಯೇ ಅವರ ಬಗ್ಗೆ ಸಾಕಷ್ಟು ಕೇಳಿದ್ದೆ. ಅವರ ಬಗ್ಗೆ ಗಾಂಧೀಜಿಗಿದ್ದ ಅಪಾರ ಪ್ರೀತಿ ವಿಶ್ವಾಸಗಳು ನನ್ನ ಗಮನಕ್ಕೆ ಬಂದಿದ್ದವು. ಆಮೇಲೆ ಸಂವಿಧಾನ ಸಭೆಯಲ್ಲಿ ಮಾತ್ರ ನಾನು ಅವರ ಸಂಪರ್ಕಕ್ಕೆ ಬಂದದ್ದು. ಅಲ್ಲಿಯೇ ಅವರ ಶ್ರೇಷ್ಠ ಸಾನಿಧ್ಯದಲ್ಲಿ ಕೆಲಸ ಮಾಡುವ ಅವಕಾಶ ನನಗೆ ದೊರೆತಿದ್ದು. ಸಂವಿಧಾನ ಸಭೆಯ ಅಧ್ಯಕ್ಷರನ್ನು ಚುನಾಯಿಸುವ ಪ್ರಶ್ನೆ ಬಂದಾಗ ಸಹಜವಾಗಿಯೇ ರಾಜೇಂದ್ರ ಬಾಬು ನಮ್ಮ ಆಯ್ಕೆಯಾಗಿದ್ದರು. ಭಾರತದ ಸಂವಿಧಾನಕ್ಕೆ ಜನ್ಮ ನೀಡಲಿದ್ದ ಆ ಸಭೆಯ ಕಲಾಪಗಳನ್ನು ಚಾಚೂ ತಪ್ಪದೆ ನಡೆಸಿಕೊಂಡು ಹೋಗಬಲ್ಲ ಅಧ್ಯಕ್ಷರೊಬ್ಬರ ಅವಶ್ಯಕತೆ ನಮಗಿತ್ತು. ಸಂವಿದಾನ ಸಭೆಯ ಅಧ್ಯಕ್ಷರಾಗಿ ಅವರು ಬಹು ಜಾಗರೂಕತೆಯಿಂದ ತಮ್ಮ ಹೊಣೆಗಾರಿಕೆಯನ್ನು ನಿಭಾಯಿಸಿದರು. ಅಧ್ಯಕ್ಷರಾಗಿ ಅವರು ತೋರಿದ ಚಾಕಚಕ್ಯಕೆ, ಕೌಶಲ್ಯ ಸದ್ ದ್ವಿವೇಕ ಮತ್ತು ಪ್ರಬುದ್ಧತೆ ಸದನದಲ್ಲಿಯ ಎಲ್ಲರಿಗೂ ತೃಪ್ತಿಯನ್ನುಂಟುಮಾಡಿತು.

ವರಿಷ್ಠ ಕಾಂಗ್ರೆಸ್ಸಿಗರಲ್ಲಿ ಒಬ್ಬರಾಗಿದ್ದ ರಾಜೇಂದ್ರ ಬಾಬುರವರ ಬಗ್ಗೆ ಪಂಡಿತ ಜವಾಹರ ಲಾಲ್ ನೆಹರೂ ಅವರಿಗೆ ಅತ್ಯುನ್ನತ ಗೌರವವಿತ್ತು. ಆದರೂ ದೇಶದ ಹಂಗಾಮಿ ಅಧ್ಯಕ್ಷರ ಆಯ್ಕೆಯ ವಿಷಯದಲ್ಲಿ ನೆಹರೂಜಿ ರಾಜೇಂದ್ರ ಬಾಬುರವರೆಡೆಗೆ ಒಲವು ತೋರಿಸಲಿಲ್ಲ. ಕಾಂಗ್ರೆಸ್ ಪಕ್ಷದ ಸಭೆಗಳಲ್ಲಿ ನಾವೆಲ್ಲ ರಾಜೇಂದ್ರ ಬಾಬುರವರ ಬದಲಾಗಿ ಸಿ. ರಾಜಗೋಪಾಲಾಚಾರ್ಯರನ್ನು ಬೆಂಬಲಿಸಬೇಕೆಂದು ಒತ್ತಾಯಿಸಿದರು. ಅವರ ಪ್ರಕಾರ ಅತ್ಯುನ್ನತ ಹುದ್ದೆಗೆ ಸಿ. ರಾಜಗೋಪಾಲಾಚಾರ್ಯರೇ ಹೆಚ್ಚು ಯೋಗ್ಯರೆಂದು

* ಚೌಧರಿ ರಣವೀರ ಸಿಂಗ್ ಸಂವಿಧಾನ ಸಭೆಯ ಸದಸ್ಯರಾಗಿದ್ದು, ಆಮೇಲೆ ಸಂಸತ್ತಿನ ಸದಸ್ಯರಾಗಿದ್ದರು. (ಲೋಕ ಸಭಾ)

ಹೇಳುತ್ತಿದ್ದರು.ಸರ್ಕಾರದ ಮುಖ್ಯಸ್ಥನಾಗಿ ರಾಷ್ಟ್ರಪತಿಯೊಂದಿಗೆ ವ್ಯವಹರಿಸಬೇಕಾದವರು ತಾವೆಂದೂ ಆ ಕಾರಣಕ್ಕಾಗಿ ಅವರ ಆಯ್ಕೆಯನ್ನೇ ಮನ್ನಿಸಬೇಕೆಂದೂ ತಮ್ಮ ವಾದವನ್ನು ಸಮರ್ಥಿಸಿ ಕೊಳ್ಳುತ್ತಿದ್ದರು. ಸಿ. ರಾಜಗೋಪಾಲಾಚಾರ್ಯರ ಪ್ರಾಂತದವರೇ ಆಗಿದ್ದ ಪ್ರೊ.ಎನ್.ಜಿ ರಂಗಾ, ಸಿ. ರಾಜಗೋಪಾಲಾಚಾರ್ಯರ ವಿರುದ್ಧವಾಗಿ ರಾಜೇಂದ್ರ ಬಾಬುರವರ ಕಟ್ಟಾ ಬೆಂಬಲಿಗರಾಗಿದ್ದರು. ಸಿ. ರಾಜಗೋಪಾಲಾಚಾರ್ಯರು ಬ್ರಿಟಿಷ್ ಆಳರಸರ ಪ್ರತಿನಿಧಿಯಾಗಿ ಮೊದಲನೇ ಗವರ್ನರ್ ಜನರಲ್ ಆಗಿದ್ದಾದ್ದರಿಂದ ಅವರ ಹೆಸರನ್ನು ಹಂಗಾಮಿ ರಾಷ್ಟ್ರಪತಿ ಸ್ಥಾನಕ್ಕೆ ಸ್ವೀಕರಿಸಲು ಸಾಧ್ಯವಿಲ್ಲವೆಂದು ಪಕ್ಷದ ಒಂದು ಸಭೆಯಲ್ಲಿ ಪ್ರೊ.ರಂಗಾ ಅವರು ಹೇಳಿದ್ದು ನನಗೆ ಇನ್ನೂ ನೆನಪಿದೆ. ರಾಜೇಂದ್ರ ಬಾಬು ಅವರನ್ನು ಬೆಂಬಲಿಸುತ್ತಾ ಅವರು ಹೇಳಿದ್ದು: "ಸಂವಿಧಾನ ಸಭೆಯ ಸದಸ್ಯರು ಸಂಸತ್ತಿನ ಪದನಿಮಿತ್ತ ಸದಸ್ಯರೂ ಆಗಿರುವುದರಿಂದ ಸಂವಿಧಾನ ಸಭೆಯ ಅಧ್ಯಕ್ಷರನ್ನು ಹಂಗಾಮಿ ರಾಷ್ಟ್ರಪತಿಯನ್ನಾಗಿ ಅಂಗೀಕರಿಸಲು ಇರುವ ತೊಂದರೆಗಳಾದರೂ ಏನು ಎಂಬುದು ನನಗೆ ಅರ್ಥವಾಗುತ್ತಿಲ್ಲ."

ಸಂವಿಧಾನ ಸಭೆಯಲ್ಲಿ ನಾನು ಒಮ್ಮೆ ಹೇಳಿದ್ದೆ, ಕಾಂಗ್ರೆಸ್ ಪಕ್ಷದ ಬಹುಸಂಖ್ಯಾತರು ರಾಜೇಂದ್ರ ಬಾಬು ಅವರೇ ರಾಷ್ಟ್ರಪತಿಗಳಾಗಬೇಕೆಂದು ಅಭಿಪ್ರಾಯ ಹೊಂದಿರುವುದರಿಂದ ಅವರು ಇದನ್ನು ತಿರಸ್ಕರಿಸಬಾರದು ಎಂದು.

ನನ್ನ ಮತ್ತು ರಾಜೇಂದ್ರ ಬಾಬು ಅವರ ನಡುವೆ ಸಾಮಾನ್ಯ ಅನುಭವದ ಸಂಗತಿಯೊಂದು ಇತ್ತು. ಒಬ್ಬನೇ ವ್ಯಕ್ತಿ ನಮ್ಮಿಬ್ಬರಿಗೂ ಸತತವಾಗಿ ಎರಡು ಅವಧಿಗಳ ನಮ್ಮ ನಮ್ಮ ಚುನಾವಣೆಗಳಲ್ಲಿ ರಾಜಕೀಯ ಎದುರಾಳಿಯಾಗಿದ್ದರು. ಅವರೇ ಚೌಧರಿ ಹರಿರಾಮ್. ಹರಿಯಾಣದ ವಕೀಲರಾಗಿದ್ದ ಚೌಧರಿ ಹರಿರಾಮ್ ರೊಹತಕ್ ಸಂಸತ್-ಮತ-ಕ್ಷೇತ್ರದಲ್ಲಿ ನನ್ನ ವಿರುದ್ಧ 1952 ಮತ್ತು 1957ರಲ್ಲಿ ಸ್ಪರ್ಧಿಸಿದರು. ಅವರೇ ರಾಜೇಂದ್ರ ಬಾಬು ಅವರ ವಿರುದ್ಧ 1952 ಮತ್ತು 1957ರಲ್ಲಿ ರಾಷ್ಟ್ರಪತಿಸ್ಥಾನಕ್ಕೆ ಸ್ಪರ್ಧಿಸಿದ್ದರು.

ಪ್ರಥಮ ಲೋಕ ಸಭೆಯ ಚುನಾವಣೆಯಲ್ಲಿ ನನ್ನ ಎದುರಾಳಿಯಾಗಿದ್ದ ಚೌಧರಿ ಹರಿರಾಮ್ ತಮ್ಮ ಚುನಾವಣಾ ಭಾಷಣಗಳಲ್ಲಿ ಮತದಾರರು ತಮಗೇ ಮತ ಹಾಕಬೇಕೆಂದೂ, ನನಗೆ ಹಾಕಬಾರದೆಂದೂ ವಿನಂತಿಸುತ್ತಿದ್ದರು. "ನೀವು ರಣವೀರ ಸಿಂಗರನ್ನು ಚುನಾಯಿಸಿದರೆ, ಕೇವಲ ಒಬ್ಬ ಲೋಕ ಸಭೆಯ ಸದಸ್ಯನನ್ನು ಚುನಾಯಿಸುತ್ತೀರಿ ಅಷ್ಟೇ. ಆದರೆ ನನ್ನನ್ನು ಚುನಾಯಿಸಿದರೆ, ನೀವು ಕೇವಲ ಸಂಸತ್ತಿನ ಒಬ್ಬ ಪ್ರತಿನಿಧಿಯನ್ನು ಚುನಾಯಿಸುವುದಷ್ಟೇ ಅಲ್ಲ, ಭಾರತದ ಭಾವಿ ರಾಷ್ಟ್ರಪತಿಯನ್ನು ಚುನಾಯಿಸುತ್ತೀರಿ." ಎಂದು ಅವರು ಮತದಾರರಿಗೆ ಎಚ್ಚರಿಕೆ ನೀಡುತ್ತಿದ್ದರು. ಚೌಧರಿ ಹರಿರಾಮ್ ಆ ಚುನಾವಣೆಯಲ್ಲೇನೋ ಸೋತರು. ಆದರೆ ಅವರು ಮುಂದೆ ಭಾರತದ ರಾಷ್ಟ್ರಪತಿ ಸ್ಥಾನಕ್ಕೆ ರಾಜೇಂದ್ರ ಬಾಬುರವರ ವಿರುದ್ಧ ಸ್ಪರ್ಧಿಸುವ ಮಟ್ಟಿಗೆ ಅವರು ತಮ್ಮ ಮಾತನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರು. ಆದರೆ ಆ ಪ್ರಯತ್ನ ವಿಫಲವಾಯಿತೆಂಬುದು ಬೇರೆ ಮಾತು.

1957ರಲ್ಲಿ ಚೌಧರಿ ಹರಿರಾಣ ರೋಹತಕ್ ಮತ ಕ್ಷೇತ್ರದಿಂದ ನನ್ನ ವಿರುದ್ಧ ಮತ್ತೆ ಸ್ಪರ್ಧಿಸಿದರು. ಆದರೆ ಈ ಸಲ ಅವರು ತಮ್ಮ ಠೇವಣಿಯನ್ನು ಕಳೆದುಕೊಂಡರು. ಯಥಾ ಪ್ರಕಾರ ಮತ್ತೆ ಅವರು ರಾಜೇಂದ್ರ ಬಾಬು ವಿರುದ್ಧ ಎರಡನೇ ಸಲಕ್ಕೆ ರಾಷ್ಟ್ರಪತಿ ಸ್ಥಾನಕ್ಕೆ ತಮ್ಮ

ನಾಮ ಪತ್ರ ಸಲ್ಲಿಸಿದರು. ನಾನೊಮ್ಮೆ ರಾಜೇಂದ್ರ ಬಾಬು ಅವರಿಗೆ ಹೇಳಿದ್ದೆ "ನಾನು ನನ್ನ ಮಾನ್ಯ ಎದುರಾಳಿ ತನ್ನ ಠೇವಣಿ ಕಳೆದುಕೊಳ್ಳುವಂತೆ ಮಾಡಿದ್ದೇನೆ. ಆದರೆ ನೀವು ರಾಷ್ಟ್ರಪತಿ ಚುನಾವಣೆಯಲ್ಲಿ ಅದನ್ನು ಸಾಧಿಸಲು ಸಾಧ್ಯವಿಲ್ಲ." ನಾನು ಹೀಗೆ ಹೇಳಲು ಕಾರಣವೇನೆಂದರೆ ಆಗ ಭಾರತದ ರಾಷ್ಟ್ರಪತಿ ಸ್ಥಾನಕ್ಕೆ ಸ್ಪರ್ಧಿಸುವವರಿಗೆ ಯಾವುದೇ ಭದ್ರತಾ ಠೇವಣಿ ನಿಗದಿ ಮಾಡಿರಲಿಲ್ಲ. ನನ್ನ ಮಾತಿನ ಅರ್ಥ ಪರಿಭಾವಿಸಿದ ಅವರು ಮನ ತುಂಬಿ ಮುಗುಳ್ನಕ್ಕಿದ್ದರು.

ಭಾರತದ ರಾಷ್ಟ್ರಪತಿಯಾಗಿದ್ದ ಡಾ|| ರಾಜೇಂದ್ರ ಬಾಬು ದೆಹಲಿ ವಿಶ್ವ ವಿದ್ಯಾನಿಲಯದ ಕುಲಪತಿಗಳೂ ಆಗಿದ್ದರು. 1952 ರಲ್ಲಿ ನಾನು ಪ್ರಥಮ ಲೋಕಸಭೆಯ ಸದಸ್ಯನಾಗಿದ್ದಾಗ ಕಾಯಿದೆ ಅಭ್ಯಾಸ ಮಾಡುವ ಉದ್ದೇಶದಿಂದ ದೆಹಲಿ ವಿಶ್ವವಿದ್ಯಾನಿಲಯ ಸಂಜೆ ಕಾಲೇಜಿಗೆ ಪ್ರವೇಶ ಪಡೆಯ ಬಯಸಿದೆ. ಆಗ ವಿಶ್ವ ವಿದ್ಯಾನಿಲಯದ ಡೀನ್ ಆಗಿದ್ದ ದಕ್ಷಿಣ ಭಾರತೀಯರೊಬ್ಬರು ನನಗೆ ಸಂಜೆ ಕಾಲೇಜಿಗೆ ಪ್ರವೇಶ ನೀಡಲು ನಿರಾಕರಿಸಿದರು. ಬದಲಾಗಿ, ಡೇ ಸ್ಕಾಲರಾಗಿ ಪ್ರವೇಶ ಕೊಡುವುದಾಗಿ ಹೇಳಿದರು. ಇದರಿಂದ ಅವಮಾನಿತವಾಗಿ ಕುಪಿತಗೊಂಡ ನಾನು ನೇರವಾಗಿ ರಾಜೇಂದ್ರ ಬಾಬು ಅವರಿಗೆ ಬರೆದೆ. ನಾನೊಬ್ಬ ಸಂಸತ್ ಸದಸ್ಯನಾಗಿರುವುದರಿಂದ ನನಗೆ ಸಾಯಂಕಾಲದ ವರ್ಗಗಳಿಗೇ ಪ್ರವೇಶ ನೀಡುವುದು ಸೂಕ್ತ ಎಂದು ಅಹವಾಲು ಸಲ್ಲಿಸಿದೆ. ರಾಜೇಂದ್ರ ಬಾಬು ಅವರು ನನಗೆ ಕಳುಹಿಸಿದ ಮಾರುತ್ತರದಿಂದ ನಾನು ವಸ್ತುತಃ ಮೂಕ ವಿಸ್ಮಿತನಾದೆ. ನಾನು ಆಗಲೇ ಬದುಕಿನಲ್ಲಿ ಸಂಸ್ಥಾಪಿತನಾಗಿದ್ದೂ ಮತ್ತೆ ಸಂಜೆ ಕಾಲೇಜಿಗೆ ಪ್ರವೇಶ ಪಡೆಯುವ ಮೂಲಕ ನಿಜವಾಗಿಯೂ ಆ ಅವಕಾಶದ ಅವಶ್ಯಕತೆ ಇರುವವರಿಂದ ಅದನ್ನು ಕಸಿದು ಕೊಂಡಂತ್ತಾಗುವುದಿಲ್ಲವೆ ? ಎಂಬುವುದು ಅವರ ವಾದವಾಗಿತ್ತು. ನಾನು ಚಕಾರವೆತ್ತದೆ ಅವರ ವಾದವನ್ನು ಒಪ್ಪಿಕೊಂಡೆನೆಂದು ಹೇಳುವುದು ಅವಶ್ಯಕವಿಲ್ಲವಷ್ಟೇ?

ರಾಜೇಂದ್ರ ಬಾಬು ಅವರು ಯಾವಾಗಲೂ ತಮಗೆ ಸರಿ ಎನಿಸಿದ್ದನ್ನೂ, ನ್ಯಾಯೋಚಿತವಾಗಿದ್ದನ್ನೂ ನಿರ್ಭಿಡತೆಯಿಂದ ಬೆಂಬಲಿಸುತ್ತಿದ್ದರು. ಅವರೊಬ್ಬ ತತ್ವ ವ್ಯಕ್ತಿಯಾಗಿದ್ದರು. ದೀನ ದಲಿತರೆಂದರೆ ತಕ್ಷಣವೇ ಅವರ ಹೃದಯ ಕರಗುತ್ತಿತ್ತು. ಬಡವರಿಗಾಗಿ ಸದಾ ಮಿಡಿಯುತ್ತಿದ್ದ ಒಬ್ಬ ಮೃದುಹೃದಯಿ ಅವರಾಗಿದ್ದರು. ನಿದರ್ಶನಕ್ಕೆ ಹೇಳುವುದಾದರೆ, ಅವರು ಸಂವಿಧಾನ ಸಭೆಯ ಅಧ್ಯಕ್ಷರಾಗಿದ್ದಾಗ ರೇವಾರಿಯಿಂದ (ಅದು ಆಗ ಪಂಜಾಬಿನಲ್ಲಿತ್ತು) ಒಬ್ಬ ಹರಿಜನ ವ್ಯಕ್ತಿ ಅವರೆಡೆಗೆ ಬಂದು ಯಾರು ತನ್ನ ಹೆಂಡತಿಯನ್ನು ಬಲಾತ್ಕಾರದಿಂದ ಎಳೆದೊಯಿದ್ದಾರೆಂದು ಗೋಳಿಟ್ಟು, ಅಂಗಲಾಚಿ ಅವರ ಸಹಾಯ ಕೇಳಿದನು. ಆ ಕುಕೃತ್ಯದಲ್ಲಿ ಆ ಭಾಗದ ಜೈಲ್ದಾರನ ಕೈ ಇದ್ದಿರಬೇಕೆಂದು ಅವನಿಗೆ ಸಂಶಯವಿತ್ತು. ಆದ್ದರಿಂದಲೇ ಅವನು ರಾಜೇಂದ್ರ ಬಾಬು ಅವರು ತಮ್ಮ ಪದಾಧಿಕಾರ ಬಳಸಿ, ಅವನ ಹೆಂಡತಿಯನ್ನು ಪತ್ತೆ ಹಚ್ಚಬೇಕೆಂದು ವಿನಂತಿಸಿದನು. ರಾಜೇಂದ್ರ ಬಾಬು ಆ ವ್ಯಕ್ತಿಯನ್ನು ನನ್ನೆಡೆಗೆ ಕಳುಹಿಸಿದರು. ರಾಜೇಂದ್ರ ಬಾಬು ಅವರ ಬಯಕೆಯ ಬಗ್ಗೆ ನನಗೆ ಅಪಾರ ಗೌರವವಿತ್ತಾದ್ದರಿಂದ ನಾನು ಖುದ್ದಾಗಿ ಆ ಹಳ್ಳಿಗೆ ಹೋಗಿ ನನ್ನ ಪ್ರಭಾವ ಬಳಸುವ ಮೂಲಕ ಅವನ ಹೆಂಡತಿಯನ್ನು ಹುಡುಕಿ ಅವನಿಗೆ ಒಪ್ಪಿಸಿದೆ. ನಾನು ಈ ಘಟನೆಯನ್ನು ಪ್ರಸ್ತಾವಿಸುವ ಕಾರಣವೇನೆಂದರೆ, ರಾಜೇಂದ್ರ ಬಾಬು ಅವರಿಗೆ ಬಡವರ ಬಗ್ಗೆ ಇದ್ದ ಕಾಳಜಿ, ಅವರ ಕಷ್ಟ ಕಾರ್ಪಣ್ಯಗಳನ್ನೂ

ಬಗೆಹರಿಸಿ. ಅವರ ಹಿತಾಸಕ್ತಿಯನ್ನೂ ಕಾಯುವಲ್ಲಿ ಅವರು ತೋರುತ್ತಿದ್ದ ಆಸಕ್ತಿ ಇತ್ಯಾದಿಯನ್ನು ಎತ್ತಿ ತೋರಿಸುವುದು.

ನಮ್ಮ ರಾಷ್ಟ್ರದ ಅತ್ಯುನ್ನತ ಹುದ್ದೆಯನ್ನು 12 ವರ್ಷಗಳ ದೀರ್ಘ ಅವಧಿಯವರೆಗೆ ಅಲಂಕರಿಸಿದ್ದ ರಾಜೇಂದ್ರ ಬಾಬು ನಮ್ಮ ದೇಶದ ಭವಿಷ್ಯತ್ತನ್ನು ರೂಪಿಸಿದ ಮಹಾರೂವಾರಿ. ವಿಶೇಷವಾಗಿ, ಸ್ವಾತ್ರಂತ್ರ್ಯೋತ್ತರದ ಪ್ರಥಮ ದಶಮಾನದಲ್ಲಿ ದೇಶ ಎದುರುಸುತ್ತಿದ್ದ ಅಪೂರ್ವ ಬಿಕ್ಕಟ್ಟಿನ ಸಂದರ್ಭದಲ್ಲಿ ಅವರು ಸಲ್ಲಿಸಿದ ಸೇವೆ ಅಮೂಲ್ಯವಾದದ್ದು. ಅವರು ಸಂವಿಧಾನ ಔಚಿತ್ಯವನ್ನು ಚಾಚೂ ತಪ್ಪದೇ ಅನುಸರಿಸುತ್ತಾ ತಮ್ಮ ಪರಮೋಚ್ಚ ಹುದ್ದೆಯ ಘನತೆ ಗೌರವವನ್ನೂ ಯಶಸ್ವಿಯಾಗಿ ಕಾಪಾಡಿದರು. ಅವರ ಸದ್ಭಾವ ಸರಳತೆ, ಮೃದು- ಮಧುರ ನಡವಳಿಕೆ, ಪ್ರಾಂಜಲಿ ತತ್ವ ನಿಷ್ಠೆ ಶ್ರದ್ಧಾಪೂರ್ಣ ಪರಿಶುದ್ಧ ಉದ್ದೇಶ ಮತ್ತು ಇದೆಲ್ಲಕ್ಕೂ ಮಿಗಿಲಾಗಿ, ನಿಸ್ವಾರ್ಥತೆ ಮುಂತಾದ ಶ್ರೇಷ್ಠ ಗುಣಗಳು ಅವರನ್ನು ಅತ್ಯುತ್ತನ ನೈತಿಕ ನೆಲೆಯ ಮೇಲೆ ನಿಲ್ಲಿಸಿದ್ದವು. ಅವರು ನಿಜವಾಗಿಯೂ ಭಾರತ ಮಾತೆಯ ಮಹಾನ್ ಪುತ್ರರಲ್ಲಿ ಒಬ್ಬರಾಗಿದ್ದರೆಂಬುದು ನಿರ್ವಿವಾದ.

## ರಾಜೇನ್ ಬಾಬು: ಕೆಲವು ಸ್ಮೃತಿ ನೋಟಗಳು

-ಚೌಧರಿ ರಣಧೀರ ಸಿಂಗ್ *

ಪ್ರೀತಿಯಿಂದ ಎಲ್ಲರಿಂದಲೂ ರಾಜೇನ್ ಬಾಬು ಎಂದು ಕರೆಯಲ್ಪಡುತ್ತಿದ್ದ ರಾಜೇಂದ್ರ ಪ್ರಸಾದರು ನಮ್ಮ ಸ್ವಾತಂತ್ರ್ಯ ಚಳುವಳಿಯ ಆಧಾರ ಸ್ಥಂಬಗಳಲ್ಲಿ ಒಬ್ಬರಾಗಿದ್ದರು. ಉತ್ತರ ಬಿಹಾರಿನ ಸಾರಣಾ ಜಿಲ್ಲೆಯ ದೂರದ ಕುಗ್ರಾಮವೊಂದರಲ್ಲಿ ಜನ್ಮತಳೆದರೂ ಅವರು ಭಾರತದ ಪರಮೋನ್ನತ ಹುದ್ದೆಯಾದ ರಾಷ್ಟ್ರಪತಿಯ ಸ್ಥಾನದವರೆಗೆ ಮೇಲೇರಿದ್ದರು. ಅವರು ಏರಿದ ಎತ್ತರ ದಂಗುಬಡಿಸುವಂತಹದ್ದು. ನಿಸ್ವಾರ್ಥ ಸೇವೆ, ಪರಮ ಸಮರ್ಪಣಾ ಭಾವ, ತಾತ್ವಿಕ ನಿಷ್ಠೆ, ಅದ್ಭುತ ಪ್ರತಿಭೆಗಳಂತಹ ಅಸಾಮಾನ್ಯ ಗುಣಗಳಿಂದಾಗಿಯೇ ಅವರು ನಮ್ಮ ಗಣರಾಜ್ಯದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿ, ಸತತ ಎರಡು ಅವಧಿಗಳವರೆಗೆ ಆ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದರು. ವಿನಯ, ಸರಳತೆಯ ಪ್ರತೀಕದಂತಿದ್ದ ಅವರು ಸಭ್ಯತೆಯ ಸಾಕಾರವಾಗಿದ್ದರು.

ರಾಜೇನ್ ಬಾಬು ತಮ್ಮ ಬದುಕಿನ ಅವಧಿಯಲ್ಲಿಯೇ ಒಂದು ಐತಿಹ್ಯವಾಗಿದ್ದರು. ಸ್ವಾತಂತ್ರ್ಯ ಚಳುವಳಿಯ ಉದ್ದಕ್ಕೂ ಅವರು ಅಗ್ರ ಪಂಕ್ತಿಯ ಗಣ್ಯ ನಾಯಕರಾಗಿದ್ದರು. 1917ರ "ಚಂಪಾರಣ ಸತ್ಯಾಗ್ರಹ"ದ ಸಂದರ್ಭದಲ್ಲಿ ಗಾಂಧೀಜಿಯ ಸಂಪರ್ಕಕ್ಕೆ ಬಂದ ಮೇಲೆ ಅವರ ಅತ್ಯಂತ ನೆಚ್ಚಿನ ನೈಜ ಶಿಷ್ಯರಾದರು.

ಅಪಾದ ಪುಸ್ತಕ ಗಾಂಧೀವಾದಿಯಾಗಿದ್ದ ಅವರು ಗಾಂಧೀವಾದಿ ಮೌಲ್ಯಗಳನ್ನು ಬಹು ಜಾಗರೂಕತೆಯಿಂದ ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡಿದ್ದರು. ಬಹುಶಃ ಈ ಕಾರಣದಿಂದಾಗಿಯೇ ತಮ್ಮ ಉಳಿದ ಅನೇಕ ಶಿಷ್ಯರಿಗಿಂತಲೂ ಇವರಲ್ಲಿಯೇ ಗಾಂಧೀಜಿ ತಮ್ಮನ್ನು ತಾವು ಕಾಣುತ್ತಿದ್ದರು. ಗಾಂಧೀಜಿ ಜೈಲಿಗೆ ಹೋಗುವುದಕ್ಕೆ ಮುಂಚೆ, ವಸಾಹತು ಶಾಹಿ ಶೋಷಣೆ ವಿರುದ್ಧ ಸತ್ಯಾಗ್ರಹಕ್ಕಾಗಿ ಜನತೆಯನ್ನು ಸಿದ್ಧಗೊಳಿಸುವ ಹೊಣೆಗಾರಿಕೆಯನ್ನು ರಾಜೇಂದ್ರ ಪ್ರಸಾದರಿಗೆ ವಹಿಸಿಕೊಟ್ಟರು. ಎಲ್ಲಾ ಸಂಕೀರ್ಣ ವಿಷಯಗಳ ಕುರಿತು ವಿಶೇಷವಾಗಿ ಕಾಯ್ದೆ ಮತ್ತು ಸಂವಿಧಾನಕ್ಕೆ ಸಂಬಂಧಿಸಿದ ಸಮಸ್ಯೆಗಳ ಕುರಿತು ಗಾಂಧೀಜಿ ರಾಜೇನ್ ಬಾಬು ಅವರ ಸಲಹೆ ಕೇಳುತ್ತಿದ್ದರು. ಹರಿತವಾದ ಬುದ್ಧಿ ಅಪಾರ ಜಾಣ್ಮೆಯಿಂದ ಹೊರಬರುತ್ತಿದ್ದ ಅವರ ಮಾತು ಅಂತಿಮ ತೀರ್ಮಾನವಾಗಿರುತ್ತಿತ್ತು. ಅಂತೆಯೇ ಗಾಂಧೀಜಿಗೆ ರಾಜೇನ್ ಬಾಬು ಅವರಲ್ಲಿ ಅಪಾರ ವಿಶ್ವಾಸ, ಅತುಲ ನಂಬುಗೆ.

ರಾಜೇನ್ ಬಾಬು ಭಾರತದ ಅನಾದಿಯಿಂದಲೂ ಬಂದ ಅತ್ಯುತ್ತಮ ಮೌಲ್ಯಗಳ ಮೂರ್ತ ರೂಪದಂತಿದ್ದರು. ನಮ್ಮ ಪ್ರಾಚೀನ ಪರಂಪರೆಯಿಂದ ಬಳುವಳಿಯಾಗಿ ಬಂದ ಸೇವೆ ನಿಸ್ವಾರ್ಥತೆ ಮತ್ತು ಸಮರ್ಪಣಾ ಭಾವ ಈ ಮೂರು ಮೂಲಭೂತ ತತ್ವಗಳನ್ನು ಅವರು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡಿದ್ದರು. ಅವರು ಈ ನೈತಿಕ ತತ್ವಗಳನ್ನು ಗಟ್ಟಿಯಾಗಿ ನಂಬುವುದರ ಜೊತೆ-ಜೊತೆಗೆ ಅವುಗಳನ್ನು ತಮ್ಮ ವೈಯಕ್ತಿಕ ಬದುಕಿನಲ್ಲಿ ಆಚರಿಸುತ್ತಿದ್ದರು.

---

* ಚೌಧರಿ ರಣಧೀರ ಸಿಂಗರು ಮಾಜಿ ಸಂಸತ್ಸ ಸದಸ್ಯರು (ಲೋಕಸಭೆ)

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವ ಉದ್ದೇಶದಿಂದ, ತಮಗೆ ಅಪಾರ ಸ್ಥಾನ-ಮಾನ ಧನ- ಕನಕ ತಂದು ಕೊಡಬಹುದಾಗಿದ್ದ ತಮ್ಮ ಲಾಭದಾಯಕ ವಕೀಲಿ ವೃತ್ತಿಗೆ ತಿಲಾಂಜಲಿಯಿತ್ತರು. ಕಟ್ಟಾ ದೇಶಭಕ್ತರಾಗಿದ್ದ ಅವರು ದೇಶಕ್ಕಾಗಿ ಯಾವ ತ್ಯಾಗಕ್ಕೂ ಸದಾ ಸಿದ್ಧರಾಗಿದ್ದರು. ದೇಶದ ಸ್ವಾತಂತ್ರ್ಯದಂತಹ ಮಹಾಕಾರಣಕ್ಕಾಗಿ ಅವರು ತಮ್ಮ ಬದುಕಿನ ಬಹುಮೂಲ್ಯ ಕಾಲವನ್ನೂ ಜೈಲಿನಲ್ಲಿ ಕಳೆದರು. 1930 ರಿಂದ 1945ರ ಅವಧಿಯಲ್ಲಿ ಅವರು ಎಂಟು ವರ್ಷಗಳಿಗೂ ಹೆಚ್ಚು ಕಾಲವನ್ನು ಜೈಲಿನಲ್ಲಿ ಸೇವೆಸಲ್ಲಿಸಿದರು. ಬಡವರ, ತುಳಿತಕ್ಕೊಳಗಾದವರ, ನಿರ್ಲಕ್ಷಕ್ಕೊಳಗಾದವರ ಸೇವೆಯಲ್ಲಿ ಅವರು ಯಾವಾಗಲೂ ಮುಂದಿರುತ್ತಿದ್ದರು. 1934 ಮತ್ತು 1935ರಲ್ಲಿ ಬಿಹಾರ ಮತ್ತು ಕ್ವೆಟ್ಟಾಗಳಲ್ಲಿ ಭಯಂಕರ ಭೂಕಂಪ ಸಂಭವಿಸಿದಾಗ ಸಂತ್ರಸ್ತರಿಗೆ ಅರರು ಸಂಘಟಿಸಿದ ಪರಿಹಾರ ಕಾರ್ಯ ಒಂದು ಆದರ್ಶ-ನಿದರ್ಶನವಾಗಿದೆ.ಅವರ ಸೇವಾ ಮನೋಭಾವ, ಅದನ್ನೂ ಸಂಘಟಿಸುವ ಜಾಣ್ಮೆಯನ್ನು ಕಂಡು ಬ್ರಿಟಿಷ್ ಸರ್ಕಾರವು ನಿಬ್ಬೆರಗಾಗಿತ್ತು. ಅಂತಹ ಸೇವಾಭಾವದ, ಸಮರ್ಪಣೆಯ ನಿಲುವಿನ ಬದುಕು ರಾಜೇಂದ್ರರದ್ದಾಗಿತ್ತು. ಅವರು ತಮ್ಮ ಇಡೀ ಬದುಕನ್ನು ಮಾನವ ಸೇವೆಗೆ ಮೀಸಲಿರಿಸಿದ್ದರು.

ಗಾಂಧೀಜಿ ಸಂಘಟಿಸಿದ್ದ ಸ್ವಾತಂತ್ರ್ಯ ಹೋರಾಟದ ನೇತಾರ ತ್ರಿಮೂರ್ತಿಗಳಲ್ಲಿ ರಾಜೇಂದ್ರ ಪ್ರಸಾದರು ಒಬ್ಬರಾಗಿದ್ದರು. ಉಳಿದಿಬ್ಬರೂ ಪಂಡಿತ ನೆಹರು ಮತ್ತು ಸರದಾರ ಪಟೇಲರು. ಈ ಮೂರು ಜನ ಮಾಹಾತ್ಮಾಜಿಯ ನೈಜ ವಾರಸುದಾರರಾಗಿ ನವಜಾತ ಸ್ವತಂತ್ರ್ಯ ಭಾರತವನ್ನೂ ತುಂಬಾ ಕಾಳಜಿ ಮತ್ತು ಕೌಶಲ್ಯದಿಂದ ಪಾಲಿಸಿ, ಪೋಷಿಸಿದರು. ರಾಜೇನ್ ಬಾಬು ಸರ್ದಾರ್ ಪಟೇಲರ ನಿಕಟ ಸಂಪರ್ಕಕ್ಕೆ ಬಂದದ್ದು 1923 ರ ನಾಗಪೂರ ಧ್ವಜಾ ಸತ್ಯಾಗ್ರಹದ ಸಂದರ್ಭದಲ್ಲಿ ಆಮೇಲೆ ಅವರಿಬ್ಬರಿಗೂ ಲಾರ್ಡ್ ಮೌಂಟ ಬ್ಯಾಟನ್‌ರ ಅಧ್ಯಕ್ಷತೆಯಲ್ಲಿ ರಚಿಸಲಾಗಿದ್ದ ವಿಭಾಜನಾ ಪರಿಷತ್ತಿನಲ್ಲಿ ಕೂಡಿ ಕೆಲಸ ಮಾಡಿದರು. ಭಾರತದ ವಿಭಜನೆಯ ವೇಳೆಯಲ್ಲಿ ಅದಕ್ಕೆ ನ್ಯಾಯೋಚಿತವಾದ ಆಸ್ತಿ-ಪಾಸ್ತಿ ದೊರಕುವಂತೆ ಶ್ರಮಿಸಿದರು.

ರಾಷ್ಟ್ರದ ಅಧ್ಯಕ್ಷರಾಗಿ, ಸರ್ಕಾರದ ಮುಖ್ಯಸ್ಥರಾಗಿದ್ದ ಪಂಡಿತ ಜವಾಹರ ನೆಹರೂ ಅವರೊಂದಿಗೆ ಸ್ಥಾಪಿಸಿದ್ದ ಅನ್ಯೋನ್ಯ ಸಂಬಂಧ ಅವರ ಉತ್ತರಾಧಿಕಾರಿಗಳಿಗೆ ಆದರ್ಶ ಪ್ರಾಯವಾಗಿದೆ, ಅನುಕರಣೀಯವಾಗಿದೆ. ರಾಜೇನ್ ಬಾಬು ಒಬ್ಬ ಅಸಾಮಾನ್ಯ ಲೇಖಕರೂ ಆಗಿದ್ದರು. ಸಾಹಿತ್ಯ ಮತ್ತು ಪತ್ರಿಕೋದ್ಯಮ ಅವರ ಪ್ರತಿಭೆಗೆ ಸಹಜವಾಗಿ ಒದಗಿ ಬಂದ ಬೌದ್ಧಿಕ ಕಸಬುಗಳಾಗಿದ್ದವು. ಅವರ ಗ್ರಂಥ " ಇಂಡಿಯಾ ಡಿವೈಡೆಡ್" ಅವರ ಅಪಾರ ಜ್ಞಾನ, ಅಸ್ಖಲಿತ ಪಾಂಡಿತ್ಯ ಪ್ರತಿಭೆಗೆ, ಸಾಕ್ಷಿಯಾಗಿದೆ. ಹಿಂದೀ ಮತ್ತು ಇಂಗ್ಲೀಷ್ ಎರಡೂ ಭಾಷೆಗಳಲ್ಲಿ ಪ್ರಕಟವಾಗಿರುವ ಅವರ 'ಆತ್ಮಕಥೆ ' ಸ್ವಾತಂತ್ರ್ಯ ಹೋರಾಟದ ದೀರ್ಘ ಕಥೆಯನ್ನು ಚಿತ್ರವತ್ತಾಗಿ, ಸರ್ವಗ್ರಾಫಿಯಾಗಿ ಬಿಂಬಿಸುತ್ತದೆ. ಅವರ ಇನ್ನೊಂದು ಗ್ರಂಥ- 'ಮಹಾತ್ಮರ ಸನ್ನಿಧಿಯಲ್ಲಿ ' ಎಂಬುದು ಅವರ ಗುರುವಿನ ತತ್ವ ಮತ್ತು ಭೋಧನೆಗಳನ್ನು ಚಿತ್ರಿಸುತ್ತದೆ. ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಅವರು ಅನೇಕ ಲೇಖನಗಳನ್ನು ಬರೆದರು. ಹಲವಾರು ಪತ್ರಿಕೆಗಳನ್ನು ಸಂಪಾದಿಸಿ ಪ್ರಕಟಿಸಿದರು. ಈ ಎಲ್ಲದರ ಉದ್ದೇಶ ಒಂದೇ: ಜನಮಾನಸವನ್ನೂ ಪ್ರಭಾವಿಸಿ, ಅವರಲ್ಲಿ 'ಸತ್ಯಾಗ್ರಹ' ಪರವಾದ ಅಭಿಪ್ರಾಯವನ್ನೂ ಕುದುರಿಸಿ ರೂಢಿಸುವುದು.

ರಾಜೇನ್ ಬಾಬು ಎಂದೂ ಸ್ಥಾನ-ಮಾನಕ್ಕಾಗಿ ಆಶೆಪಟ್ಟವರಲ್ಲ. ಆದರೂ ಅನೇಕ ಗೌರವಾದರಗಳು, ಹುದ್ದೆ- ಹಿರಿತನಗಳು. ಅವರನ್ನೂರಾಸಿಕೊಂಡು ಬಂದವು. ಅವುಗಳಲ್ಲಿ ಅತ್ಯಂತ ಮುಖ್ಯವಾದದ್ದೆಂದರೆ, ಸಂವಿಧಾನ ಸಭೆಯ ಅಧ್ಯಕ್ಷತೆ. ಅದನ್ನೂ ನಿರ್ವಹಿಸಿದ ರೀತಿ ರಾಜೇನ್ ಬಾಬು ಅವರ ಮೇರು ಸಾಧನೆಗೆ ಸಾಕ್ಷಿಯಾಗಿದೆ. ತಮ್ಮ ಆಳವಾದ ಜ್ಞಾನ, ಅದನ್ನೂ ಜಾರಿಗೊಳಿಸುವಲ್ಲಿ ತೋರುತ್ತಿದ್ದ ಯುಕ್ತಾಯುಕ್ತ ವಿವೇಕ, ಆಂತರಿಕ ಶಾಂತತೆ ಮುಂತಾದ ಸರ್ವ ಶ್ಲಾಘನೀಯವಾದ ಗುಣಗಳಿಂದ ಆ ಮಹತ್ಕಾರ್ಯವನ್ನೂ ಮಾಡಿ ಮುಗಿಸಿದ ಅವರು, ಸಂವಿಧಾನ ಸಭೆಯ ಪ್ರತಿ ಸದಸ್ಯನಿಗೂ ತೃಪ್ತಿಯಾಗುವಂತೆ ನಡೆದು ಕೊಂಡಿದ್ದರು. ಈ ಅರ್ಥದಲ್ಲಿ ಅವರದೊಂದು 'ಅಜಾತ ಶತ್ರು ' ಬದುಕ ಹೀಗಾಗಿ, ಭಾರತಕ್ಕೆ ಸ್ವಾತಂತ್ರ್ಯ ದೊರೆತ ಮೇಲೆ ಅವರು ಅದರ ಅಧ್ಯಕ್ಷ ಸ್ಥಾನಕ್ಕೆ ಸರ್ವಾನುಮತದಿಂದ ಆಯ್ಕೆಯಾದದ್ದು ಆಶ್ಚರ್ಯದ ಸಂಗತಿಯೇನಲ್ಲ. ಅವಶ್ಯಕವೆನಿಸಿದ್ದಾಗಲ್ಲೆಲಾ ಅವರು ತಮ್ಮ ಅಧಿಕಾರವನ್ನು ಬಳಸಿ ಸರ್ಕಾರದ ಧ್ಯೇಯ ಧೋರಣೆಯ ಮೇಲೆ ತಮ್ಮ ಪ್ರಭಾವ ಬೀರಲು ಹಿಂಜರಿಯುತ್ತಿರಲಿಲ್ಲ. ಅಂತೆಯೇ ಅದರ ಕ್ರಿಯೆ, ಕಾರ್ಯಗಳನ್ನು ತಿದ್ದಿ ಆಗಾಗ ಪುನರ್ ರೂಪಿಸಿದ್ದೂ ಉಂಟು.

ರಾಜೇನ್ ಬಾಬು ಭಾರತದ ಪ್ರಥಮ ರಾಷ್ಟ್ರಪತಿಯಾಗಿ ಆ ಪರಮೋನ್ನತ ಹುದ್ದೆಗೆ ಘನತೆ ಗೌರವವನ್ನು ತಂದು ಕೊಟ್ಟಿದ್ದಾರೆ; ಸ್ವತಂತ್ರ್ಯ ಭಾರತದ ಪ್ರಥಮ ಪ್ರಧಾನಿಯಾಗಿದ್ದ ಪಂಡಿತ ಜವಾಹರ ಲಾಲ್ ನೆಹರೂ ಅವರ ಜೊತೆಗೊಂಡು ನಮ್ಮ ಸಂಸದೀಯ ರಾಜಕೀಯ ವ್ಯವಸ್ಥೆಯಲ್ಲಿ ಅನೇಕ ಅತ್ಯುತ್ತಮ ಗುಣಗಳ ಬೀಜಗಳನ್ನೂ ಬಿತ್ತಿದ್ದಾರೆ; ಸಂಸದೀಯ ರಾಜ ಕಾರಣದ ಅನೇಕ ಮಾದರಿಗಳನ್ನೂ ಸೃಷ್ಟಿಸಿದ್ದಾರೆ; ಹಲವಾರು ಸಂಪ್ರದಾಯ ಪರಂಪರೆಗಳನ್ನೂ ಪ್ರತಿಷ್ಠಾಪಿಸಿದ್ದಾರೆ. ಇಂದು ಭಾರತದಲ್ಲಿ ಯಶಸ್ವಿಯಾಗಿ ಸ್ಥಾಯಿಗೊಂಡಿರುವ ಪ್ರಜಾ ತಾಂತ್ರಿಕ ವ್ಯವಸ್ಥೆಯನ್ನೂ ರೂಢಿಸಿದ ಕೀರ್ತಿ ಅಂಶಿಕವಾಗಿಯಾದರೂ ಡಾ|| ರಾಜೇಂದ್ರ ಪ್ರಸಾದರಂತಹ ಮುತ್ಸದ್ದಿತನದ ನಾಯಕರಿಗೆ ಸಲ್ಲಬೇಕು. ದೇಶ ಬಿಕ್ಕಟ್ಟಿನ ಸ್ಥಿತಿಯಲ್ಲಿದ್ದಾಗ, ಅದು ಇನ್ನೂ ಒಂದು ನಿರ್ದಿಷ್ಟವಾದ ರೂಪ ಪಡೆಯದೆ ಇದ್ದಾಗ ಅದರ ಚುಕ್ಕಾಣಿಯನ್ನು ಹಿಡಿದು, ಬಿರುಗಾಳಿಗೆ ಎದುರಾಗಿ, ಧೃತಿಗೆಡದೆ ನಡೆಸಿ ದಡ ಮುಟ್ಟಿಸಿದ ಕೀರ್ತಿ ರಾಜೇನ್ ಬಾಬು ಅಂತಹವರಿಗೇ ಸಲ್ಲಬೇಕು.

## ಡಾ॥ ರಾಜೇಂದ್ರ ಪ್ರಸಾದ ಮತ್ತು ಭಾರತದ ಅಧ್ಯಕ್ಷತೆ

-ಸೋಮನಾಥ ರಥ್ *

ಭಾರತ ಗಣರಾಜ್ಯದ ಪ್ರಥಮ ರಾಷ್ಟ್ರಪ್ರತಿಗಳಾಗಿದ್ದ ಡಾ॥ ರಾಜೇಂದ್ರ ಪ್ರಸಾದರು ಗಾಂಧೀ ಯುಗದ ಕೊನೆಯ ಕಟ್ಟಾಳುಗಳಲ್ಲಿ ಒಬ್ಬರಾಗಿದ್ದರು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಅವರು ನೀಡಿದ ಕಾಣಿಕೆ ಅದ್ವಿತೀಯವಾದ್ದು. ಭಾರತ ಸ್ವತಂತ್ರವಾದಾಗ ಅದರ ಅತ್ಯುನ್ನತ ಹುದ್ದೆಗೆ ಸಹಜವಾಗಿಯೇ ಆಯ್ಕೆಯಾದವರು ಡಾ॥ ರಾಜೇನ್ ಬಾಬು. ಅವರ ರಾಜಕೀಯ ಪ್ರೌಢಿಮೆ, ಪಾಂಡಿತ್ಯ, ಸಮಚಿತ್ತತೆಯ ನಿಲುವು, ನ್ಯಾಯ ನಿಷ್ಠೆ ಮುಂತಾದ ವಿರಳ ಗುಣಗಳು ಸಂವಿಧಾನ ಸಭೆಯಲ್ಲಿ ಅವರಿಗೆ ಗೌರವಾರ್ಹತೆಯ ಸ್ಥಾನ ದೊರಕಿಸಿಕೊಟ್ಟಿದ್ದವು. ಅದರ ಅಧ್ಯಕ್ಷರಾಗಿ ಎಲ್ಲಾ ಕಲಾಪಗಳನ್ನೂ ಸಮಭಾವದಿಂದ ನಡೆಸಿಕೊಟ್ಟ ಅವರ ನಡವಳಿಕೆ ಆದರ್ಶವೂ ಅನುಕರಣೀಯವೂ ಆಗಿತ್ತು.

26 ನೇ ಜನವರಿ, 1952 ರಂದು ಭಾರತದ ರಾಷ್ಟ್ರಪತಿಗಳಾಗಿ ಚುನಾಯಿತರಾದ ಡಾ॥ ಪ್ರಸಾದರು 1962ರವರೆಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸಿದರು. ಅಂದರೆ ಸತತವಾಗಿ ಎರಡು ಅವಧಿಗಳವರೆಗೆ ಅವರು ಆ ಸ್ಥಾನವನ್ನು ಅಲಂಕರಿಸಿದ್ದರು. ಅವರಿಗೆ ರಾಜಕೀಯ ಆಕಾಂಕ್ಷೆಗಳೇ ಇರಲಿಲ್ಲವೆಂಬುವುದು ಅವರ ವ್ಯಕ್ತಿತ್ವದ ಉತ್ತಮಾಂಶಗಳಲ್ಲಿ ಒಂದು. ಅವರು ಅಧಿಕಾರಕ್ಕಾಗಿ ಅಪೇಕ್ಷಿಸಿದಕ್ಕೆ ಒಂದೆ ಒಂದು ಪುರಾವೆಯೂ ದೊರೆಯದು.

ಡಾ॥ ಪ್ರಸಾದರು ಸಂವಿಧಾನ ಸಭೆಯ ಚರ್ಚೆಗಳಲ್ಲಿ ಕ್ರಿಯಾಶೀಲರಾಗಿ ಪಾಲ್ಗೊಳ್ಳುತ್ತಿದ್ದರು. ರಾಷ್ಟ್ರಪತಿಯ ಅಧಿಕಾರಕ್ಕೆ ಸಂಬಂಧಿಸಿ ಅವರು ಅನೇಕ ಪ್ರಶ್ನೆಗಳನ್ನು ಎತ್ತಿದ್ದರು. ಭಾರತದ ಸಂವಿಧಾನದ ಅಡಿಯಲ್ಲಿ ರಾಷ್ಟ್ರಪತಿಯ ಸ್ಥಾನ ಮತ್ತು ಅಧಿಕಾರದ ವ್ಯಾಪ್ತಿಯನ್ನು ಕುರಿತು ನಡೆದ ಚರ್ಚೆಗಳಲ್ಲಿ ಅವರು ವಿಶೇಷ ಕಾಳಜಿ ತೋರುತ್ತಿದ್ದರು. ಅವರು, ಸಂವಿಧಾನದ ಕರಡು ರಚನಾ ಸಮಿತಿಯ ಅಧ್ಯಕ್ಷರಾಗಿದ್ದ ಡಾ॥ ಅಂಬೇಡ್ಕರರಿಗೆ ಒಮ್ಮೆ ಕೇಳಿದ ಪ್ರಶ್ನೆ : "ರಾಷ್ಟ್ರಪತಿಯು ಮಂತ್ರಿಗಳ ಸಲಹೆಗನುಗುಣವಾಗಿ ನಡೆದುಕೊಳ್ಳುವಂತೆ ಅವರನ್ನು ನಿರ್ಬಂಧಿಸುವ ವಿಧಿ ಕರಡು ಸಂವಿಧಾನದಲ್ಲಿ ಇದೆಯೇ? ಇದು ರಾಷ್ಟ್ರಪತಿಯ ಅಧಿಕಾರ ವ್ಯಾಪ್ತಿಯ ಕುರಿತು ಅವರಿಗಿದ್ದ ಕಾಳಜಿಯನ್ನು ಸೂಚಿಸುತ್ತದೆ.ಅದಕ್ಕೆ ಡಾ॥ ಅಂಬೇಡ್ಕರರು ಉತ್ತರಿಸಿದರು:"ಆ ವಿಧಿ ಸಂವಿಧಾನದಲ್ಲಿ ಖಚಿತವಾಗಿಯೂ ಇದೆ. ಆ ವಿಧಿಗನುಗುಣವಾಗಿಯೇ ಒಂದು ಮಂತ್ರಿ ಮಂಡಲವಿರುತ್ತದೆ. ಆ ಮಂತ್ರಿ ಮಂಡಲದ ಸಹಾಯ ಸಲಹೆ ಮೇರೆಗೇ ರಾಷ್ಟ್ರಪತಿ ತಮ್ಮ ಅಧಿಕಾರವನ್ನು ಚಲಾಯಿಸಿ ಕಾರ್ಯ ಜರುಗಿಸುತ್ತಾರೆ." ಆದರೆ ಡಾ॥ ಪ್ರಸಾದರಿಗೆ ಅದರಿಂದ ತೃಪ್ತಿಯಾಗಲಿಲ್ಲ. ಅವರು ಇನ್ನೂ ದೃಢವಾಗಿ ಹೇಳಿದರು:"ನಾವು ಒಂದು ಲಿಖಿತ ಸಂವಿಧಾನವನ್ನು ರಚಿಸುತ್ತಿದ್ದೇವೆ. ಆದ್ದರಿಂದ ಎಲ್ಲಿಯಾದರೂ ಒಂದು ಕಡೆ ಈ ಕುರಿತು ಸ್ಪಷ್ಟವಾಗಿ ನಿರೂಪಿಸುವುದು ಅವಶ್ಯಕವಾಗಿದೆ." ರಾಷ್ಟ್ರಪತಿಯ ಅಧಿಕಾರ ವ್ಯಾಪ್ತಿಯ ಕುರಿತು ಸ್ಪಷ್ಟವಾದ ನಿರೂಪಣೆ ಮಂಡಿಸಲಾಗದಿದ್ದುದಕ್ಕೆ ಅವರು ಆ ಕುರಿತು ತಮ್ಮ ಕಾಳಜಿಯನ್ನು ಆಗಾಗ ವ್ಯಕ್ತ ಮಾಡುತ್ತಲೇ ಇದ್ದರು.

* ಶ್ರೀ ರಥ್ ಅವರು ಕೇಂದ್ರದ ಮಾಜಿ ಮಂತ್ರಿಗಳು.

ಅವರು ಒಂದು ಸಾರ್ವಜನಿಕ ಭಾಷಣದಲ್ಲಿ ಈ ಬಗ್ಗೆ ಪ್ರಸ್ತಾಪಿಸಿ, ರಾಷ್ಟ್ರಪತಿಯ ಅಧಿಕಾರ ಕುರಿತು ಸ್ಪಷ್ಟವಾಗಿ ನಿರೂಪಿಸುವ ಅವಶ್ಯಕತೆ ಇದೆಯೆಂದು ಹೇಳಿದರು. ಅವರ ದೃಷ್ಟಿಯಲ್ಲಿ ಭಾರತದ ಚುನಾಯಿತ ರಾಷ್ಟ್ರಪತಿಯನ್ನು ಬ್ರಿಟಿಷ್ ಅಧಿಪತ್ಯದ ಅನುವಂಶಿಕ ಮುಖ್ಯಸ್ಥನಿಗೆ ಸಮಗೊಳಿಸಬಾರದೆಂದೂ ಆದರೆ ಸಂವಿಧಾನದಲ್ಲಿ ಹಾಗೆ ಮಾಡಲಾಗಿದೆ ಎಂದೂ ಹೇಳಿದರು. ಈ ಬಗ್ಗೆ ಅವರು ಆಡಿದ ಮಾತುಗಳು ಇವು:

"ನನಗೆ ಗೊತ್ತಿದ್ದ ಮಟ್ಟಿಗೆ ಸಂವಿಧಾನದಲ್ಲಿ ರಾಷ್ಟ್ರಪತಿಯು ಮಂತ್ರಿಗಳ ಸಲಹೆ ಸೂಚನೆಗಳನ್ನು ಅಂಗೀಕರಿಸುವಂತೆ ನಿರ್ಬಂಧಿಸುವ ಯಾವುದೇ ವಿಶೇಷ ವಿಧಿಗಳೇನೂ ಇಲ್ಲ. ಆದರೂ, ಇಂಗ್ಲೆಂಡಿನ ರಾಜನು ಮಂತ್ರಿಗಳ ಸಲಹೆಗಳಿಗನುಗುಣವಾಗಿಯೇ ವರ್ತಿಸುವ ಸಂಪ್ರದಾಯವಿದೆ. ಅಂತಹ ಸಂಪ್ರದಾಯ ಇಲ್ಲಿಯೂ ಕ್ರಮೇಣ ಸಂಸ್ಥಾಪನೆಗೊಳ್ಳುವುದೆಂಬ ಭರವಸೆ ನನಗಿದೆ. ಸಂವಿಧಾನದಲ್ಲಿ ಲಿಖಿತ ರೂಪದಲ್ಲಿರುವ ಶಬ್ದಗಳಿಗನುಗುಣವಾಗಿಯಲ್ಲೂ ಅದಕ್ಕೆ ಪ್ರತಿಯಾಗಿ, ಒಂದೊಂದು ಆರೋಗ್ಯಕರ ಸಂಪ್ರದಾಯಕ್ಕನುಗುಣವಾಗಿ, ರಾಷ್ಟ್ರಪತಿಯ ನಡೆದುಕೊಳ್ಳಬೇಕಾದ ಸ್ಥಿತಿ ಸ್ಥಾಪಿತವಾಗಬಹುದೆಂದು ಆಶಿಸಲಾಗಿದೆ."

ಭಾರತದ ಸಂವಿಧಾನದಲ್ಲಿ ರಾಷ್ಟ್ರಪತಿಯ ಸ್ಥಾನಮಾನ ಕುರಿತು ಪ್ರಥಮ ರಾಷ್ಟ್ರಾಧ್ಯಕ್ಷರೇ ಸಾಕಷ್ಟು ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರು ರಾಷ್ಟ್ರಪತಿಯ ಅಧಿಕಾರ ಸ್ವೀಕರಿಸಿದ ಎರಡು ತಿಂಗಳೊಳಗಾಗಿಯೇ ರಾಷ್ಟ್ರದ ಮುಖ್ಯಸ್ಥರಾಗಿ ಅವರ ವಾಸ್ತವ ಅಧಿಕಾರ ವ್ಯಾಪ್ತಿಯ ಕುರಿತು ಅವರಿಗೆ ಚಿಂತೆಗಿಟ್ಟಕೊಂಡಿತು. ತಮ್ಮ ಉನ್ನತ ಸ್ಥಾನದ ಪರಿಣಾಮವಾಗಿ, ಅವರು ರಾಷ್ಟ್ರದ ಕ್ರಿಯಾಶೀಲ ರಾಜಕಾರಣದಿಂದ ದೂರವುಳಿಯಬೇಕಾದ ಅವಶ್ಯಕತೆಯುಂಟಾಯಿತು. ರಾಜಕೀಯದಲ್ಲಿ ಸಕ್ರಿಯ ಪಾತ್ರ ಬಹುದೀರ್ಘ ಕಾಲದವರೆಗೆ ಅವರ ಬದುಕಿನ ಜೀವ ಜೀವಾಳವಾಗಿತ್ತು.

ಯಾವೊಬ್ಬ ಅಧ್ಯಕ್ಷರೆ, ಬಯಸಬಹುದಾಗಿದ್ದ ಘನತೆ, ಗೌರವ, ಸ್ಥಾನ, ಮಾನ ಎಲ್ಲವೂ ಅವರಿಗೆ ಲಭಿಸಿದ್ದವು. ಆದರೆ ಅವರಿಗೆ ಅಧಿಕಾರವಿರಲಿಲ್ಲ. ಅವರು ಒಮ್ಮೆ ಅತ್ಯಂತ ರೋಚಕವಾದ ಮಾತೊಂದನ್ನು ಹೇಳಿದರು:"ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ತಾವು ಬ್ರಿಟಿಷರಿಂದ ಜೇಲಿಗಟ್ಟಲ್ಪಟ್ಟಿದರೆ, ಸ್ವಾತಂತ್ರ್ಯಾನಂತರ ತಮ್ಮ ಜನರಿಂದಲೇ ಇನ್ನೊಂದು ವಿಧದ ಜೈಲಿನಲ್ಲಿ ಕಾಲ ಕಳೆಯಬೇಕಾದ ಪರಿಸ್ಥಿತಿ ಬಂದಿದೆ. ಬದಲಾಗಿರುವುದು ಜೈಲು ಮಾತ್ರ"

1950ರ ಮಾರ್ಚನಲ್ಲಿ ಭಾರತ ಗಣರಾಜ್ಯದ ರಾಷ್ಟ್ರಪತಿಗಳಾಗಿ ಅಂದಿನ ಪ್ರಧಾನ ಮಂತ್ರಿ ನೆಹರೂಜಿಗೆ ತುಂಬ ಜಾಗರೂಕತೆಯಿಂದ ಆಯ್ದ ಶಬ್ದಗಳ ಒಂದು ಧೀರ್ಘ ಟಿಪ್ಪಣಿಯನ್ನು ಕಳಿಸಿದ್ದರು. ಆ ಟಿಪ್ಪಣಿಯಲ್ಲಿ ಭಾರತದ ರಾಷ್ಟ್ರಪತಿಯ ಸಂವಿಧಾನಿಕ ಸ್ಥಾನ, ಅವರ ಕರ್ತವ್ಯಗಳು, ಅಧಿಕಾರದ ವ್ಯಾಪ್ತಿ ಮುಂತಾದ ವಿಷಯಗಳ ಕುರಿತು ತಮ್ಮ ಸಮಗ್ರ ಸಂಶಯವನ್ನು ವ್ಯಕ್ತ ಮಾಡಿದ್ದರು. ಪ್ರಧಾನ ಮಂತ್ರಿಗಳು ಆ ಟಿಪ್ಪಣಿಯನ್ನು ಆಗ ಅಟಾರ್ನಿ ಜನರಲ್‌ರಾಗಿದ್ದ ಶ್ರೀ ಎಂ.ಸಿ. ಸೆತಳವಾಡ ಅವರಿಗೆ ಕಳಿಸಿ, ಅವರ ಕಾನೂನು ಸಲಹೆಯನ್ನು ಕೇಳಿದರು. ಅಟಾನಿ ಜನರಲ್ 1950 ರ ಅಕ್ಟೋಬರ್‌ನಲ್ಲಿ ಸುದೀರ್ಘವಾದ ಒಂದು ಮೆಮೊರ್ಯಾಂಡಮನ್ನು ಸಾದರಪಡಿಸಿ ಅದರಲ್ಲಿ ರಾಷ್ಟ್ರಾಧ್ಯಕ್ಷರ ಸ್ಥಾನ ಮತ್ತು ಅಧಿಕಾರ ವ್ಯಾಪ್ತಿಯ ಕುರಿತು ನಿಚ್ಚಳವಾಗಿ

ವಿವರಿಸಿದ್ದರು. ಬ್ರಿಟನ್ನಿನ ರಾಜರಂತೆ ನಮ್ಮ ಅಧ್ಯಕ್ಷರೂ ಹೆಚ್ಚು ಕಡಿಮೆ ಅಷ್ಟೇ ಅಧಿಕಾರ ವ್ಯಾಪ್ತಿಯನ್ನು ಹೊಂದಿದ್ದು, ರಾಷ್ಟ್ರದ ಸಂವಿಧಾನಿಕ ಮುಖ್ಯಸ್ಥರಾಗಿರುತ್ತಾರೆ. ಬ್ರಿಟಿಷ್ ರಾಜನಿಗಿದ್ದ ಹಕ್ಕುಗಳೆಂದರೆ, ಸರ್ಕಾರಕ್ಕೆ ಸಲಹೆ ಸೂಚನೆಗಳನ್ನು ಕೊಡುವುದು, ಎಚ್ಚರಿಕೆ ಕೊಡುವುದು ಮತ್ತು ಸೂಕ್ತ ಸಂದರ್ಭದಲ್ಲಿ ಸರ್ಕಾರದ ಚಟುವಟಿಕೆಗಳನ್ನು ಉತ್ತೇಜಿಸುವುದು. ಇದಕ್ಕಿಂತ ಹೆಚ್ಚಿನ ಯಾವ ಅಧಿಕಾರವೂ ಬ್ರಿಟಿಷ್ ರಾಜನಿಗಿಲ್ಲ. ಈ ಎಲ್ಲ ಸೂಕ್ಷ್ಮ ಸಂಗತಿಗಳನ್ನು ಹೇಗೆ ನಿಭಾಯಿಸುವುದು ಎಂಬುದು ರಾಷ್ಟ್ರಪತಿ ಮತ್ತು ಪ್ರಧಾನ ಮಂತ್ರಿಗಳ ನಡುವಿನ ವೈಯಕ್ತಿಕ ಸಂಬಂಧದ ಸ್ವರೂಪವನ್ನವಲಂಬಿಸಿದೆ. ಈ ವಿಷಯದಲ್ಲಿ ನೆಹರೂ ಮತ್ತು ರಾಜೇಂದ್ರ ಪ್ರಸಾದರು ತಮಗೆ ಸಾಧ್ಯವಿದ್ದ ಅತ್ಯುತ್ತಮವಾದುದ್ದನ್ನೇ ಸಾಧಿಸಿದ್ದಾರೆ. ಅವರ ಸದ್ವಿವೇಕ ಸಹಿತ ನ್ಯಾಯ ದೃಷ್ಟಿ ನಿರ್ದುಷ್ಟವಾದದ್ದನ್ನೇ ಎತ್ತಿ ಹಿಡಿದಿದೆ.

ಅವರು ಪರಸ್ಪರರ ವ್ಯಕ್ತಿತ್ವ, ಪಾರದರ್ಶಕ ಪ್ರಾಮಾಣಿಕತೆ, ಮುಂತಾದ ಸನ್ನಡತೆಯ ಸಾತ್ವಿಕಾಂಶಗಳ ಬಗ್ಗೆ ಅಪಾರ ಗೌರವ ತೋರುತ್ತಿದ್ದರು. ಡಾ॥ ಪ್ರಸಾದರು ರಾಷ್ಟ್ರಪತಿಯಾಗಿ ತಮ್ಮತನವನ್ನು ಒತ್ತಿ ಹೇಳುವಲ್ಲಿ ಯಾವುದೇ ಹಾನಿಯಿಲ್ಲವೆಂಬುದನ್ನು ಮನಗಂಡಿದ್ದರು. ವಿಶೇಷವಾಗಿ, ಸಂವಿಧಾನ ಅವರಿಗೆ ನೀಡಿದ ಅಧಿಕಾರವನ್ನು ಚಲಾಯಿಸುವಲ್ಲಿ ಅವರೆಂದೂ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಉದಾಹರಣೆಗೆ: ರಾಜ್ಯಪಾಲರು, ರಾಜದೂತರನ್ನೊಳಗೊಂಡಂತೆ ಉನ್ನತ ಮಟ್ಟದ ನೇಮಕಾತಿಗಳ ಸಂದರ್ಭದಲ್ಲಿ ತಮ್ಮನ್ನು ಅಲಕ್ಷಿಸಲಾಗುತ್ತಿದೆ ಎನಿಸಿದಾಗಲೆಲ್ಲ ಅವರು ಅಂಥ ಪ್ರಕ್ರಿಯೆಗಳ ಬಗ್ಗೆ ಪ್ರತಿಭಟಿಸಿದ್ದೂ ಇದೆ. ಅವರು ಯಾವುದೇ ಹಿಂಜರಿತವಿಲ್ಲದೆ ನೇರವಾದ ಶಬ್ದಗಳಲ್ಲಿ ನೆಹರೂಜಿಗೆ ಹೀಗೆ ಬರೆದಿದ್ದರು: "ನೀವು ಕೆಟ್ಟ ಸಂಪ್ರದಾಯಗಳಿಗೆ ಬುನಾದಿ ಹಾಕುತ್ತಿದ್ದೀರಿ. ನಿಮ್ಮನ್ನು ಸೇರದ ರಾಷ್ಟ್ರಪತಿಯೊಬ್ಬರಿದ್ದರೆ, ಅವರು ನಿಮಗೆ ಸಾಕಷ್ಟು ತೊಂದರೆ ಕೊಡಬಹುದಾಗಿತ್ತು." ಆ ಕುರಿತು ಸಂಪುಟದಲ್ಲಿ ಚರ್ಚೆಯಾಗಿ ಅಂತಿಮವಾಗಿ, ಉನ್ನತ ನೇಮಕಾತಿಯ ಫೈಲುಗಳನ್ನು ರಾಷ್ಟ್ರಪತಿಗಳಿಗೆ ಸಾದರಪಡಿಸಿ, ಅವರ ಅನುಮೋದನೆಯ ಮೇರೆಗೇ ಕ್ರಮ ಕೈಗೊಳ್ಳಬೇಕೆಂದು ತೀರ್ಮಾನಿಸಲಾಯಿತು. ತಮಗೆ ಸರಿಯೆನಿಸಿದಾಗಲೆಲ್ಲ ಡಾ॥ ಪ್ರಸಾದರು ಸರಕಾರಕ್ಕೆ ಎಚ್ಚರಿಕೆ ನೀಡುವ ತಮ್ಮ ಸಂವಿಧಾನಿಕ ಕರ್ತವ್ಯದಲ್ಲಿ ಎಂದೂ ಹಿಂದೆ ಬೀಳಲಿಲ್ಲ. ಅವಶ್ಯವೆನಿಸಿದಾಗಲೆಲ್ಲ ಅವರು ಸಕಾಲಿಕ ಕ್ರಮ ಕೈಗೊಳ್ಳುತ್ತಿದ್ದರು.

ಹಿಂದೂ ಕೋಡ್ ಬಿಲ್ ಕುರಿತು ಡಾ॥ ರಾಜೇಂದ್ರ ಪ್ರಸಾದರು ವ್ಯಕ್ತಮಾಡಿರುವ ಅನಿಸಿಕೆಗಳು ವಿಶೇಷ ದಾಖಲೆಗೆ ಅರ್ಹವಾಗಿವೆ. 1951ರ ಸೆಪ್ಟಂಬರ್ 15 ರಂದು ಅವರು ಪ್ರಧಾನ ಮಂತ್ರಿಗಳಿಗೆ ಬರೆದಿದ್ದರು:

> "ನಾನು ಈ ಸಧ್ಯದ ಹುದ್ದೆಗೆ ಆಯ್ಕೆಯಾಗುವ ಮುಂಚೆ ನನಗೆ ಹೆಚ್ಚಿನ ಸ್ವಾತಂತ್ರ್ಯವಿದ್ದಾಗ ಹಿಂದೂ ಕೋಡ್‌ಬಿಲ್ ಕುರಿತು ನಾನು ಸಾರ್ವಜನಿಕವಾಗಿ ವ್ಯಕ್ತ ಮಾಡಿದ ಅಭಿಪ್ರಾಯಗಳು ತಮಗೆ ಗೊತ್ತಿರಲು ಸಾಕು. ನಾನು ಚುನಾಯಿತನಾದ ಮೇಲೆ ಈ ಕುರಿತು ಹೇಳಲು ನನಗೆ ಯಾವುದೇ ಸಂದರ್ಭ ಕೂಡಿ ಬಂದಿಲ್ಲ. ಈ ವಿಷಯ ಹೆಚ್ಚಾಗಿ ಅಕಾಡೆಮಿಕ್ ಸ್ವರೂಪದ್ದು ಎಂಬ ಕಾರಣಕ್ಕಾಗಿ ಅಲ್ಲ; ಬದಲಾಗಿ, ಇಂಥ ತುಂಬ ವಿವಾದಾತ್ಮಕ

ವಿಷಯವನ್ನು ಚರ್ಚೆಗೆ ಎತ್ತಿಕೊಳ್ಳುವುದು ಅನಾವಶ್ಯಕವೆಂದು ಭಾವಿಸಿರುವುದರಿಂದ ನಾನು ಸಾಧ್ಯವಿದ್ದ ಮಟ್ಟಿಗೆ ಅದಕ್ಕೆ ಕೈ ಹಾಕಲಿಲ್ಲ. ಈಗ ಸಂಸತ್ತು ಆ ಕುರಿತು ಚರ್ಚಿಸಿ ಅದಕ್ಕೆ ಸಂಬಂಧಿಸಿದ ವಿಧೇಯಕವನ್ನು ಪಾಸು ಮಾಡುವ ಭರದಲ್ಲಿದೆ. ಆದ್ದರಿಂದ ನನ್ನ ವಿಚಾರಗಳನ್ನು ನಿಮ್ಮ ಮತ್ತು ಸಚಿವ ಸಂಪುಟದ ಗಮನಕ್ಕೆ ತರುವುದು ನನ್ನ ಕರ್ತವ್ಯವೆಂದು ಭಾವಿಸುತ್ತಿದ್ದೇನೆ. ಆಮೇಲೆ ಸಚಿವ ಸಂಪುಟಕ್ಕೆ ನನ್ನ ಅಭಿಪ್ರಾಯಗಳಿಂದ ಆಶ್ಚರ್ಯವಾಗಬಾರದು. ಅಂತೆಯೇ ನಿಮ್ಮೊಂದಿಗೆ ಮೂರು ದಿನಗಳ ಹಿಂದಿನ ಸಂದರ್ಶನದಲ್ಲಿ ನಾನು ವ್ಯಕ್ತ ಮಾಡಿದ ವಿಚಾರಗಳನ್ನೇ ನಿಮ್ಮ ಮತ್ತು ಸಚಿವ ಸಂಪುಟದ ಅವಗಾಹನೆಗಾಗಿ ರವಾನಿಸುತ್ತಿದ್ದೇನೆ."

ತಮ್ಮ ಟಿಪ್ಪಣಿಯಲ್ಲಿ ಅವರು ಹಿಂದೂ ಕೋಡ್ ಬಿಲ್‌ನ ಎರಡನೇ ಭಾಗಕ್ಕೆ ತಮ್ಮ ಆಕ್ಷೇಪಣೆಯನ್ನು ವ್ಯಕ್ತ ಮಾಡಿದ್ದರು. ವಿಶೇಷವಾಗಿ, ಸಾರ್ವತ್ರಿಕ ಚುನಾವಣೆಗಳಿಗೆ ಮುಂಚೆ ಹಿಂದೂ ಉತ್ತರಾಧಿಕಾರಕ್ಕೆ ಸಂಬಂಧಿಸಿದ ವಿಧೇಯಕವನ್ನು ಪಾಸು ಮಾಡುವುದಕ್ಕೆ ತಮ್ಮ ವಿರೋಧವನ್ನು ವ್ಯಕ್ತಿಪಡಿಸಿದ್ದರು.

ಆಮೇಲೆ ಪ್ರಧಾನ ಮಂತ್ರಿಗಳು ಈ ವಿಷಯ ಕುರಿತು ಅಂದಿನ ಅಟಾರ್ನಿ ಜನರಲ್ ಆಗಿದ್ದ ಶ್ರೀ ಎಂ.ಸಿ. ಸೆತಲ್‌ವಾಡ್ ಮತ್ತು ಗಣ್ಯ ನ್ಯಾಯವಾದಿಗಳೂ ಸಂವಿಧಾನಿಕ ಕಾಯ್ದೆಯ ಮೇಲೆ ಅಧಿಕಾರವಾಣಿಯಿಂದ ಮಾತನಾಡಬಲ್ಲ ಕಾನೂನು ತಜ್ಞರಾಗಿದ್ದ ಅಲ್ಲಾದಿ ಕೃಷ್ಣಸ್ವಾಮಿ ಅಯ್ಯರ್ ಅವರ ಅಭಿಪ್ರಾಯವನ್ನು ಕೇಳಿದರು. ಡಾ|| ಪ್ರಸಾದರು ತಳೆದಿದ್ದ ನಿಲುವಿನ ಬಗ್ಗೆ ಅಟಾರ್ನಿ ಜನರಲ್ ಕೆಲವು ಆಕ್ಷೇಪಣೆಗಳನ್ನು ಅಭಿವ್ಯಕ್ತಿಸಿದ್ದರಿಂದ ಆ ವಿವಾದ ಅಲ್ಲಿಗೇ ಕೊನೆಗೊಂಡಿತು.

ರಾಷ್ಟ್ರಪತಿಗಳಾಗಿ ತಾವು ಕೇವಲ ಅಲಂಕಾರಿಕ ಹುದ್ದೆಯವರಲ್ಲಾಯೆಂಬುದು ಡಾ|| ಪ್ರಸಾದರಿಗೆ ಮನದಟ್ಟಾಗಿತ್ತು. ಆದರೆ ಅವರ ಯಾವುದೇ ಅಭಿಪ್ರಾಯ ಅವರ ವೈಯಕ್ತಿಕ ಬೇಕು ಬೇಡಗಳ ಪ್ರಭಾವಕ್ಕೊಳಗಾಗದಂತೆ ಸದಾ ಎಚ್ಚರಿಕೆ ವಹಿಸುತ್ತಿದ್ದುದರ ಕೀರ್ತಿ ಅವರಿಗೇ ಸಲ್ಲಬೇಕು. ತೀಕ್ಷ್ಣಮತಿ, ಆಳವಾದ ಕಾಯ್ದೆಯ ಜ್ಞಾನ ಮುಂತಾದ ಇತ್ಯಾತ್ಮಕ ಸಂಗತಿಗಳಿಂದೊಡಗೂಡಿದ ಅವರ ಘನ ಗಂಭೀರ ನಡವಳಿಕೆ, ರಾಷ್ಟದ ಅತ್ಯುನ್ನತ ಹುದ್ದೆಗೆ ಯಥೋಚಿತವಾಗಿತ್ತು. ವಿ.ಪಿ. ಮೆನನ್ ಅವರ ಪ್ರಕಾರ ಭಾರತದ ರಾಜಕೀಯ ಕ್ಷೇತ್ರದಲ್ಲಿ ಕಾಣಿಸಿಕೊಂಡ ಗಣ್ಯವ್ಯಕ್ತಿಗಳಲ್ಲಿ ಡಾ|| ರಾಜೇಂದ್ರ ಪ್ರಸಾದರದ್ದು ನಿಸ್ಸಂಶಯವಾಗಿಯೂ ಎದ್ದು ಕಾಣುವಂಥ ವ್ಯಕ್ತಿತ್ವವಾಗಿತ್ತು. ರಾಜೇನ್ ಬಾಬು ರಾಷ್ಟದ ಅತ್ಯುನ್ನತ ಹುದ್ದೆಯನ್ನು ಅಲಂಕರಿಸಿದ್ದಷ್ಟೇ ಅಲ್ಲ, ಅವರು ನಮ್ಮ ರಾಷ್ಟ್ರೀಯ ಆಂದೋಲನದ ಸಾಕಾರ ರೂಪವಾಗಿ ಬಾಳಿ ಬದುಕಿದರು ಆ ಎಂದು ಅವರ ಕುರಿತು ಪಂಡಿತ ನೆಹರೂ ವರ್ಣಿಸಿದ್ದರು.

## ಡಾ|| ರಾಜೇಂದ್ರ ಪ್ರಸಾದ : ನಾನು ಕಂಡಂತೆ

- ಬೀರೇನ್ ರಾಯ್*

ನಾನು ರಾಜೇಂದ್ರ ಪ್ರಸಾದರ ಸಂಪರ್ಕಕ್ಕೆ ಬಂದುದ್ದು 1933 ರಷ್ಟು ಹಿಂದೆ, ಕಲ್ಕತ್ತೆಯಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧಿವೇಶನ ನಡೆದಾಗ, ಆಮೇಲೆ 1935-36 ರಲ್ಲಿ ಅಖಿಲ್ ಬೆಂಗಾಲ್ ಮುನ್ಸಿಪಲ್ ಅಸೋಷಿಯೇಷನ್ ರಚಿಸುವಲ್ಲಿ ನಾನು ಸಕ್ರಿಯ ಪಾತ್ರ ವಹಿಸಿದ್ದರಿಂದ, ಅಂಥ ಒಂದು ಸಂಘಟನೆಯನ್ನು ಬಿಹಾರಿನಲ್ಲಿಯೂ ಸ್ಥಾಪಿಸುವ ವಿಚಾರ ನನಗಿದ್ದುದರಿಂದ ಆ ಬಗ್ಗೆ ರಾಜೇಂದ್ರ ಪ್ರಸಾದರ ಜೊತೆ ವಿವರವಾಗಿ ಚರ್ಚಿಸಿದ್ದೆ. ಅವರು ಬಿಹಾರ ಪ್ರಾಂತದವರೇ ಆಗಿದ್ದುದರಿಂದ ಅವರ ಸಲಹೆ ಸೂಚನೆ ನನಗೆ ಅವಶ್ಯಕವಾಗಿದ್ದವು. ನನ್ನ ಪ್ರಸ್ತಾವನೆಯನ್ನು ಕೇಳಿ ಒಂದಿಷ್ಟು ಮುಗುಳ್ನಕ್ಕ ಡಾ|| ಪ್ರಸಾದರು, 'ನೀವು ತುಸು ಎಡವಾದಿ ಇದ್ದೀರಿ' ಎಂದು ನನಗೆ ಹೇಳಿದರು. ನನಗೆ ನೆಹರೂಜಿ ಮತ್ತು ಸುಭಾಶ್ಚಂದ್ರ ಬೋಸ್‌ರೊಂದಿಗಿದ್ದ ಹೆಚ್ಚಿನ ಸಂಪರ್ಕವನ್ನನುಲಕ್ಷಿಸಿಯೇ ಬಹುಶಃ ಈ ಮಾತನ್ನು ಹೇಳಿದ್ದರೆಂದು ತೋರುತ್ತದೆ. 1936ರಲ್ಲಿ ಜರ್ಮನಿಯಲ್ಲಿ ನಡೆದ ನಗರ, ಮಹಾನಗರಗಳ 6ನೆ ಜಾಗತಿಕ ಸಮ್ಮೇಳನದಲ್ಲಿ ಭಾರತದ ಉಪಖಂಡವನ್ನು ಪ್ರತಿನಿಧಿಸಲು ನಾನು ಆಯ್ಕೆಯಾಗಿದ್ದೆ. ಆ ದೇಶದಲ್ಲಿ ನಾನು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ವಿಚಾರಧಾರೆಯನ್ನು ಮಂಡಿಸುವ ಕುರಿತು ಡಾ|| ಪ್ರಸಾದರ ಸಲಹೆ ಕೇಳಿದೆ. ನಾನು ರಾಷ್ಟ್ರೀಯ ಕಾಂಗ್ರೆಸ್ಸಿನ ಅಧಿಕೃತ ನಿಯೋಗಿಯಾಗಿ ಅಲ್ಲಿಗೆ ಹೋಗುತ್ತಿಲ್ಲವಾದ್ದರಿಂದ ನಾನು ಒಬ್ಬ ಸ್ವಾತಂತ್ರ್ಯ ಹೋರಾಟಗಾರನಾಗಿ ಆ ವಿಚಾರಧಾರೆ ಕುರಿತು ಒಂದಿಷ್ಟು ಪ್ರಸ್ತಾಪ ಮಾಡಬಹುದೆಂದು ಅವರು ನನಗೆ ಹೇಳಿದರು, ನನಗೆ ಯಶಸ್ಸು ಹಾರೈಸಿ ಬೀಳ್ಕೊಟ್ಟರು. ಬಹುಶಃ ಪ್ರಪ್ರಥಮ ಬಾರಿಗೆ ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಧ್ವಜವನ್ನು 1936ರ ಜೂನ್ ತಿಂಗಳಲ್ಲಿ ಯೂರೋಪಿನಲ್ಲಿ ಹಾರಿಸಲಾಯಿತು. ನಗರ ಮತ್ತು ಮಹಾನಗರಗಳ ಜಾಗತಿಕ ಸಮ್ಮೇಳನದಲ್ಲಿ ಭಾಗವಹಿಸಿದ್ದ ಇತರ ಸ್ವತಂತ್ರ ರಾಷ್ಟ್ರಗಳ ಧ್ವಜಗಳ ಜೊತೆಗೆ ಕಾಂಗ್ರೆಸ್ಸಿನ ಧ್ವಜವೂ ಹಾರುವಂತೆ ನಾನೇ ಮುತುವರ್ಜಿ ವಹಿಸಿದ್ದೆ. ಸಭಿಕರನ್ನುದ್ದೇಶಿಸಿ 20 ನಿಮಿಷಗಳವರೆಗೆ ಜರ್ಮನ್ ಭಾಷೆಯಲ್ಲಿಯೇ ಮಾತನಾಡಿದೆ. ಅದಕ್ಕೆ ದೊರೆತ ಪ್ರತಿಕ್ರಿಯೆ ತುಂಬ ವ್ಯಾಪಕವೂ ಉತ್ಸಾಹದಾಯಕವೂ ಆಗಿತ್ತು. ನನ್ನ ಈ ಸಾಧನೆ ನನ್ನನ್ನು ಸುಭಾಸ್ ಬೋಸರ ನಿಕಟ ಸಂಪರ್ಕಕ್ಕೆ ತಂದಿತು.

1959 ರಲ್ಲಿ ನಾನು ಬಂಗಾಳದ ಶಾಸಕ ಮತ್ತು ಬಂಗಾಳ ಫ್ಲೈಯಿಂಗ್ ಕ್ಲಬ್ ಹಾಗೂ ಏರೋಕ್ಲಬ್ ಆಫ್ ಇಂಡಿಯಾ ಎರಡು ಸಂಘಟನೆಗಳ ಅಧ್ಯಕ್ಷನಾಗಿದ್ದಾಗ, ಪ್ರಥಮ ನ್ಯಾಶನಲ್ ಏರ್ ರ್‍ಯಾಲಿ ಸಂಘಟಿಸುವ ಸದಾವಕಾಶ ನನಗೆ ದೊರೆತಿತ್ತು. ಈ ಕಾರ್ಯಕ್ರಮಕ್ಕೆ ಡಾ|| ಪ್ರಸಾದ್, ಪಂಡಿತ ನೆಹರೂ ಹಾಗೂ ರಫಿ ಅಹ್ಮದ್ ಕಿದ್ವಾಯಿ ಅವರ ಅನುಮೋದನೆಯ ಆಶೀರ್ವಾದವೂ ನನಗೆ ಲಭಿಸಿತ್ತು. ಕಾನಪೂರ್ ಬಳಿ ಚಕೇರಿಯಲ್ಲಿ 1951ರಲ್ಲಿ ದ್ವಿತೀಯ ಏರ್‌ರ್‍ಯಾಲಿ ಸಂಘಟಿಸಿದಾಗ, ಡಾ|| ಪ್ರಸಾದರು ನಮ್ಮ ಜೊತೆಗಿದ್ದು ಪ್ರಶಸ್ತಿ ವಿತರಣಾ ಸಮಾರಂಭದ ಅಧ್ಯಕ್ಷತೆವಹಿಸಿದ್ದರು.

---

* ಶ್ರೀ ಬೀರೇನ್ ರಾಯ್ ಮಾಜಿ ಸಂಸತ್ ಸದಸ್ಯರು. (ರಾಜ್ಯಸಭೆ ಮತ್ತು ಲೋಕಸಭೆ)

17A9-8

1957ರ ನಂತರ ನಾನು ಲೋಕಸಭೆಯ ಸದಸ್ಯನಾದ ಮೇಲೆ ಡಾ|| ಪ್ರಸಾದರ ಜೊತೆ ಆಪ್ತ ಸಂಭಾಷಣೆ, ಸಂವಾದ ನಡೆಸುವ ಅನೇಕ ಸಂದರ್ಭಗಳು ಒದಗಿ ಬಂದಿದ್ದವು. ಅಂತರಾಷ್ಟ್ರೀಯ ಖ್ಯಾತಿಯ ವಿಮೆನ್ನಾದ ಭಾವಚಿತ್ರಪರಿಣಿತ ಕಲಾವಿದನಿಂದ, ಡಾ|| ಪ್ರಸಾದರ ಒಂದು ವಿಶೇಷ ಭಾವಚಿತ್ರ ಚಿತ್ರಿಸಿಕೊಳ್ಳುವಲ್ಲಿ ನಾನು ಯಶಸ್ವಿಯಾಗಿದ್ದೆ. ಈ ಚಿತ್ರ ಪೂರ್ತಿಯಾಗುವವರೆಗೆ ಪ್ರತಿದಿನ ಸುಮಾರು 2 ಗಂಟೆಗಳವರೆಗೆ 3-4 ದಿನಗಳ ಕಾಲ ಡಾ|| ಪ್ರಸಾದರು ನಮ್ಮ ಜತೆ ಇರಬೇಕಾಗಿತ್ತು. ಅಂದಿನ ಆ ಭಾವಚಿತ್ರ ನನ್ನ ಅಮೂಲ್ಯ ಆಸ್ತಿಯಾಗಿ ಇಂದಿಗೂ ನನ್ನಲ್ಲಿದೆ.

ರಾಜೇಂದ್ರ ಪ್ರಸಾದರ ಸಂಪರ್ಕಕ್ಕೆ ಬಂದವರೆಲ್ಲರೂ ಅವರ ಸರಳತೆಯನ್ನು ಕಂಡು ಮೂಕವಿಸ್ಮಿತರಾಗದೆ ಇರುತ್ತಿರಲಿಲ್ಲ. ಹಳ್ಳಿಗಾಡಿನ ಹಿನ್ನೆಲೆಯಿಂದ ಬಂದಿದ್ದರು. ಅವಶ್ಯಕವೆನಿಸಿದಾಗಲೆಲ್ಲಾ ಅವರು ಅತ್ಯಂತ ಸುಸಂಸ್ಕೃತ ಮಾದರಿಯ ನಾಗರೀಕನಂತೆ ವರ್ತಿಸುತ್ತಿದ್ದರು. ವಾಸ್ತವವೆಂದರೆ, ಅವರ ಪರಿಪೂರ್ಣ ವ್ಯಕ್ತಿತ್ವದಲ್ಲಿ ಅಪಾರವಾಗಿ ಎದ್ದು ಕಾಣುತ್ತಿದ್ದ ವೈಷಮ್ಯವೇ ಅವರ ಶ್ರೇಷ್ಠತೆಯ ವೈಶಿಷ್ಟ್ಯವಾಗಿತ್ತು. ವಿನಯ, ಬುದ್ಧಿ, ಭಾವಗಳನ್ನು ಸಮುಚಿತವಾಗಿ ಮೇಳೈಸಿಕೊಂಡಿದ್ದ ಅವರು, ಒಬ್ಬ ಅತ್ಯುತ್ತಮ ಸಂಧಾನಕಾರರಾಗಿದ್ದರು. ಗಾಂಧೀಜಿಯೊಡನಿದ್ದ ದೀರ್ಘ ಹಾಗೂ ಸತತ ಸಂಪರ್ಕ ಅವರ ಮೇಲೆ ಮಹತ್ತರ ಪ್ರಭಾವ ಬೀರಿತ್ತು. ಈ ಪ್ರಭಾವ ಎಷ್ಟರಮಟ್ಟಿಗೆ ಆಗಿತ್ತೆಂದರೆ, ಕ್ರಮೇಣ ಅವರು ತಮ್ಮ ಗುರುವಿನಂತೆ ತುಂಬ ಸರಳವಾದ, ನಿರಾಡಂಭರದ ಬದುಕು ನಡೆಸತೊಡಗಿದರು. ತಾವೊಬ್ಬ ಶಾಂತಿಪ್ರಿಯರೆಂಬುದನ್ನು, ಗಾಂಧೀಜಿಯ ಅಹಿಂಸೆಯ ಪರಿಕಲ್ಪನೆಯಲ್ಲಿ ತಮಗೆ ಪ್ರಗಾಢವಾದ ನಂಬುಗೆಯಿತ್ತೆಂಬುದನ್ನು ಅವರೆಂದೂ ಮರೆಮಾಚುತ್ತಿರಲಿಲ್ಲ. ಗಾಂಧೀಜಿಯೊಂದಿಗಿದ್ದ ಅವರ ಸಂಬಂಧ ಎಷ್ಟು ಅನೋನ್ಯವಾಗಿತ್ತೆಂದರೆ, ಅವರ ಮಾತೆತ್ತಿದರೆ ಸಾಕು, ಇವರಲ್ಲಿ ಭಾವಾವೇಶ ಉಕ್ಕುತ್ತಿತ್ತು. ಗಾಂಧೀಜಿಯ ಬೋಧನೆಯ ಪ್ರಸ್ತಾಪ ಬಂದಾಗಲೆಲ್ಲಾ, ಡಾ|| ಪ್ರಸಾದರು ಭಾವುಕತೆಯಿಂದ ಸ್ಪಂದಿಸುತ್ತಿದ್ದರು.

1950 ರಿಂದ 1962 ರವರೆಗೆ ಸ್ವತಂತ್ರ ಭಾರತದ ರಾಷ್ಟ್ರಪತಿಗಳಾಗಿದ್ದ ಡಾ|| ರಾಜೇಂದ್ರ ಪ್ರಸಾದರು ಭಾರತದ ರಾಜಕೀಯ ವ್ಯವಸ್ಥೆಗೆ ಒಂದು ಹೊಸ ದಿಸೆಯನ್ನು ತೋರಿದರು. ಸರಳತನವೇ ಎರಕ ಹೊಯ್ದಂತಿದ್ದ ಅವರು ಭಾರತೀಯ ಜನತೆಯ ಕಲ್ಯಾಣಕ್ಕೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದರು. ಹಾಗೆಂದೇ ಭಾರತದ ರಾಷ್ಟ್ರಪತಿ ಹುದ್ದೆಯಂಥ ಅತ್ಯುನ್ನತ ಸ್ಥಾನಕ್ಕೆ ಅನುಪಮ ಘನತೆ ಗೌರವವನ್ನು ತಂದುಕೊಟ್ಟರು. ತಮ್ಮ ನಿಷ್ಪೃಹ ಧ್ಯೇಯೋದ್ದೇಶ, ಮತ್ತು ಅಂತರಂಗ ಬಹಿರಂಗದ ಪರಮಶುದ್ಧ ಸಚ್ಚಾರಿತ್ರ್ಯದ ವ್ಯಕ್ತಿತ್ವದಿಂದಾಗಿ, ಅವರು ಈ ಮಹಾನ್ ರಾಷ್ಟ್ರದ ಜನಮಾನಸದಲ್ಲಿ ಚಿರಕಾಲ ಉಳಿಯಲಿದ್ದಾರೆ.

## ಡಾ॥ ರಾಜೇಂದ್ರ ಪ್ರಸಾದ : ಅಗ್ರಗಣ್ಯ ವ್ಯಕ್ತಿ

-ಪ್ರೊ॥ ರಾಜಾ ರಾಮ್ ಶಾಸ್ತ್ರಿ- *

ಇಂದು ಸಾರ್ವಜನಿಕ ಜೀವನದಲ್ಲಿರುವ ಕೆಲವೇ ಕೆಲವರು ಮಾತ್ರ ರಾಜೇನ್ ಬಾಬು ಅವರನ್ನು ನೋಡಿ ಅವರೊಂದಿಗೆ ವ್ಯವಹರಿಸಿದ್ದಾರೆ. ಸಾರ್ವಜನಿಕ ಜೀವನದಲ್ಲಿ ಅವರ ಸಂಗಾತಿಗಳಾಗಿದ್ದವರು ಇಂದು ಬಹಳಷ್ಟು ಜನ ಬದುಕುಳಿದಿಲ್ಲ. ಮುಂಬರುವ ತಲೆಮಾರಿನವರಲ್ಲಿ ರಾಷ್ಟ್ರೀಯ ಐಕ್ಯತೆ, ಜಾತ್ಯಾತೀತತೆ ಮತ್ತು ಸಮಾಜವಾದೀ ವ್ಯವಸ್ಥೆಯ ನಿರ್ಮಾಣಕ್ಕೆ ಸ್ಪೂರ್ತಿಯನ್ನು ತುಂಬಬಲ್ಲ ಈ ದೇಶದ ಮಹಾನ್ ವ್ಯಕ್ತಿಗಳ ಸಮೂಹದಲ್ಲಿ ಡಾ॥ ರಾಜೇಂದ್ರ ಪ್ರಸಾದರು ಎದ್ದು ಕಾಣುವ ಹೆಸರು. ರಾಜೇನ್ ಬಾಬು ಅವರ ಬದುಕು ಮತ್ತು ಸಾಧನೆ ಅವಿಸ್ಮರಣೀಯವಾಗಿವೆ.

ಕಾಶೀ ವಿದ್ಯಾಪೀಠ, ಬಿಹಾರ ವಿದ್ಯಾ ಪೀಠ, ಗುಜರಾತ್ ವಿದ್ಯಾಪೀಠ ಮತ್ತು ಜಾಮಿಯಾ ಮಿಲಿಯಾದಂಥ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿದ್ದರ ಉದ್ದೇಶ ರಾಷ್ಟ್ರದ ಸ್ವಾತಂತ್ರ್ಯ ಮತ್ತು ಮುನ್ನಡೆಗೆ ಕೈಗೂಡಿಸಬಹುದಾಗಿದ್ದ ವಿದ್ಯಾರ್ಥಿಗಳನ್ನು ತಯಾರಿಸುವುದಾಗಿತ್ತು. ಅಂದಿನ ರಾಷ್ಟ್ರದ ಮಹಾನ್ ನಾಯಕರ ಜೊತೆ ಹೆಗಲಿಗೆ ಹೆಗಲು ಕೊಟ್ಟು ದುಡಿಯುತ್ತಾ ಸ್ವತಂತ್ರ್ಯ ಭಾರತದ ಅಭಿವೃದ್ಧಿಯ ದಾರಿ ಸುಗಮಗೊಳಿಸಬಲ್ಲ ವಿದ್ಯಾರ್ಥಿಗಳನ್ನು ರೂಪಿಸುವುದೇ ಈ ಎಲ್ಲಾ ಸಂಸ್ಥೆಗಳ ಉದ್ದೇಶವಾಗಿತ್ತು.

ನಾನು 1925 ರಲ್ಲಿ ಕಾಶೀ ವಿದ್ಯಾಪೀಠದಿಂದ ಶಾಸ್ತ್ರಿ ಪರೀಕ್ಷೆಯನ್ನು ಪಾಸು ಮಾಡಿದೆ. ಆ ವರ್ಷ ನನ್ನೊಂದಿಗೆ ಶಾಸ್ತ್ರಿ ಪರೀಕ್ಷೆಯಲ್ಲಿ ಪಾಸಾದ ಅನೇಕ ಜನರು ಮುಂದೆ ಮಹಾನ್ ಖ್ಯಾತಿಯ ನೇತಾರರಾದರು. ಆ ವರ್ಷ ಘಟಿಕೋತ್ಸವ ಭಾಷಣ ಮಾಡಿ ಪದವಿ ಪ್ರದಾನಿಸಲು ರಾಜೇನ್ ಬಾಬು ಅವರನ್ನು ಆಮಂತ್ರಿಸಲಾಗಿತ್ತು. ಆಗಿನ ಕುಲಪತಿಗಳಾಗಿದ್ದ ಡಾ॥ ಭಗವಾನ್ ದಾಸ್, ಡಾ॥ ಸಂಪೂರ್ಣಾನಂದ, ಆಚಾರ್ಯ ನರೇಂದ್ರ ದೇವ, ಬಾಬು ಶಿವಪ್ರಸಾದ ಗುಪ್ತಾ ಮತ್ತು ಮಹಾ ಮಹಾನ್ ಪಂಡಿತ ಮದನ್ ಮೋಹನ್ ಮಾಳವೀಯ ಮುಂತಾದ ಮಹನೀಯರು ಘಟಿಕೋತ್ಸವದಲ್ಲಿ ಉಪಸ್ಥಿತರಿದ್ದರು. ರಾಜೇನ್ ಬಾಬು ಅವರ ವೇಷ ಭೂಷಣ ವಿಚಿತ್ರವಾಗಿದ್ದವು. ಅವರು ಬಿಹಾರಿನ ಪಕ್ಕಾ ರೈತರಂತೆ ಕಾಣುತ್ತಿದ್ದರು. ಅವರು ತುಂಬ ಹಿಂಜರಿತದಿಂದಲೇ ಭಾಷಣ ಮಾಡಲು ಎದ್ದು ನಿಂತರು. ಮದನ್ ಮೋಹನ್ ಮಾಳವೀಯರಂಥ ಉದ್ದಾಮ ಪಂಡಿತರು ಉಪಸ್ಥಿತರಿದ್ದ ಸಭೆಯನ್ನುದ್ದೇಶಿಸಿ ಮಾತನಾಡಲು ತಮಗೆ ತುಂಬ ಮುಜುಗರವಾಗುತ್ತಿದೆಯೆಂದು ಅವರು ಹೇಳಿದರು.

ಅವರು ಮುಂದೊಂದು ದಿನ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗುವರೆಂದು ನಾವು ಕಲ್ಪನೆಯನ್ನೂ ಮಾಡಿಕೊಂಡಿರಲಿಲ್ಲ. ಅವರು ಮೂರು ಸಲ ಅದರ ಅಧ್ಯಕ್ಷರಾಗಿ ಚುನಾಯಿತರಾದರು. ಮುಂದೊಂದು ದಿನ ಅವರು ಸಂವಿಧಾನ ಸಭೆಯ ಅಧ್ಯಕ್ಷರಾಗಬಹುದೆಂದು

* ಪ್ರೊ॥ ಶಾಸ್ತ್ರಿಯವರು ಮಾಜಿ ಸಂಸತ್ ಸದಸ್ಯರು (ಲೋಕಸಭೆ)

ಕನಸು ಮನಸ್ಸಿನಲ್ಲಿಯೂ ನಾವು ಭಾವಿಸಿರಲಿಲ್ಲ. ಭಾರತ ಒಂದು ಸ್ವತಂತ್ರ್ಯ ಸಾರ್ವಭೌಮ ಪ್ರಜಾತಾಂತ್ರಿಕ ಗಣರಾಜ್ಯವಾಗಿ ಹೊರಹೊಮ್ಮಿದಾಗ ಅವರು ರಾಷ್ಟ್ರಪತಿಯಾಗಿ ಚುನಾಯಿತರಾಗುವರೆಂಬ ಸಂಗತಿ ನಮ್ಮ ಕಲ್ಪನೆಗೆ ಮೀರಿದ್ದಾಗಿತ್ತು.

ಘಟಿಕೋತ್ಸವ ಭಾಷಣದಲ್ಲಿ ರಾಜೇನ್ ಬಾಬು ಆಡಿದ ಮಾತುಗಳು ಇಂತಿವೆ :

"ಕಾಶೀ ವಿದ್ಯಾಪೀಠದ ಸ್ನಾತಕರು ಮತ್ತು ಇತರರ ಮೇಲೆ ಮಹತ್ತರ ಜವಾಬ್ದಾರಿಯಿದೆ. ನೀವು ರಾಷ್ಟ್ರೀಯ ಶಿಕ್ಷಣದ ವಿರೋಧಿಗಳ ವೈರತ್ವ, ಅಪನಂಬುಗೆ ಮತ್ತು ಬ್ರಿಟಿಷ್ ಆಳ್ವಿಕೆಯ ಬೆಂಬಲಿಗರ ಅಸಹನೆ ಮುಂತಾದುವನ್ನು ನಿಮ್ಮ ಜಾಣ್ಮೆ, ಸಾಮರ್ಥ್ಯ ಮತ್ತು ಎಲ್ಲಕ್ಕೂ ಮಿಗಿಲಾಗಿ ಸದ್ಗುಣ, ಸಚ್ಚಾರಿತ್ರ್ಯದಿಂದ ಗೆಲ್ಲಬೇಕಾಗಿದೆ. ನೈಜದೇಶಭಕ್ತಿ, ಸೇವೆ ಹಾಗೂ ನಿಸ್ವಾರ್ಥತೆಯ ಮೂಲಕ ನೀವು ಜನರ ಹೃದಯವನ್ನು ಗೆಲ್ಲಬೇಕಾಗಿದೆ. ದೇವರ ದಯದಿಂದ ನಿಮಗೆ ಮಾತ್ರ ಇಂಥ ಅವಕಾಶ ದೊರೆತಿದೆ. ಆದ್ದರಿಂದ ನೀವು ತುಂಬಾ ಸುದೈವಿಗಳೆಂದು ನನ್ನ ಭಾವನೆ. ಪೂಜ್ಯ ಭಗವಾನ್‌ದಾಸ್‌ರಂಥ ಮಹಾನ್ ವ್ಯಕ್ತಿಗಳ ಸಾನಿಧ್ಯ, ಸಂಪರ್ಕದ ಅನುಪಮ ಅವಕಾಶ ನಿಮ್ಮದಾಗಿದೆ. ಶ್ರೀ ಶಿವಪ್ರಸಾದ್ ಗುಪ್ತಾರಂಥ ಮಹಾನ್ ಪೋಷಕರ ಕೃಪಾಕಟಾಕ್ಷಕ್ಕೆ ಪಾತ್ರವಾಗಿರುವ ವಿದ್ಯಾಪೀಠಕ್ಕೆ ಯಾವುದೇ ಕೊರತೆ ಉಂಟಾಗುವುದಿಲ್ಲವೆಂಬ ಭರವಸೆ ನನಗಿದೆ. ಆದರೆ ಹೆಚ್ಚುಹೆಚ್ಚಿನ ಸೌಲಭ್ಯ ಸೌಕರ್ಯಗಳನ್ನು ನೀವು ಬಳಸಿದಂತೆಲ್ಲ ಅಷ್ಟೇ ಹೆಚ್ಚಿನ ಹೊಣೆಗಾರಿಕೆ ಹೆಗಲೇರುತ್ತದೆ."

ಇಂಥ ಸಂಸ್ಥೆಗಳನ್ನು ಸ್ಥಾಪಿಸುವುದರ ಹಿಂದೆ ಮಹಾತ್ಮಗಾಂಧೀಜಿಯ ದೂರದೃಷ್ಟಿ, ವಿವೇಚನಾಶೀಲತೆ ಮತ್ತು ಸುಸಂಬದ್ಧ ಯೋಜನೆಗಳು ಕೆಲಸ ಮಾಡಿದ್ದವು. ಗಾಂಧೀಜಿಯ ಪ್ರಕಾರ ಭಾರತ ಸ್ವತಂತ್ರ್ಯ ಪಡೆಯಲು ಇವು ತುಂಬಾ ಅವಶ್ಯಕವಾಗಿದ್ದವು. ಅವರು ತಮ್ಮ ಈ ಯೋಜನೆಯನ್ನು ಜಾರಿಗೊಳಿಸಲು ಎಲ್ಲಾ ರಾಜ್ಯಗಳಿಂದಲೂ ಕೆಲವು ನಿಸ್ವಾರ್ಥ ನಿಲುವಿನ, ಸಮರ್ಪಣ ಭಾವದ ಜನರನ್ನು ಆಯ್ಕೆ ಮಾಡಿದ್ದರು. ಆ ಮಹತ್‌ಕಾರ್ಯವನ್ನು ನಿರ್ಧಿಷ್ಟ ಕಾಲಾವಧಿಯಲ್ಲಿ ಮಾಡಿ ಮುಗಿಸಬಲ್ಲ ಅಪೂರ್ವ ಸಾಮರ್ಥ್ಯದ ವ್ಯಕ್ತಿಗಳು ಅವರಿಗೆ ಬೇಕಾಗಿದ್ದರು.

ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದ ವ್ಯಕ್ತಿಗಳ ಸಾಮರ್ಥ್ಯವನ್ನು ಅಳೆಯಲು ಗಾಂಧೀಜಿಯಲ್ಲಿ ತಮ್ಮದೇ ಆದ ಮಾನದಂಡಗಳಿದ್ದವು. ಅವರ ನಿಯಮ, ನಿಬಂಧನೆಗಳೇ ಆ ಮಾನದಂಡಗಳ ಮುಖ್ಯಾಂಶಗಳಾಗಿದ್ದವು. ರಾಷ್ಟ್ರ ನಿರ್ಮಾಣದ ಕಾರ್ಯದಲ್ಲಿ ತೊಡಗಿದ್ದ ಜನರು ಸತ್ಯ ಅಹಿಂಸೆಗಳಿಗೆ ಬದ್ಧರಾಗಿದ್ದು, ತಮ್ಮ ವೈಯಕ್ತಿಕ ಸಚ್ಚಾರಿತ್ರ್ಯದ ಕಡೆಗೂ ಗಮನ ಕೊಡಬೇಕಾದದ್ದು ಅಷ್ಟೇ ಅವಶ್ಯಕ ಎಂದು ಅವರು ಭಾವಿಸಿದ್ದರು. ಗಾಂಧೀಜಿ, ಜನರಿಗೆ ಸ್ವಾವಲಂಬನೆಯ ಪಾಠ ಹೇಳಿಕೊಡುತ್ತ ಅವರು ತುಂಬ ಶಿಸ್ತಿನಿಂದ ಕೆಲಸ ಮಾಡಬೇಕಾದದ್ದು ಅತ್ಯಂತ ಅವಶ್ಯಕವಾದ ನಿಬಂಧನೆಯನ್ನಾಗಿ ವಿಧಿಸುತ್ತಿದ್ದರು. ಈ ಎಲ್ಲಾ ವಿಧಿ ನಿಬಂಧನೆಗಳನ್ನು ಚಾಚು ತಪ್ಪದೆ ಪಾಲಿಸುತ್ತಿದ್ದವರು ಮಾತ್ರ ರಾಷ್ಟ್ರನಿರ್ಮಾಣದ ಮಹಾಕಾರ್ಯಕ್ಕೆ ಸುಯೋಗ್ಯರೆಂಬ ದೃಷ್ಟಿ ಗಾಂಧೀಜಿಯವರದ್ದು. ಈ ಶರತ್ತಿನ ಮೇಲೆ ಗಾಂಧೀಜಿಯೊಂದಿಗೆ ಕೆಲಸ ಮಾಡಲು ಬಂದಿದ್ದ ಎಲ್ಲ ಜನರೂ ಆಮೇಲೆ ಭಾರತದ

ಮಹಾನ್ ನಾಯಕರಾದರು. ಜವಾಹರಲಾಲ್ ನೆಹರು, ಸರ್ದಾರ್ ವಲ್ಲಭ ಭಾಯಿ ಪಟೇಲ್, ಮೌಲಾನಾ ಅಬ್ದುಲ್ ಖಲಾಂ ಆಜಾದ್, ನೇತಾಜಿ ಸುಭಾಷ್ ಚಂದ್ರ ಬೋಸ್, ರಾಜಗೋಪಾಲಾಚಾರಿ, ರಾಜೇಂದ್ರ ಪ್ರಸಾದರಂಥ ನಾಯಕ ರತ್ನಗಳು ಈ ಮೇಲಿನ ಮಾತಿಗೆ ನಿದರ್ಶನಗಳಾಗಿದ್ದಾರೆ. ಅಷ್ಟೇ ಅಲ್ಲ, ಈ ಉಪರೋಕ್ತ ಮಹನೀಯರ ಅನೇಕ ಸಹಚರರೂ ಗಾಂಧೀ ಯುಗದ ಅವಿಷ್ಕಾರಗಳಾಗಿದ್ದರು.

ಗಾಂಧೀಜಿಯ ವಿಚಾರಧಾರೆಯ ಆಧಾರದ ಮೇಲೆಯೇ ರಾಷ್ಟ್ರಭಕ್ತರನ್ನು ರೂಪಿಸುವ, ಕಠಿಣ ಪರಿಶ್ರಮವಾದಿಗಳನ್ನು ನಿರ್ಮಿಸುವ, ಸತ್ಯಸಂಧರನ್ನು ಸೃಷ್ಟಿಸುವ ಮತ್ತು ಸ್ವಾವಲಂಭಿ ಸಚ್ಚಾರಿತ್ರರನ್ನು ಸೃಜಿಸುವ ಒಂದು ಅಗ್ನಿಪರೀಕ್ಷೆಯ ಕುಲುಮೆಯನ್ನು ತಯಾರಿಸಲಾಯಿತು.

ರಾಜೇನ್‌ಬಾಬು ತಮ್ಮ ವಿಚಾರ ಮತ್ತು ಕೃತಿಗಳ ಮೂಲಕ ಜನಸಾಮಾನ್ಯರಲ್ಲಿ ಪ್ರಜಾತಾಂತ್ರಿಕ ಮೌಲ್ಯಗಳನ್ನು ರೂಢಿಸಿದರು. ಭಾರತದ ಪ್ರಥಮ ರಾಷ್ಟ್ರಪತಿಗಳಾಗಿ ಹನ್ನೆರಡು ವರ್ಷಗಳಿಗೂ ಹೆಚ್ಚು ಕಾಲ ಅಧಿಕಾರದಲ್ಲಿದ್ದು ತಮ್ಮ ನಡೆ ನುಡಿಯ ಮೂಲಕ ಅದರ ಬುನಾದಿಯನ್ನೇ ಭದ್ರಗೊಳಿಸಿದರು. ಆದ್ದರಿಂದಲೇ ಇಂದು ಜಗತ್ತಿನಲ್ಲಿಯೇ ಅತ್ಯುತ್ತಮವಾದ ಪ್ರಜಾಪ್ರಭುತ್ವ ನಮ್ಮದೆಂದು ಭಾವಿಸಲಾಗುತ್ತದೆ. ನಮ್ಮ ಇಂದಿನ ಪ್ರಜಾಪ್ರಭುತ್ವ ರಾಜೇನ್ ಬಾಬು ಮತ್ತು ಜವಾಹರಲಾಲ್ ನೆಹರು ನೀಡಿದ ಕಾಣಿಕೆಯಾಗಿದೆ.

## ಭಾರತೀಯ ರಾಜಕಾರಣದ ಅರ್ಧನಾರೀಶ್ವರ

ಪ್ರೊ॥ ಸಿದ್ದೇಶ್ವರ ಪ್ರಸಾದ *

ಪಂಡಿತ ಜವಾಹರಲಾಲ್ ನೆಹರೂ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯ 'ರಾಜಕೀಯ' ವಾರಸುದಾರರಾಗಿದ್ದರೆ, ಆಚಾರ್ಯ ವಿನೋಬಾ ಭಾವೆಯುವರು 'ಆಧ್ಯಾತ್ಮಿಕ' ಉತ್ತರಾಧಿಕಾರಿಯಾಗಿದ್ದರು. ಭಾರತರತ್ನ ಡಾ॥ ರಾಜೇಂದ್ರ ಪ್ರಸಾದರ ವ್ಯಕ್ತಿತ್ವ ಎಂಥದ್ದಾಗಿತ್ತೆಂದರೆ, ಪಂಡಿತ ಜವಾಹರಲಾಲ್ ನೆಹರು, ಗಾಂಧೀಜಿಯ ರಚನಾತ್ಮಕ ಕೆಲಸದ ದಾರಿಯಲ್ಲಿ ನಡೆದಿದ್ದರೆ, ಮತ್ತು ವಿನೋಬಾ ಭಾವೆಯುವರು ಸಕ್ರಿಯ ರಾಜಕಾರಣದಲ್ಲಿ ಭಾಗವಹಿಸಿದ್ದರೆ ಹೊರಹೊಮ್ಮಬಹುದಾಗಿದ್ದ ಅವರಿಬ್ಬರ ವ್ಯಕ್ತಿತ್ವಗಳ ವಿಶೇಷ ಮೇಳನವೇ ರಾಜೇಂದ್ರ ಬಾಬು ಆಗಿದ್ದರು. ರಾಜೇಂದ್ರ ಪ್ರಸಾದರು ಸಂತರ ನಡುವೆ ರಾಜಕಾರಣಿಯೂ, ರಾಜಕಾರಣಿಗಳ ನಡುವೆ ಸಂತರೂ ಆಗಿದ್ದರು. ಗಾಂಧೀಜಿ ಅವರನ್ನು 'ಅಜಾತ ಶತ್ರು' ಎಂದು ಕರೆಯುತ್ತಿದ್ದರು. ಒಳಜಗಳಗಳಿಂದಾಗಿ ಭಾರತದ ರಾಷ್ಟ್ರೀಯ ಕಾಂಗ್ರೆಸಿನ ನೇತೃತ್ವ ಬಿಕ್ಕಟ್ಟಿನ ಸುಳಿಯಲ್ಲಿ ಸಿಕ್ಕಿದಾಗ, ರಾಜೇಂದ್ರ ಪ್ರಸಾದರು ಅದರ ನಾಯಕತ್ವದ ಹೊಣೆ ಹೊತ್ತು ರಾಷ್ಟ್ರಕ್ಕೆ ಮಾರ್ಗದರ್ಶನ ಮಾಡಿದರು. ಕೆಲವು ಸಲ ತೀರ ವಿವಾದಾತ್ಮಕವೆಂದೆನಿಸುತ್ತಿದ್ದ ಪರಸ್ಪರ ಗುಣವಿಶೇಷಗಳನ್ನು ಸಂಧಾನಿಸುವ ಗಮನಾರ್ಹ ಪ್ರಜ್ಞೆ, ಒಳನೋಟ ಅವರಲ್ಲಿದ್ದವು. ತೋರಿಕೆಗೆ ಗ್ರಾಮೀಣ ವ್ಯಕ್ತಿಯಂತೆ ಕಾಣುತ್ತಿದ್ದ ಅವರು ವಾಸ್ತವವಾಗಿ ಒಬ್ಬ ಅಸಾಮಾನ್ಯ ಪ್ರತಿಭೆಯ ವ್ಯಕ್ತಿಯಾಗಿದ್ದರು. ಮೆಟ್ರಿಕುಲೇಷನ್‌ನಿಂದ ಸ್ನಾತಕೋತ್ತರವರೆಗೆ ಪ್ರತಿಯೊಂದು ಪರೀಕ್ಷೆಯಲ್ಲಿಯೂ ಯಾವಾಗಲೂ ಪ್ರಥಮಸ್ಥಾನ ಪಡೆದುಕೊಳ್ಳುತ್ತಿದ್ದರು. ಅವರು ಮೃದುಭಾಷೆಯ ಸದುವಿನಯದ ವ್ಯಕ್ತಿಯಾಗಿದ್ದರು. ಆದರೆ ಅವಶ್ಯವೆನಿಸಿದರೆ, ಉಕ್ಕಿಗಿಂತಲೂ ಕಠಿಣವಾಗಿ ನಿಲ್ಲುತ್ತಿದ್ದರು. ರಾಷ್ಟ್ರಪತಿ ಭವನದಂಥ ವೈಭವೋಪೇತ ಅರಮನೆಯಲ್ಲಿ ವಾಸಿಸುತ್ತಿದ್ದರೂ ಸಂತಸದೃಶ, ವೈರಾಗ್ಯದ ಬದುಕು ಅವರದ್ದಾಗಿತ್ತು. ಅವರು ಕಾರ್ಯಾಂಗದ ಮುಖ್ಯಸ್ಥರಾಗಿದ್ದರು. ಪ್ರಧಾನಮಂತ್ರಿ ಮತ್ತು ಸಚಿವ ಸಂಪುಟದ ಕಾರ್ಯ ಅವರ ವಿವೇಚನೆಗೆ ಅಧೀನವಾಗಿತ್ತು. ಆದರೆ ಯಾವುದೇ ತೀರ್ಮಾನವನ್ನು ತೆಗೆದುಕೊಳ್ಳುವಾಗ ಅವರೆಂದೂ ತಮ್ಮ ವೈಯಕ್ತಿಕ ಬೇಕು ಬೇಡಗಳಿಗೆ ಮಹತ್ವ ನೀಡುತ್ತಿರಲಿಲ್ಲ. ರಾಷ್ಟ್ರದ ಹಿತಾಸಕ್ತಿ ಮತ್ತು ತಮ್ಮ ಹುದ್ದೆಯ ಪರಮೋನ್ನತ ಘನತೆಯೇ ಅವರ ಕಾಳಜಿಯ ಕೇಂದ್ರಗಳಾಗಿದ್ದವು. ಭಾರತದ ಪ್ರಜಾಸತ್ತೆಯ ಬಾಲ್ಯಾವಸ್ಥೆಯಲ್ಲಿ ಸಂವಿಧಾನ ಸಭೆಯ ಅಧ್ಯಕ್ಷ ಅಥವಾ ಭಾರತದ ಪ್ರಥಮ ರಾಷ್ಟ್ರಪತಿಯ ಸ್ಥಾನದಲ್ಲಿ ರಾಜೇನ್‌ಬಾಬು ಅವರಿಗೆ ಬದಲಾಗಿ ಬೇರೆ ಯಾರಾದರೂ ಆಗಿದ್ದರೆ ಭಾರತೀಯ ರಾಜಕಾರಣಕ್ಕೆ ಇಂಥ ಮೆರುಗು, ಮೇಲ್ಮೆ ದಕ್ಕುತ್ತಿರಲಿಲ್ಲ, ಭಾರತೀಯ ಪರಂಪರೆಯಲ್ಲಿ ಆಳವಾಗಿ ಬೇರುಬಿಟ್ಟ ಪ್ರಜಾಸತ್ತೆಯ ಘನತೆಯನ್ನು ಕಾಯ್ದುಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ನೆರೆಹೊರೆಯ ರಾಷ್ಟ್ರಗಳಲ್ಲಿ ಅಲ್ಲೋಲ ಕಲ್ಲೋಲವೆಬ್ಬಿಸಿದ ರಾಜಕೀಯ ಬಿರುಗಾಳಿ, ನಮ್ಮ ಪ್ರಜಾಸತ್ತೆಯನ್ನು ಅಲುಗಿಸಲೂ ಸಾಧ್ಯವಾಗದೆ ಇದ್ದಂತಹ ಒಂದು ಬಲಿಷ್ಠ ಪ್ರಜಾತಾಂತ್ರಿಕ ಪರಂಪರೆಯನ್ನು ಸೃಷ್ಟಿಸುವುದು ಅಸಾಧ್ಯದ ಮಾತಾಗುತ್ತಿತ್ತು. ಭರತನ ಕುರಿತು

---

* ಪ್ರೊ॥ ಸಿದ್ದೇಶ್ವರ ಪ್ರಸಾದ ಮಾಜಿ ಕೇಂದ್ರ ಮಂತ್ರಿಗಳು.

ಮಹಾಕವಿ ಗೋಸ್ವಾಮಿ ತುಳಸಿದಾಸ ರಚಿಸಿದ ಕೆಲವು ಪದ್ಯಗಳು ಈ ಸಂದರ್ಭದಲ್ಲಿ ಉಲ್ಲೇಖನಾರ್ಹವಾಗಿವೆ:

ತೇಹಿಪೂರ್ ಬಸತ ಭರತ ಬಿನು ರಾಗ್,
ಚಂಚರೀಕ ಜಿಮಿ ಚಂಪಕ ಬಾಗ್

(ರಾಮಚರಿತ ಮಾನಸ)

ಅಂದರೆ, ಶ್ರೀರಾಮನ ಸಹೋದರನಾಗಿದ್ದ ಭರತನು ಅಯೋಧ್ಯೆಯ ಅರಮನೆಯಲ್ಲಿದ್ದರೂ ಅದರ ಬಗ್ಗೆ ಅವನಿಗೆ ಎಂಥ ನಿರ್ಮಮ, ನಿರ್ಲಿಪ್ತತೆಯ ಭಾವವಿತ್ತೆಂದರೆ, ಚಂಪಕಗಿಡಗಳ ಪುಷ್ಪೋದ್ಯಾನದಲ್ಲಿ ಝೇಂಕರಿಸುವ ದುಂಬಿಗೆ, ಆ ಉದ್ಯಾನದ ಬಗ್ಗೆ ಇದ್ದ ಅಲಿಪ್ತತೆಗೆ ಯಾವ ರೀತಿಯಿಂದಲೂ ಕಡಿಮೆಯಿರಲಿಲ್ಲ, ಭರತನ ನಿರ್ಮಮ ನಿಲುವು.

ಗಾಂಧೀಜಿಯ ಎದೆಗೆ ಗುಂಡಿಕ್ಕಿದಾಗ ಅವರ ಬಾಯಿಂದ ಹೊರಬಿದ್ದ 'ಹೇ ರಾಮ' ಎನ್ನುವ ಉದ್ಗಾರ ಅವರ ಆಧ್ಯಾತ್ಮಿಕ ಸಾಕ್ಷಿಯಾಗಿದ್ದಂತೆ, ಸದಾಕತ್ ಆಶ್ರಮದಿಂದ ರಾಷ್ಟ್ರಪತಿ ಭವನಕ್ಕೆ ತೆರಳಿ ಅಲ್ಲಿನಿಂದ ಮತ್ತೆ ಸದಾಕತ್ ಆಶ್ರಮಕ್ಕೆ ಮರಳಿದ ರಾಜೇನ್‌ಬಾಬು ಅವರ ನಿರ್ಮಮತೆ ಅವರ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿತ್ತು. ರಾಜೇನ್‌ಬಾಬು ಅವರ ಹೊರತು ಇನ್ನಾವುದೇ ಅತ್ಯುನ್ನತ ಮಟ್ಟದ ನಾಯಕ ತನ್ನ ಪರಮೋನ್ನತ ಹುದ್ದೆಯ ಅಧಿಕಾರಾವಧಿಯ ನಂತರ ತಿರುಗಿ ತನ್ನ ಸೇವಾಶ್ರಮಕ್ಕೆ ಹೋದ ನಿದರ್ಶನ ದೊರೆಯಲಾರದು. ಇದು ತೋರಿಕೆಗೆ ಸರಳವಾಗಿ ಕಂಡರೂ ತುಂಬಾ ಕಷ್ಟಸಾಧ್ಯವಾದ ಕ್ರಿಯೆಯಾಗಿದೆ. ಇಂಥ ಸಂದರ್ಭದಲ್ಲಿಯೇ ತುಳಸೀದಾಸ್ ಹೇಳಿದ ಇನ್ನೊಂದು ಪದ್ಯ :

' ಜನಮ ಜನಮ ಮುನಿ ಜತನ ಕರಾಹಿ
ಅಂತ ರಾಮ ಕಹಿ ಆವತ ನಾಹಿ :

ರಾಜೇನ್ ಬಾಬು ಗಾಂಧೀಜಿಯ ಕಟ್ಟಾ ಬೆಂಬಲಿಗರಾಗಿದ್ದರು, ಒಬ್ಬ ನೈಜ ಅನುಯಾಯಿಯಾಗಿದ್ದರು. 1915ರ ನಂತರ ಗಾಂಧೀಜಿ ದಕ್ಷಿಣ ಆಫ್ರಿಕೆಯಿಂದ ಹಿಂತಿರುಗಿ ಕಲ್ಕತ್ತಾ ತಲುಪಿದಾಗ ರಾಜೇನ್ ಬಾಬು ಗಾಂಧೀಜಿಯನ್ನು ಪ್ರಥಮ ಬಾರಿಗೆ ಭೆಟ್ಟಿಯಾದರು. ಆಮೇಲೆ ಅವರು ಗಾಂಧೀಜಿಯನ್ನು ಕಂಡದ್ದು ಲಖ್ನೌ ಕಾಂಗ್ರೆಸಿನಲ್ಲಿ. 1917ರಲ್ಲಿ ಮಹಾತ್ಮ ಗಾಂಧೀಜಿ ರೈತರ ಸಮಸ್ಯೆಗಳ ಪರಿಹಾರಕ್ಕಾಗಿ ಚಂಪಾರಣ ಸತ್ಯಾಗ್ರಹವನ್ನು ಹೂಡಿ ತಿಂಗಳು ಗಟ್ಟಲೆ ಹೋರಾಟಕ್ಕಿಳಿದಾಗ, ಪ್ರಾಸಂಗಿಕವಾಗಿ ಅವರ ಜೊತೆಗೂಡಿದ ರಾಜೇಂದ್ರಬಾಬು ಆ ಹೋರಾಟದುದ್ದಕ್ಕೂ ಅವರ ಬಲಗೈಯಾಗಿ ಬಡಿದಾಡಿದರು. ಆಗ ಅವರ ಜೊತೆಗಿದ್ದ ಇತರ ನಾಯಕರೆಂದರೆ, ಮೌಲಾನಾ ಮಜರುಲ್-ಹಕ್, ಬ್ರಿಜ್ ಕಿಶೋರ್ ಪ್ರಸಾದ ಮುಂತಾದವರು. ಈ ಸಂದರ್ಭದಲ್ಲಿಯೇ ಗಾಂಧೀಜಿ ಮತ್ತು ರಾಜೀವ್ ಬಾಬು ಅವರ ನಡುವೆ ಅಂಕುರಿಸಿ ಅಭಿವೃದ್ಧಿ ಹೊಂದಿದ ಗುರು ಶಿಷ್ಯನ ಸಂಬಂಧ ಅವರ ಬದುಕಿನುದ್ದಕ್ಕೂ ಬೆಳೆಯುತ್ತಾ, ಗಾಢ ಪ್ರಗಾಢವಾಗುತ್ತಾ ಹೋಯಿತು. ಅತ್ಯುನ್ನತ ರಾಜಕಾರಣಿಗಳಲ್ಲಿ ಕೇವಲ ರಾಜೇಂದ್ರ ಬಾಬು

ಮಾತ್ರ ಅತ್ಯಂತ ಹೆಚ್ಚಿನ ಕಾಲದವರೆಗೆ ಗಾಂಧೀಜಿಯ ಸಂಪರ್ಕ ಸಾನಿಧ್ಯದಲ್ಲಿದ್ದರು. ಅವರು ಮಾತ್ರ ಗಾಂಧೀಜಿಯ ರಚನಾತ್ಮಕ ಕಾರ್ಯಕ್ರಮ ಕುರಿತು ಗ್ರಂಥ ರಚಿಸಿದ್ದಾರೆ. ರಾಜೇನ್ ಬಾಬು ಗಾಂಧೀಜಿಯ ರಚನಾತ್ಮಕ ರಾಜಕಾರಣದ ನೈಜ ಅನುಚರರಾಗಿದ್ದರೆಂದರೆ, ಅವರು ಎಂದೂ ರಾಜಕೀಯ ವ್ಯವಹಾರವು ಮಾನವತೆಯಿಂದ ದೂರ ಸರಿಯದಂತೆ ಎಚ್ಚರ ವಹಿಸಿದ್ದರೆಂದರೆ ಉತ್ಪ್ರೇಕ್ಷೆಯ ಮಾತೇನಲ್ಲ.

ರಾಜೇಂದ್ರ ಬಾಬು 1962ರ ಮೇ, ಹನ್ನೆರಡರಂದು ರಾಷ್ಟ್ರಪತಿ ಹುದ್ದೆಯಿಂದ ನಿವೃತ್ತರಾದರು. ಅದಕ್ಕೆ ಎರಡು ದಿನ ಮುಂಚೆ ಅಂದರೆ ಮೇ 10 ರಂದು ಭಾರತದ ನಾಗರೀಕರಿಂದ ಅವರಿಗೆ ಒಂದು ಬೀಳ್ಕೊಡಿಗೆಯ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಅದೊಂದು ಅಪೂರ್ವ ಕಾರ್ಯಕ್ರಮವಾಗಿತ್ತು. ಇಡೀ ರಾಮಲೀಲಾ ಮೈದಾನದ ತುಂಬ ಕಾಲಿಡಲೂ ಸ್ಥಳವಿಲ್ಲದಂತೆ ಕಿಕ್ಕಿರಿದ ಜನಸ್ತೋಮ, ಆ ಘಟನೆ ಕುರಿತು ದಿನಕರಜಿಯವರು ಬೇರೊಂದು ಸಂದರ್ಭದಲ್ಲಿ ಆಡಿದ ಮಾತುಗಳು ಅವರ ವ್ಯಕ್ತಿತ್ವದ ಮಹತಿಯನ್ನು ಎತ್ತಿ ತೋರಿಸುತ್ತವೆ : " ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಒಂದು ಹುದ್ದೆಯನ್ನಲಂಕರಿಸಿದಾಗ ಅವನನ್ನು ಸ್ವಾಗತಿಸಿ ಹಾರ ತುರಾಯಿಗಳ ಮೂಲಕ ಸನ್ಮಾನಿಸುವುದು ಸಹಜ, ಸ್ವಾಭಾವಿಕ. ಆದರೆ ಆ ವ್ಯಕ್ತಿ ಆ ಹುದ್ದೆಯನ್ನು ತ್ಯಜಿಸುವಾಗಲೂ ಅಷ್ಟೇ ಗೌರವಾದರಗಳನ್ನು ಉಳಿಸಿಕೊಳ್ಳುವುದು ತೀರಾ ವಿರಳ." ಆದರೆ ರಾಜೇಂದ್ರ ಬಾಬು ಈ ಮಾತಿಗೆ ಅಪವಾದವಾಗಿದ್ದರು. ಅವರ ಬೀಳ್ಕೊಡುಗೆಯ ದಿನ ಜನರ ಕಣ್ತುಂಬಿ ಬಂದವು. ಅನೇಕರ ಗಂಟಲು ಕಟ್ಟಿತ್ತು. ಮುಖದಲ್ಲಿ ಅನಿರ್ವಚನೀಯ ದುಮ್ಮಾನ ಮಡುವುಗಟ್ಟಿತ್ತು.

ಈ ಪ್ರಪಂಚ ಗತೀತಾರ್ಕಿಕವಾಗಿದೆ. ಅದು ತನ್ನ ಚಲನೆಗೆ ಬೇಕಾದ ಶಕ್ತಿಯನ್ನು ತನ್ನೊಳಗಿಂದಲೇ ಪಡೆಯುತ್ತದೆ. ಜಗತ್ತಿನ ದ್ವಂದ್ವ ಸ್ವರೂಪವೇ ಅದರ ಚಾಲಕ ಶಕ್ತಿಯ ಸೆಲೆಯೂ ಆಗಿದೆ. ಪರಸ್ಪರ ವೈರುಧ್ಯಮಯವಾಗಿರುವ ಅದರ ಗುಣಗಳನ್ನು ಹೀಗೆ ಹೆಸರಿಸಬಹುದು. ಸತ್ಯ, ಅಸತ್ಯ, ಸ್ತ್ರೀ, ಪುರುಷ, ಬಡವ-ಬಲ್ಲಿದ, ಬೆಳಕು-ಕತ್ತಲೆ, ದೇವರು-ದಾನವ ಇತ್ಯಾದಿ ಇತ್ಯಾದಿ. ಭಾರತೀಯ ಪರಂಪರೆಯಲ್ಲಿ ಅರ್ಧನಾರೀಶ್ವರನ ಪರಿಕಲ್ಪನೆ ಈ ದ್ವಂದ್ವದ ಪರಮೋನ್ನತ ಸರ್ವೋತ್ಕೃಷ್ಟ ಅಭಿವ್ಯಕ್ತಿಯಾಗಿದೆ. ಭವ ಅಥವಾ ಶಿವ ಮತ್ತು ಭವಾನಿ ಅಥವಾ ಪಾರ್ವತಿ ಒಂದೇ ವ್ಯಕ್ತಿತ್ವದ ಭಿನ್ನ ಆಯಾಮಗಳಾಗಿವೆ. ಒಂದರ್ಥದಲ್ಲಿ ಭಿನ್ನವೂ ಹೌದು ಅಭಿನ್ನವೂ ಹೌದು. " ವಾಗರ್ಥವಿವ ಸಂಪ್ರಕ್ತೌ" ಎಂಬ ಮಾತುಗಳಲ್ಲಿ ಈ ಮೇಲಿನ ಕಲ್ಪನೆಯನ್ನು ಮಹಾಕವಿ ಕಾಳಿದಾಸನು ಅತ್ಯಂತ ಕಾವ್ಯಮಯವಾಗಿ ವರ್ಣಿಸಿದ್ದಾನೆ. ಇದೇ ಸಂಗತಿಯನ್ನು ತುಳಸಿದಾಸನು ಸೃಷ್ಟಿಕರ್ತ ಮತ್ತು ಸೃಷ್ಟಿ ಎರಡೂ ಒಂದೇ ಎಂದು ಹೇಳಿರುವ ಮಾತು : ಲಬಿಯತ ಭಿನ್ನ ನ ಭಿನ್ನಾ. ಬಾಬು ರಾಜೇಂದ್ರ ಪ್ರಸಾದರು ಆಧುನಿಕ ಭಾರತೀಯ ರಾಜಕಾರಣದ ಜೀವಂತ ಅರ್ಧನಾರೀಶ್ವರರಾಗಿದ್ದರು. ಶ್ರೀರಾಮನ ಬಗ್ಗೆ ಬರೆಯುತ್ತಾ ಭವಭೂತಿ ಹೇಳಿದ ಮಾತುಗಳು : ಅವನು ಹೂವಿಗಿಂತಲೂ ಮೃದು ಮಾರ್ದವನಾಗಿದ್ದ, ಅಂತೆಯೇ ಕಲ್ಲಿಗಿಂತಲೂ ಕಠಿಣನಾಗಿದ್ದ ಎಂಬ ಮಾತು ರಾಜೇನ್ ಬಾಬು ಅವರಿಗೂ ಅನ್ವಯಿಸುತ್ತಿದ್ದವು. ವ್ಯಕ್ತಿಯಲ್ಲಿ ಈ ಗುಣಗಳಿಲ್ಲದಿದ್ದರೆ, ಶಿಷ್ಟರ ಪಾಲನೆ, ದುಷ್ಟರ ದಂಡನೆ ಅಸಾಧ್ಯವಾಗುತ್ತದೆ. ಒಬ್ಬ ವ್ಯಕ್ತಿ ಅಥವಾ ಸಮಾಜ ತೀರಾ ಮೃದುವಾದರೆ, ಅದು ಬೆನ್ನೆಲುಬು ಕಳೆದುಕೊಂಡು ಬಾಗುತ್ತದೆ,

ಬಳುಕುತ್ತದೆ. ಹಾಗೆಯೇ ಅದು ಅವಶ್ಯಕತೆಗಿಂತಲೂ ಹೆಚ್ಚು ಕಠಿಣವಾದರೆ ಕ್ರೌರ್ಯ ಮೈಗೂಡಿಸಿಕೊಳ್ಳುತ್ತದೆ. ಈ ಎರಡೂ ಸಂದರ್ಭಗಳಲ್ಲಿಯೂ 'ರಾಜ ಧರ್ಮದ ಪರಿಪಾಲನೆ ಅಸಾಧ್ಯವಾಗುತ್ತದೆ. ರಾಜೇನ್ ಬಾಬು ಅವರದು ಸುವರ್ಣ ಮಾಧ್ಯಮ. ರಾಷ್ಟ್ರದ ಪ್ರಥಮ ಪ್ರಜೆಯಾಗಿ ತಮ್ಮ ನಡೆನುಡಿಯಲ್ಲಿ ಸಮರಸ ಸಾಂಗತ್ಯ ಮೇಳೈಸಿಕೊಂಡಿದ್ದರು.

ಜನಸಾಮಾನ್ಯರು ಅತ್ಯುತ್ತಮರನ್ನು ಅನುಸರಿಸುತ್ತಾರೆ ಎಂದು ಗೀತೆಯಲ್ಲಿ ಹೇಳಲಾಗಿದೆ. ಆದರೆ ಶ್ರೀರಾಮಕೃಷ್ಣ ಪರಮಹಂಸ, ಸ್ವಾಮಿ ದಯಾನಂದ, ಸ್ವಾಮಿ ವಿವೇಕಾನಂದ, ಲೋಕಮಾನ್ಯ ತಿಲಕ್, ಯೋಗಿ ಅರವಿಂದ, ಮಹಾತ್ಮಗಾಂಧಿ, ಜವಾಹರಲಾಲ್ ನೆಹರು, ವಲ್ಲಭ ಭಾಯಿ ಪಟೇಲ್, ರಾಜೇಂದ್ರ ಪ್ರಸಾದ, ರಾಜಗೋಪಾಲಾಚಾರಿ, ಅಬ್ದುಲ್ ಕಲಾಮ್ ಆಜಾದ್, ಸುಭಾಶ್ಚಂದ್ರ ಬೋಸ್, ಖಾನ್ ಅಬ್ದುಲ್ ಗಫಾರ್ ಖಾನ್, ಜಯಪ್ರಕಾಶ್ ನಾರಾಯಣ, ರಾಮ ಮನೋಹರ ಲೋಹಿಯಾ, ನರೇಂದ್ರ ದೇವ್ ರಂತಹ ಮಹಾ ಮೇಧಾವಿ ಮುತ್ಸದ್ದಿಗಳು ಬಾಳಿ ಬೆಳಗಿದ ಆಧುನಿಕ ಭಾರತದಲ್ಲಿ ಸನ್ನಡತೆ ಸಚ್ಚಾರಿತ್ರ್ಯದ ಪ್ರಭೆ ಯಾಕೆ ಇಂದು ಮತ್ತೆ ಕಾಣಿಸಿಕೊಳ್ಳುತ್ತಿಲ್ಲ ? ಸಾರ್ವಜನಿಕ ಜೀವನದಲ್ಲಿ ದಿನಂಪ್ರತಿ ಉಲ್ಬಣಿಸುತ್ತಿರುವ ಭ್ರಷ್ಟಾಚಾರವನ್ನು ಕಂಡು ಖಿನ್ನರಾಗುತ್ತಿರುವ ಜನಸಾಮಾನ್ಯರ ಮುಂದೆ ಉಜ್ವಲ ದಾರಿಯೊಂದು ಉಂಟೇ? ಯಾಕೆ ಇಂದು ಎಲ್ಲೆಲ್ಲೂ ದ್ವೇಷ, ಅಸೂಯೆ, ಅಪನಂಬುಗೆ, ಹಿಂಸೆ, ಕ್ರೌರ್ಯ, ಭಯೋತ್ಪಾದನೆಯ ವಾತಾವರಣ ತುಂಬಿ ತುಳುಕಾಡುತ್ತಿದೆ ? ದಿನದಿಂದ ದಿನಕ್ಕೆ ಹುರಿಗೊಂಡು ಬಲಿಷ್ಠವಾಗಬೇಕಾಗಿದ್ದ ರಾಷ್ಟ್ರೀಯ ಭಾವೈಕ್ಯತೆ ಯಾಕೆ ದುರ್ಬಲವಾಗುತ್ತಿದೆ ? ಮೇರು ವ್ಯಕ್ತಿತ್ವಗಳು ಮೆರೆಯಬೇಕಾದಲ್ಲಿ ಯಾಕೆ ಕುಬ್ಜರೇ ಕಂಗೊಳಿಸುತ್ತಿದ್ದಾರೆ ? ದುಷ್ಟರೇ ತಮ್ಮ ಕುಟಿಲ ಕೌಶಲ್ಯದ ಮೂಲಕ ಬದುಕಿನ ಸರ್ವ ಸೌಕರ್ಯಗಳನ್ನು ಕೊಳ್ಳೆ ಹೊಡೆಯುತ್ತಿದ್ದಾರೆ ? ಮಹಾತ್ಮ ಗಾಂಧೀಜಿಯ ಸತ್ಯ, ಅಹಿಂಸೆಯ ನಿಷ್ಠಾವಂತ ಅನುಯಾಯಿಗಳೇಕೆ ದಿಕ್ಕು ದೆಸೆಯಿಲ್ಲದೆ ಓಡಾಡುವಂತೆ ಮಾಡಲಾಗುತ್ತಿದೆ ?

ಸ್ವಾತಂತ್ರ್ಯಾನಂತರ ಅಧಿಕಾರ ವಹಿಸಿಕೊಂಡ ಮೇಲೆ ನಮ್ಮ ಉನ್ನತ ನೇತಾರರು ಅಧಿಕಾರದ ಪ್ರಭಾವ ಅನುಭವಿಸಲಿಲ್ಲವೆಂದು ಹೇಳಲಾಗದು. ರಾಜೇಂದ್ರ ಬಾಬು ಅವರನ್ನು ಹೊರತು ಪಡಿಸಿ ಬೇರೆ ಇನ್ನಾವುದೆ ಮುಖಂಡ ಈ ಮಾತಿನ ತಥ್ಯವನ್ನು ಒಪ್ಪಿಕೊಳ್ಳಲು ಪ್ರಯತ್ನಿಸಲಿಲ್ಲ ಅಥವಾ ಆ ಕುರಿತು ಆಳವಾದ ಚಿಂತನೆಯನ್ನು ಮಾಡಲಿಲ್ಲ.

ಮಹಾತ್ಮ ಗಾಂಧೀಜಿ 'ಹಿಂದು ಸ್ವರಾಜ್ಯ' (1909) ದಲ್ಲಿ ಪಾಶ್ಚಿಮಾತ್ಯ ಭೌತಿಕ ನಾಗರಿಕತೆಯನ್ನು ವಿರೋಧಿಸಿದ್ದರು. ಅದಕ್ಕೆ ಬದಲಾಗಿ, ಭಾರತೀಯ ನಾಗರೀಕತೆಯ ಬೌದ್ಧಿಕ ಪರಂಪರೆಯನ್ನು ಬಲವಾಗಿ ಬೆಂಬಲಿಸಿದ್ದರು. ಯೂರೋಪಿನ ಪರಂಪರೆಯನ್ನು ಅನುಸರಿಸುವದಕ್ಕೆ ಪ್ರತಿಯಾಗಿ, ನಮ್ಮ ಪದ್ಧತಿ, ಪರಂಪರೆಗಳಲ್ಲಿಯೇ ನಮ್ಮ ಬದುಕಿನ ದಾರಿ ಕಂಡುಕೊಳ್ಳಬೇಕೆಂಬ ಅಭಿಪ್ರಾಯ ಅವರದಾಗಿತ್ತು. ಆದರೆ ಸ್ವಾತಂತ್ರ್ಯ ಬಂದ ಮೇಲೆ ಭಾರತದ ನಾಯಕರು ಗಾಂಧೀಜಿ ಕಲಿಸಿದ ಪಾಠ, ತೋರಿದ ದಾರಿಯನ್ನು ಸಂಪೂರ್ಣವಾಗಿ ಮರೆತರು. ಈ ಕುರಿತು ರಾಜೇಂದ್ರ ಬಾಬು ಹೀಗೆ ಬರೆದಿದ್ದಾರೆ :

" ಈಗ ಈ ವಿಷಯ ಕುರಿತು ನಾನು ಹೆಚ್ಚು-ಹೆಚ್ಚು ವಿಚಾರ ಮಾಡಿದಂತೆಲ್ಲಾ ಮಹಾತ್ಮ ಗಾಂಧೀಜಿಯ ದೂರ ದೃಷ್ಟಿ, ವಿವೇಕ ನನ್ನ ಮೇಲೆ ಹೆಚ್ಚಿನ ಪ್ರಭಾವ ಬೀರುತ್ತಿವೆ. ಈಗ

ನಾವು ಸ್ವತಂತ್ರರಾಗಿದ್ದೇವೆ. ನಮ್ಮ ದೇಶದ ಭವಿಷ್ಯತ್ತನ್ನು ರೂಪಿಸುವ, ನಿರೂಪಿಸುವ ಅಧಿಕಾರ ನಮ್ಮ ಕೈಗಳಲ್ಲಿಯೇ ಇದೆ. ಆದರೂ ನಮ್ಮ ಶೈಕ್ಷಣಿಕ ವ್ಯವಸ್ಥೆಯ ದೌರ್ಬಲ್ಯದಿಂದಾಗಿ, ನಮ್ಮ ಭೌದ್ಧಿಕ ಕುಬ್ಜತನದಿಂದಾಗಿ ನಾವು ಯೂರೋಪಿನ ಪ್ರಭಾವದಿಂದ ಬಿಡಿಸಿಕೊಳ್ಳಲು ಇನ್ನೂ ಸಾಧ್ಯವಾಗಿಲ್ಲ. ನಾವು ಇವತ್ತಿಗೂ ಯಾವುದೇ ಸಂಗತಿಗಳ ಗುಣ-ಅವಗುಣಗಳನ್ನು ಅಳೆಯಲು ಯೂರೋಪಿನ ಮಾನದಂಡಗಳನ್ನೇ ಬಳಸುತ್ತಿದ್ದೇವೆ." 'ಬಾಪೂಜಿಯ ಸನ್ನಿಧಿಯಲ್ಲಿ'

ಸ್ವಾತಂತ್ರ್ಯ ಲಭಿಸಿದ ಮೇಲೆಯೂ ಲಾರ್ಡ್ ಮೆಕಾಲೆ ಗೆದ್ದು ಮಹಾತ್ಮಾ ಗಾಂಧಿ ಸೋತಿದ್ದಾರೆ. ಆದ್ದರಿಂದಲೇ ಮಹಾತ್ಮಾ ಗಾಂಧೀಜಿ ಸಂಸ್ಥಾಪಿಸಿದ್ದ ರಾಷ್ಟ್ರೀಯ ಶಾಲಾ-ಕಾಲೇಜುಗಳು ಸ್ವತಂತ್ರ ಭಾರತ ಸರಕಾರದ ಸಹಾಯ ಸಹಕಾರವಿಲ್ಲದೆ ಮುಚ್ಚಿ ಹೋಗಿವೆ. ಇದಕ್ಕೆ ವ್ಯತಿರಿಕ್ತವಾಗಿ, ಲಾರ್ಡ್ ಮೆಕಾಲೆ ಆರಂಭಿಸಿದ ಶಾಲಾ-ಕಾಲೇಜುಗಳು, ವಿಶ್ವವಿದ್ಯಾನಿಲಯಗಳು ಸರ್ಕಾರದ ಸಂಪೂರ್ಣ ಸಹಾಯದೊಂದಿಗೆ ಭರದಿಂದ ಬೆಳೆಯುತ್ತಿವೆ.

ಈ ವಿಷಯವನ್ನು ರಾಜೇಂದ್ರ ಬಾಬು ಇನ್ನೂ ವಿಸ್ತಾರವಾಗಿ ವಿವರಿಸಿದ್ದಾರೆ :

" ಇಂದು ನಮಗೆ ಬೇಕಾದ ಕಾಯ್ದೆಯನ್ನು ರೂಪಿಸುವ ಹಕ್ಕು ನಮಗಿದೆ ಆದರೆ ನಾವು ತಯಾರಿಸಿದ ಈ ಕರಡು ಪಾಶ್ಚಿಮಾತ್ಯ ಕಾನೂನುಗಳ ಮಾದರಿಯಲ್ಲಿಯೇ ಇದೆ. ಈ ಕಾಯ್ದೆಗಳಲ್ಲಿ ಪ್ರಪಂಚಕ್ಕೆ ಹೊಸದಾಗಿ ಏನನ್ನಾದರೂ ಕೊಡುವ ಸಾಧ್ಯತೆಗಳಿವೆ ಎಂದು ನಾವು ಹೇಳುವಂತಿಲ್ಲ. ಆದರೂ ಪ್ರತಿಯೊಂದು ದಿಶೆಯಲ್ಲಿಯೂ ನಮ್ಮ ದೇಶ ಪ್ರಗತಿ ಸಾಧಿಸಬೇಕೆಂದು ನಾವು ಬಯಸುತ್ತಿದ್ದೇವೆ. ಆದರೆ ಈ ಬಯಕೆ ಈಡೇರಲು ಶಿಕ್ಷಣ, ಸಚ್ಚಾರಿತ್ರ್ಯದ ಅವಶ್ಯಕತೆ ಇಲ್ಲವೆ ? ಇವುಗಳ ಅವಶ್ಯಕತೆ ಇದೆ ಎನ್ನುವುದಾದರೆ, ಅವುಗಳ ಸೃಷ್ಟಿಗಾಗಿ ನಾವು ಯಾವುದೇ ವಿಶೇಷ ಅವಕಾಶಗಳನ್ನು ಕಲ್ಪಿಸುತ್ತಿಲ್ಲ. ಯಾಕೆಂದರೆ, ಪಾಶ್ಚಿಮಾತ್ಯ ಮಾದರಿಯ ಕಾಯ್ದೆಗಳಲ್ಲಿ ಇಂಥ ಯಾವುದೇ ನಿದರ್ಶನಗಳು ಕಾಣ ಸಿಗುವುದಿಲ್ಲ."

ಪರಿಣಾಮತಃ ನಾವು ಯೂರೋಪಿನ ರಾಷ್ಟ್ರಗಳ ದಾರಿ ತುಳಿಯುವ ಮೂಲಕ ಪ್ರಗತಿ ಸಾಧಿಸಬಹುದೆಂದು ನಂಬಿದ್ದೇವೆ. ಆದರೆ ಅದರಿಂದ ಹೊರ ಹೊಮ್ಮಿದ ಎರಡು ದೌರ್ಬಲ್ಯಗಳಿಗೆ ನಾವು ಬಲಿಯಾಗಿದ್ದೇವೆ- ಮೊದಲನೆಯದಾಗಿ, ಯೂರೋಪಿನಂತೆ ನಾವು ಕೂಡ ಸುಖ-ಸಂಸ್ಕೃತಿಯ ಹುದುಲಲ್ಲಿ ಸಿಕ್ಕಿಬಿದ್ದಿದ್ದೇವೆ, ಎರಡನೆಯದಾಗಿ, ಇದರಿಂದ ಭಾರತ ತನ್ನತನವನ್ನು ಉಳಿಸಿಕೊಂಡು, ತನ್ನ ಸ್ವತಂತ್ರ ಪ್ರಭೆಯನ್ನು ಬೆಳಗಲು ವಿಫಲವಾಗಿದೆ. ಪಾಶ್ಚಿಮಾತ್ಯರನ್ನು ಅನುಕರಿಸುವ ಯಾವ ಕವಿಯನ್ನು ಗಣನೆಗೆ ತೆಗೆದುಕೊಳ್ಳದೆ ಪ್ರಪಂಚ, ರವೀಂದ್ರನಾಥ ಠಾಕೂರರ ಉದಾತ್ತ ಆಧ್ಯಾತ್ಮಿಕ ವಿಚಾರಗಳನ್ನು ಇಡೀ ಜಗತ್ತು ಮುಕ್ತ ಮನಸ್ಸಿನಿಂದ ಸ್ವಾಗತಿಸಿದೆ ಎಂಬುವುದನ್ನು ನಾವು ಮರೆತಿದ್ದೇವೆ. ಅಷ್ಟೇ ಅಲ್ಲ, ಪಾಶ್ಚಿಮಾತ್ಯ ಜಗತ್ತು ಭಾವಪೂರ್ಣವಾಗಿ ನಮಿಸಿದ್ದುದು ಭಾರತದ ಅರೆಬೆತ್ತಲೆ ಸಂತನಿಗೆ ಹೊರತು, ಸೂಟು-ಬೂಟುಧಾರಿ, ಠಾಕು ಠೀಕಿನ ಗಾಂಧಿಗಲ್ಲ. ಯಾವುದೇ ಒಂದು ರಾಷ್ಟ್ರ ತನ್ನ ಸಂಸ್ಕೃತಿ, ಪರಂಪರೆ ಮತ್ತು ಇತಿಹಾಸದಿಂದ

ಪರಭಾರೆಯಾಗಿ ಬದುಕಲಾರದು. ಅದು ತನ್ನ ಸ್ವಂತ ಸಂಸ್ಕೃತಿ ಪರಂಪರೆಗಳೊಳಗಿನಿಂದಲೇ ತನ್ನ ಪ್ರಗತಿಯ ಮಾರ್ಗವನ್ನು ಕಂಡುಕೊಳ್ಳಬೇಕು. ಇದಕ್ಕೆ ಇತಿಹಾಸದಲ್ಲಿಯೇ ಸಾಕಷ್ಟು ಪುರಾವೆಗಳು ದೊರಕುತ್ತವೆ. ಇದೊಂದು ಕಹಿ-ಸತ್ಯ. ಈ ಪ್ರಜ್ಞೆ ಇರದಿದ್ದವರೆಲ್ಲರೂ ಕಾಲಾನುಕ್ರಮದಲ್ಲಿ ತಮ್ಮ ಅಸ್ತಿತ್ವ ಕಳೆದುಕೊಂಡು ನಾಮಾವಶೇಷವಾಗಿ ಹೋಗಿದ್ದಾರೆ. ಗ್ರೀಸ್, ಈಜಿಪ್ಟ್ ಮತ್ತು ರೋಮನ್ ಅವನತಿ ಇದಕ್ಕೆ ಜ್ವಲಂತ ನಿದರ್ಶನಗಳಾಗಿವೆ. ಭಾರತ ಪುನಃ ಜೀವ ಪಡೆದದ್ದು ಗಾಂಧೀಜಿಯ ಪ್ರಯತ್ನಗಳಿಂದ. ಆದರೆ ಈ ದೇಶವನ್ನು ಹಾಳು ಗೆಡುವುತ್ತಿರುವ ನಾವು ಗಾಂಧೀಜಿಯ ಯೋಗ್ಯ ಉತ್ತರಾಧಿಕಾರಿಗಳಾಗಬಲ್ಲೆವೆ ?

ಅದು ಭಾರತೀಯ ಬ್ರಾಹ್ಮಣನ ಪರಂಪರೆಯಾಗಿರಲಿ, ಅಥವಾ ಶ್ರವಣನ ಸಂಪ್ರದಾಯವೇ ಆಗಿರಲಿ, ಎಲ್ಲೆಲ್ಲೂ ಸತ್ಯ-ಅಹಿಂಸೆ, ತ್ಯಾಗ, ತಪ, ಬ್ರಹ್ಮಚರ್ಯ, ವೈರಾಗ್ಯ, ಮುಂತಾದ ಎಲ್ಲ ತಾತ್ವಿಕ ಮೌಲ್ಯಗಳ ಮೇಲೂ ಸಮಾನ ಒತ್ತು ಕೊಟ್ಟಿರುವುದನ್ನು ಕಾಣುತ್ತೇವೆ. ಈ ಎಲ್ಲಾ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳುವ ವ್ಯಕ್ತಿ ನಿಜವಾದ ಅರ್ಥದಲ್ಲಿ ಮಾನವನೆನಿಸಿಕೊಳ್ಳುತ್ತಾನೆ. ಭಾರತ ಇಂಥ ಮಹಾನ್ ಸಂಪ್ರದಾಯವನ್ನು ಬಿಟ್ಟುಕೊಟ್ಟರೆ ತನ್ನ ಅಸ್ತಿತ್ವವನ್ನೇ ಕಳೆದು ಕೊಳ್ಳುತ್ತದೆ. ಇಂಥ ನಂಬುಗೆಯ ಕಾರಣದಿಂದಾಗಿಯೇ, ನಮ್ಮ ಶೈಕ್ಷಣಿಕ ವ್ಯವಸ್ಥೆಯಲ್ಲಿ ಭಾರತೀಯ ಮೌಲ್ಯಗಳನ್ನು ಒಳಗೊಳ್ಳಬೇಕೆಂಬ ವಿಚಾರವನ್ನು ರಾಜೇಂದ್ರ ಬಾಬು ಬೆಂಬಲಿಸಿದ್ದರು. ಗಾಂಧೀಜಿಯ ನಂತರ ಬಹುಶಃ ಅವರೊಬ್ಬರೇ ದೇಶಕ್ಕೆ ಈ ಕುರಿತು ಜಾಗೃತಿ ಮೂಡಿಸಲು ಪ್ರಯತ್ನಿಸಿದ್ದರು. ಆದರೆ ಅವರ ಮಾತಿಗೆ ಯಾರೂ ಕಿವಿಗೊಡಲಿಲ್ಲ, ಅವರ ಕರೆ ಕಾನನದ ಕೂಗಾಯಿತು ! ಯಾಕೆಂದರೆ, ಅಷ್ಟೊತ್ತಿಗಾಗಲೇ ಜನರು ಪಾಶ್ಚಿಮಾತ್ಯ ಭೌತಿಕ ಬದುಕಿನ ಆಕರ್ಷಣೆಗೆ ಬಲಿಯಾಗಿದ್ದರು. ಅಂದಿನ ಆ ದುಷ್ಪರಿಣಾಮದಿಂದ ಭಾರತ ಇಂದಿಗೂ ನರಳುತ್ತಿದೆ. ಬಹುಶಃ ಮುಂದೆಯೂ ನರಳುತ್ತದೆ. ಅದು ತನ್ನತನವನ್ನು ಕಳೆದುಕೊಂಡು ಗುರುತುಹಿಡಿಯಲೂ ಕಷ್ಟವಾಗುವ ದಿನ ಬರಬಹುದು.

ಭಾರತೀಯ ಪರಂಪರೆಯಲ್ಲಿ ಶ್ರೀರಾಮನನ್ನು ಮರ್ಯಾದಾ ಪುರುಷೋತ್ತಮನೆಂದು ಪರಿಗಣಿಸಲಾಗಿದೆ. ಯಾಕೆಂದರೆ, ಅವನು ಬದುಕಿನಲ್ಲಿ ಸಚ್ಚಾರಿತ್ರ್ಯಕ್ಕೆ ಅತ್ಯಂತ ಹೆಚ್ಚಿನ ಮಹತ್ವ ಕೊಟ್ಟಿದ್ದನು. ಅವನಿಗೆ ವೈಯಕ್ತಿಕ ಮತ್ತು ಸಾರ್ವಜನಿಕ ಬದುಕಿನಲ್ಲಿ ಭಿನ್ನತೆ ಎಂಬುವುದು ಇರಲಿಲ್ಲ. ವ್ಯಷ್ಟಿ-ಸಮಷ್ಟಿಗಳೆರಡಕ್ಕೂ ಒಂದೇ ನೀತಿ ಅನ್ವಯಿಸಬೇಕೆಂಬುವುದು ಅವನ ನಿಲುವಾಗಿತ್ತು. ಆದರೆ ಯೂರೋಪಿನ ಮಾತು ಹಾಗಲ್ಲ. ಗಾಂಧೀಜಿಯ ಹನ್ನೊಂದು ವ್ರತಗಳನ್ನು ನಿರೂಪಿಸುತ್ತಾ ರಾಜೇಂದ್ರ ಬಾಬು ಬರೆದ ಮಾತುಗಳು ಇವು :

> " ಆರೋಗ್ಯದ ವಿಧಿ-ವಿಧಾನ, ಆರೋಗ್ಯದ ಕುರಿತು ಪ್ರಯೋಗಗಳು, ಬ್ರಹ್ಮಚರ್ಯ ಬದುಕಿನ ಮೂಲಭೂತ ತತ್ವಗಳಾದ ಸತ್ಯ, ಅಹಿಂಸೆ- ಈ ಎಲ್ಲವೂ ಪರಸ್ಪರ ಅಂತರ ಸಂಬಂಧವುಳ್ಳವುಗಳಾಗಿವೆ. ಒಂದನ್ನುಳಿದು ಇನ್ನೊಂದನ್ನು ಅರ್ಥ ಮಾಡಿಕೊಳ್ಳುವುದು ಸಾಧ್ಯವಿಲ್ಲ. ಇನ್ನು ಪ್ರತ್ಯೇಕವಾಗಿ ಅವುಗಳನ್ನು ಬದುಕಿನಲ್ಲಿ ಆಚರಿಸುವುದಂತೂ ಅಸಾಧ್ಯದ ಮಾತೇ ಸರಿ. ಈ ತತ್ವಗಳ ಮೇಲೆ ಸಮಾಜವನ್ನು ನಿರ್ಮಿಸಬೇಕೆಂಬುವುದೇ ಅವರ ಗುರಿಯಾಗಿತ್ತು. ಆದ್ದರಿಂದಲೇ ಅವರಿಗೆ ರಾಜಕಾರಣ ಮತ್ತು ಧರ್ಮ ಎರಡು ಪರಸ್ಪರ

ವ್ಯಾವರ್ತಕವಾದ, ಭಿನ್ನ ಚಟುವಟಿಕೆಗಳಾಗಿರಲಿಲ್ಲ. ಹಾಗೆಯೆ ಅವರು ಖಾಸಗಿ ಬದುಕನ್ನು ಸಾರ್ವಜನಿಕ ಬದುಕಿನಿಂದ ಪ್ರತ್ಯೇಕಿಸಿ ನೋಡುತ್ತಿರಲಿಲ್ಲ."

ಭಾರತೀಯ ಪರಂಪರೆ ಮತ್ತು ಯೂರೋಪಿನ ಸಂಪ್ರದಾಯಗಳ ನಡುವಿನ ಸೂಕ್ಷ್ಮ ವ್ಯತ್ಯಾಸದ ಅಜ್ಞಾನದಿಂದಾಗಿಯೇ, ಸಾಮಾನ್ಯವಾಗಿ, ಚಾಣಕ್ಯನನ್ನು ಮೆಕ್ಯಾವಲಿ ಜೊತೆಗೆ ಹೋಲಿಸಲಾಗುತ್ತದೆ. ರಾಜಕಾರಣದಲ್ಲಿ ಅಂತಿಮ ಗುರಿ ಗೆಲುವು ಎಂಬುವುದು ಮೆಕ್ಯಾವಲಿ ನಂಬುಗೆಯಾಗಿತ್ತು. ಆದ್ದರಿಂದ ಗೆಲುವು ಸಾಧಿಸುವುದೇ ಮುಖ್ಯ. ಅದಕ್ಕಾಗಿ ನಾವು ಬಳಸುವ ಸಾಧನಗಳ ಬಗ್ಗೆ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಸನ್ಮಾರ್ಗವೋ, ದುರ್ಮಾರ್ಗವೋ, ಸಂಚೋ, ವಂಚನೆಯೋ- ಒಟ್ಟಿನಲ್ಲಿ ಗೆದಿಯಬೇಕು. ಅಂತಿಮ ವಿಜಯಕ್ಕಾಗಿ ಎಲ್ಲ ಸಾಧನ, ಮಾರ್ಗಗಳೂ ಸಮರ್ಥನೀಯವೆ- ಎಂಬ ನಂಬುಗೆ ಮೆಕ್ಯಾವಲಿಯದು. ಆದರೆ ಇದಕ್ಕೆ ವ್ಯತಿರಿಕ್ತವಾಗಿ, ಚಾಣಕ್ಯನ ನೀತಿ, ವೈಯಕ್ತಿಕ ಸಂಯಮದ ಮೇಲೆ ಒತ್ತು ಕೊಡುತ್ತದೆ. ನೀವು ನಿಮ್ಮ ಮೇಲೆಯೇ ಸಾಧಿಸುವ ಜಯ ನಿಮಗೆ ರಾಜಕಾರಣದಲ್ಲಿ ಯಶಸ್ಸು ದೊರಕಿಸಿ ಕೊಡಬಹುದೆಂಬುವುದು ಚಾಣಕ್ಯನ ನೀತಿಯಾಗಿತ್ತು.

ಗಾಂಧೀಜಿಯ ದೃಷ್ಟಿಯಲ್ಲಿ, ನಮ್ಮ ಬದುಕಿನ ಎಲ್ಲ ಚಟುವಟಿಕೆಗಳ ಗುರಿ ದೈವ ಸಾಕ್ಷಾತ್ಕಾರ. ಸತ್ಯವೇ ದೇವರೆಂಬುವುದು ಅವರ ನಂಬುಗೆಯಾಗಿತ್ತು. ಅಹಿಂಸೆ ಸತ್ಯದ ಇನ್ನೊಂದು ಆಯಾಮವಾಗಿತ್ತು. ಆದ್ದರಿಂದಲೇ ಭಾರತೀಯ ಸಮಾಜದ ರಾಜಕಾರಣಕ್ಕೆ ಗಾಂಧೀಜಿ ಬೆಂಬಲವಾಗಿ ನಿಂತಿದ್ದರು. ರಾಜೇಂದ್ರ ಬಾಬು ಅವರ ಬದುಕು ಮತ್ತು ಚಿಂತನೆಯ ಸಾರ ಸರ್ವಸ್ವ ಗಾಂಧೀವಾದವೇ ಆಗಿತ್ತು. ನಮ್ಮ ಬದುಕು ಅರ್ಥಪೂರ್ಣವಾಗಬೇಕಾದರೆ, ನಾವು ಪ್ರತಿಕ್ಷಣವೂ ಅದರ ಒಳ ಹೊಕ್ಕು ನೋಡಿ, ಅಲ್ಲಿ ಗಾಂಧೀಜಿಯ ತತ್ವ ಬೋಧೆಗಳಿಗೆ ಚ್ಯುತಿಯುಂಟಾಗದಂತೆ ಜಾಗರೂಕತೆ ವಹಿಸಬೇಕೆಂಬುವುದು ಬಾಬುಜಿಯ ನಿಲುವಾಗಿತ್ತು. ನಾವು ನಮ್ಮ ವೈಯಕ್ತಿಕ ಮತ್ತು ಸಾರ್ವಜನಿಕ ಬದುಕನ್ನು ಈ ಆದರ್ಶಗಳಿಗನು ಗುಣವಾಗಿ ನಡೆಸಲು ಸಿದ್ದರಾಗಿದ್ದೇವೆಯೇ ? ಅಂತರಂಗ-ಬಹಿರಂಗದ ಸಮನ್ವಿತ ಐಕ್ಯತೆಯು ತತ್ವಕ್ಕನುಗುಣವಾಗಿ ಬದುಕನ್ನು ನಡೆಸಲು ಅವಶ್ಯವಿರುವ ಭಾರತೀಯ ಪರಂಪರೆಯಲ್ಲಿಯೇ ನಮ್ಮ ನಿಷ್ಠೆ ಆಳವಾದದ್ದಾಗಿದೆಯೇ ?

ರಾಜೇಂದ್ರ ಬಾಬು ಅವರ ಬದುಕು ಗಾಂಧೀ ವಿಚಾರಧಾರೆಯ ಮೂರ್ತರೂಪದಂತಾದದ್ದು ಹೇಗೆ ? ಈ ಕುರಿತು ಸ್ವತಃ ಅವರೇ ಬರೆದದ್ದು : "ಮಹಾತ್ಮರ ಸನ್ನಿಧಿಯಲ್ಲಿ ಕೂಡುವ ಎಷ್ಟೋ ಅವಕಾಶಗಳು ನನಗೆ ದೊರೆತಿವೆ. ಅವರ ಮಾತುಗಳನ್ನಾಲಿಸುವ, ಅವರ ಬದುಕನ್ನು ಅತ್ಯಂತ ನಿಖರವಾಗಿ ನಿರೀಕ್ಷಿಸುವ ಸದಾವಕಾಶಗಳು ನನಗೆ ದೊರೆತಿವೆ." ಯಾರು ಪ್ರಾಂಜಲ ಮನಸ್ಸಿನಿಂದ ಜ್ಞಾನವನ್ನು ಅರಸುತ್ತಾರೆಯೋ ಅವರಿಗೆ ಅದು ದಕ್ಕುತ್ತದೆ ಎಂಬುವುದು ಗೀತೆಯ ಮಾತು. ಪರಿಶುದ್ಧ ಮನಸ್ಸಿನಿಂದ ಜ್ಞಾನಾನ್ವೇಷಣೆಗೆ ತೊಡಗಿದ್ದ ಒಬ್ಬ ವಿರಳ ವ್ಯಕ್ತಿ ರಾಜೇಂದ್ರ ಬಾಬು. ಉಪನಿಷತ್ತಿನ ನಿಜವಾದ ಅರ್ಥದಲ್ಲಿ ಅವರು ತಮ್ಮ ಗುರು ಗಾಂಧೀಜಿಯನ್ನು ಸದಾ ಅನುಸರಿಸುತ್ತಿದ್ದರು. ಆದ್ದರಿಂದಲೇ ಅವರ ಸ್ಫೂರ್ತಿಯ ಮೂಲ ಸೆಲೆ ಎಂದೂ ಬರಿದಾಗಲಿಲ್ಲ, ಬತ್ತಲಿಲ್ಲ. ಅಷ್ಟೇ ಅಲ್ಲ, ಅದರ ಬಗ್ಗೆ ಅವರಿಗೆ ನಿರಂತರ ನಿರ್ಮಮ

ಭಾವವೂ ಇತ್ತು. ಅವರು ತಮ್ಮ ಬದುಕಿನ ಕೊನೆಯ ಕ್ಷಣದವರೆಗೂ ಕರ್ಮಯೋಗವನ್ನು ಅನುಸರಿಸಿದರು, ಆಚರಿಸಿದರು. ಪಂಡಿತ ಜವಾಹರಲಾಲ್ ನೆಹರೂ, ಸರ್ದಾರ ಪಟೇಲ ಮತ್ತು ರಾಜೇಂದ್ರ ಬಾಬು ಈ ಮೂರು ಮುಖಂಡರು ತಮ್ಮ ಸಾರ್ವಜನಿಕ ಬದುಕು ಆರಂಭಿಸಿದ್ದು ಕ್ರಮವಾಗಿ ಅಲಹಾಬಾದ್, ಅಹ್ಮದಾಬಾದ್ ಮತ್ತು ಪಾಟ್ನಾ ಮುನ್ಸಿಪಾಲ್ಟಿಯ ಚೇರಮನ್‌ರಾಗಿ. ಮುನ್ಸಿಪಾಲ್ಟಿಯ ಅಧ್ಯಕ್ಷರಾಗಿ ಅಧಿಕಾರವಹಿಸಿಕೊಂಡ ಮೇಲೆ ಅವರಿಗೆ ನಾಗರಿಕ ಆಡಳಿತದ ಧರ್ಮ ಸೂಕ್ಷ್ಮಗಳನ್ನು ಅರ್ಥಮಾಡಿಕೊಳ್ಳುವ ಅವಕಾಶ ದೊರೆಯಿತು. ಆದರೆ ಇಂದಿನ ಬದಲಾದ ರಾಜಕೀಯ ಪರಿಸ್ಥಿತಿಯಲ್ಲಿ ಯಾರೂ ತಮ್ಮ ಸಾರ್ವಜನಿಕ ಬದುಕನ್ನು ಮುನ್ಸಿಪಾಲ್ಟಿಯಿಂದ ಆರಂಭಿಸಲು ಇಷ್ಟಪಡುವುದಿಲ್ಲ. ಇನ್ನೂ ಪಂಚಾಯಿತದಿಂದ ಆರಂಭಿಸುವುದಂತೂ ದೂರವೇ ಉಳಿಯಿತು. ಅನುಭವ ಹೀನ ವ್ಯಕ್ತಿಗಳು ಮಂತ್ರಿ ಅಥವಾ ಮುಖ್ಯಮಂತ್ರಿಗಳಾದೊಡನೆಯೇ ಆಡಳಿತದ ಲಗಾಮು ಕೈಗೆ ತೆಗೆದುಕೊಳ್ಳುತ್ತಾರೆ. ತತ್ಪರಿಣಾಮವಾಗಿ, ಎಲ್ಲ ಸಾತ್ವಿಕ ರೂಢಿ ಸಂಪ್ರದಾಯಗಳನ್ನು ಗಾಳಿಗೆ ತೂರುತ್ತಾರೆ. ಇದು ಅತ್ಯಂತ ಕಳವಳಕಾರಿಯಾದ ಸಂಗತಿಯಾಗಿದೆ.

ನಾನು ಇದನ್ನೆಲ್ಲಾ ಹೇಳುವುದಕ್ಕೆ ಕಾರಣವೆಂದರೆ, ಪ್ರಜಾಪ್ರಭುತ್ವದಲ್ಲಿ ಅಧಿಕಾರವೆಂಬುವುದು ಜನತೆಯ ಬೆಂಬಲವನ್ನವಲಂಭಿಸಿರುತ್ತದೆ. ಸಾರ್ವಜನಿಕ ಸೇವೆಯ ಮೂಲಕ ಈ ಬೆಂಬಲವನ್ನು ಸಂಪಾದಿಸಿಕೊಳ್ಳಲು ಪ್ರಯತ್ನಿಸಬೇಕೆ ಹೊರತು ಹಣದ ಹೊಳೆ ಹರಿಸುವುದರ ಮೂಲಕವಲ್ಲ ಅಥವಾ ಇನ್ನಾವುದೇ ಅನ್ಯಾಯದ ಮೂಲಕವೂ ಅಲ್ಲ. ಆದರೆ ಈ ದಿನಗಳಲ್ಲಿ ಇದು ಸರ್ವೇ ಸಾಮಾನ್ಯವಾಗಿ ಕಂಡುಬರುತ್ತಿದೆ. ಸಾರ್ವಜನಿಕರ ಬೆಂಬಲವಿಲ್ಲದಿದ್ದರೆ, ಪ್ರಜಾಪ್ರಭುತ್ವಕ್ಕೆ ಯಾವುದೇ ಅರ್ಥವಿಲ್ಲ. ಸಾರ್ವಜನಿಕ ದುಗುಡ-ದುಮ್ಮಾನ ದಟ್ಟಯಿಸಿ, ಅಂತಿಮವಾಗಿ ಒಂದು ದಿನ ಆಸ್ಫೋಟಗೊಳ್ಳುತ್ತದೆ.

ಪಂಡಿತ ನೆಹರೂ, ಸರ್ದಾರ ಪಟೇಲ ಮತ್ತು ರಾಜೇಂದ್ರ ಬಾಬು ಮುನ್ಸಿಪಾಲ್ಟಿ ಅಧ್ಯಕ್ಷರಾಗಿ ತಮ್ಮ ಸಾರ್ವಜನಿಕ ಜೀವನವನ್ನು ಆರಂಭಿಸುವ ಮೂಲಕ ಅವರು ಸಾರ್ವಜನಿಕ ಅಭಿಪ್ರಾಯಕ್ಕನುಗುಣವಾಗಿ ತಮ್ಮನ್ನು ತಾವು ರೂಪಿಸಿಕೊಳ್ಳಲು ಪ್ರಯತ್ನಿಸಿದ್ದರು. ಪ್ರಜಾಸತ್ತೆಯಲ್ಲಿ ಸಾರ್ವಜನಿಕ ಸದಭಿಪ್ರಾಯವೇ ಅಧಿಕಾರದ ಮೂಲ ಸ್ತೋತ್ರವಾಗಿರುತ್ತದೆ. ಯಾಕೆಂದರೆ, ಸಾರ್ವಜನಿಕ ಅಭ್ಯುದಯವೇ ಅದರ ನೆಲೆಗಟ್ಟಾಗಿರುತ್ತದೆ. (ಗೀತಾ). ಆದ್ದರಿಂದಲೇ ಅದು ತನ್ನಷ್ಟಕ್ಕೆ ತಾನು ಸಾಮಾನತೆಯನ್ನು ಸಾಧಿಸುವ ಶಕ್ತಿ ಪಡೆದುಕೊಂಡಿರುತ್ತದೆ. (ಯೋಗಕ್ಷೇಮಂ ವಹಾಮ್ಯಹಂ-ಗೀತಾ). ಸಾರ್ವಜನಿಕ ಅಭಿಪ್ರಾಯ ಬೆಳೆಯಲು ಅವಕಾಶ ಮಾಡಿಕೊಡದೆ, ಸ್ಥಳೀಯ ನಾಯಕರ ಅನಿಸಿಕೆಗಳನ್ನು ಗಮನಿಸದೆ, ಒಂದು ವೇಳೆ ನಾಯಕತ್ವವನ್ನು ಮೇಲಿನಿಂದ ಹೇರಿದರೆ ಪ್ರಜಾಪ್ರಭುತ್ವದ ಜೀವ-ಜೀವಾಳವಾಗಿರುವ ಸಾರ್ವಜನಿಕ ನೆಲೆ ಮತ್ತು ನೈತಿಕ ಅಧಿಕಾರ ನಶಿಸಿಹೋಗುತ್ತದೆ. ಭಾರತೀಯ ಪ್ರಜಾಸತ್ತೆಯ ದೊಡ್ಡ ನ್ಯೂನತೆಯೆಂದರೆ, ಸ್ಥಳೀಯ ನಿಕಾಯಗಳು ಪ್ರಜಾತಾಂತ್ರಿಕ ರೀತಿ-ನೀತಿಗಳಿಗನುಗುಣವಾಗಿ ಕಾರ್ಯಮಾಡುವುದಿಲ್ಲ. ಪಕ್ಷಗಳು ತಮ್ಮ ಮನಬಂದ ಅಭ್ಯರ್ಥಿಗಳನ್ನು ಅವುಗಳ ಮೇಲೆ ಹೇರುತ್ತವೆ. ಈ ವ್ಯವಸ್ಥೆಯಲ್ಲಿ ಮಾರ್ಕ್ಸ್‌ವಾದದ ಪ್ರಜಾತಾಂತ್ರಿಕ ಕೇಂದ್ರೀಯ ದೋಷಗಳೆಲ್ಲಾ ನುಸುಳಿಕೊಳ್ಳುತ್ತದೆ. ಆದರೆ ಮಾರ್ಕ್ಸ್‌ವಾದಿ ಪಕ್ಷಗಳಂತೆ, ಕೇಂದ್ರದ ನಾಯಕತ್ವ ಜವಾಬ್ದಾರಿಯನ್ನು ಹೊತ್ತುಕೊಳ್ಳಲು ಸಿದ್ಧವಾಗಿರುವುದಿಲ್ಲ.

ಕಾರ್ಯ ವಿಫಲತೆಯ ಸಂದರ್ಭಗಳಲ್ಲೆಲ್ಲಾ ಕೆಳಗಿನವರನ್ನು ದೂಷಿಸುತ್ತಾ ಮೇಲಿನವರೇ ಅಧಿಕಾರ ಚಲಾಯಿಸುವ ವ್ಯವಸ್ಥೆ ನಮ್ಮ ಪ್ರಜಾಪ್ರಭುತ್ವವನ್ನು ಸಂಪೂರ್ಣವಾಗಿ ದುರ್ಬಲಗೊಳಿಸಿದೆ.

ನಮ್ಮ ಪ್ರಜಾಪ್ರಭುತ್ವಕ್ಕೆ ಕಾದಿರುವ ಈ ಅಪಾಯ ರಾಜೇಂದ್ರ ಬಾಬು ಅವರಿಗೆ ಚೆನ್ನಾಗಿ ಗೊತ್ತಿತ್ತು. ಅವರು ಭಾರತದ ರಾಷ್ಟ್ರಪತಿಗಳಾಗಿ ಲೋಕ ಸಭೆ ಮತ್ತು ರಾಜ್ಯ ಸಭೆಯ ಜಂಟಿ ಅಧಿವೇಶನವನ್ನು ಉದ್ದೇಶಿಸಿ ಮಾಡಿದ ಕೊನೆಯ ಭಾಷಣದಲ್ಲಿ ಈ ಕುರಿತು ಅನೇಕ ವಿಷಯಗಳನ್ನು ಸ್ಪಷ್ಟಪಡಿಸಿದ್ದಾರೆ. ಚುನಾವಣೆಗಳ ಮ್ಯೇಲಾಗುತ್ತಿರುವ ಖರ್ಚು ನಿರಂತರವಾಗಿ ಹೆಚ್ಚಾಗುತ್ತಿದ್ದು, ಅದು ಭಾರತೀಯ ಪ್ರಜಾಪ್ರಭುತ್ವದ ಆರೋಗ್ಯಕರ ಬೆಳವಣಿಗೆಯ ದಾರಿಯಲ್ಲಿ ಅಪಾಯಕರವಾದ ಅಡಚಣೆಗಳನ್ನೊಡ್ಡುತ್ತಿದೆ. ಸಾರ್ವತ್ರಿಕ ಚುನಾವಣೆಗಳಲ್ಲಿ ಖರ್ಚಾಗುತ್ತಿರುವ ಬೃಹತ್ ಮೊತ್ತದ ಹಣ ಸಂಗ್ರಹಿಸುವ ಜವಾಬ್ದಾರಿ ಕೇಂದ್ರದ ಮುಖಂಡರ ಮೇಲೆ ಹೊರೆಸಿದರೆ, ಅದರಿಂದ ಸಹಜವಾಗಿಯೇ ಎಲ್ಲಾ ಅಧಿಕಾರ ಅವರ ಕೈಯಲ್ಲಿಯೇ ಕೇಂದ್ರಿಕೃತವಾಗುತ್ತದೆ. ಆಗ ಪ್ರಜಾಪ್ರಭುತ್ವವು ಒಂದು ಅಣಕವಾಗಿ ಮಾರ್ಪಡುತ್ತದೆ. ಹಣದ ಅಧಿಕಾರ ಪಾಶ್ಚಿಮಾತ್ಯ ಪ್ರಜಾಪ್ರಭುತ್ವಗಳಿಗಿಂತಲೂ ಭಾರತೀಯ ಪ್ರಜಾಸತ್ತೆಯ ಮೇಲೆ ಹೆಚ್ಚಿನ ದುಷ್ಪರಿಣಾಮ ಬೀರಿರುವುದನ್ನು ನಾವು ಕಾಣಬಹುದಾಗಿದೆ. ಪ್ರತಿಯೊಂದು ಪಕ್ಷದ ಮುಖಂಡರು ಪ್ರಜಾತಾಂತ್ರಿಕ ನೀತಿ ನಿಯಮಗಳನ್ನು ಉಲ್ಲಂಘಿಸುವ ಮೂಲಕ ಪ್ರಜಾಪ್ರಭುತ್ವದ ಬಹುದೊಡ್ಡ ವೈರಿಗಳಾಗಿ ಪರಿಣಮಿಸಿದ್ದಾರೆ.

ನೈತಿಕ ಮೌಲ್ಯಗಳಿಲ್ಲದ ರಾಜಕಾರಣ, ಆತ್ಮವಿಲ್ಲದ ದೇಹದಂತೆ ಎಂಬ ಗಾಂಧೀಜಿಯ ಮಾತನ್ನು ರಾಜೇಂದ್ರ ಬಾಬು ಅನೇಕ ಸಲ ಪುನರುಚ್ಚರಿಸುತ್ತಿದ್ದರು. ಈ ಬಗ್ಗೆ ಅವರು ಬರೆದದ್ದು ತುಂಬಾ ಗಮನಾರ್ಹವಾಗಿದೆ : " ಅಹಿಂಸೆ ಇಲ್ಲದೆ ಸತ್ಯವಾದ ನಡುವಳಿಕೆ ಅಸಾಧ್ಯ, ಸತ್ಯ ಮತ್ತು ಅಹಿಂಸೆಗಳೆರಡೂ ಅವಿಭಾಜ್ಯವಾಗಿ ಹೆಣೆದುಕೊಂಡಿವೆ." ದೇವರು ಸತ್ಯವೆಂದು ಎಲ್ಲರೂ ನಂಬಿದ್ದಾರೆ. ಆದರೆ ಗಾಂಧೀಜಿಯ ದೃಷ್ಟಿಯಲ್ಲಿ ಸತ್ಯವೇ ದೇವರು. ದೇವರನ್ನರಸುವ ಅರಿಯುವ ಏಕೈಕ ಮಾರ್ಗ ಸತ್ಯ, ಗುರಿ ಮತ್ತು ಸಾಧನಗಳ ನಡುವೆ ಯಾವುದೇ ವ್ಯತ್ಯಾಸವಿಲ್ಲವೆಂದು ಅವರು ಯಾವಾಗಲೂ ಹೇಳುತ್ತಿದ್ದರು. ಆದ್ದರಿಂದಲೇ ಅವರಿಗೆ ಸತ್ಯ ಮತ್ತು ದೇವರು ಅಭಿನ್ನವಾದ ಒಂದೇ ತತ್ವವಾಗಿತ್ತು. ಈ ನಂಬುಗೆಯೇ ಭಾರತೀಯ ಪರಂಪರೆ ಮತ್ತು ರಾಜಕಾರಣದ ಬುನಾದಿಯಾಗಿದೆ. ಈ ಮೂಲಭೂತ ಸಂಗತಿಯನ್ನು ಉಲ್ಲಂಘಿಸಿದರೆ, ಭಾರತೀಯ ರಾಜಕಾರಣವು ಪಾಶ್ಚಿಮಾತ್ಯ ರಾಜಕಾರಣದ ಅನುಕರಣೆ ಮಾತ್ರವಾಗುತ್ತದೆ. ಹಾಗಾಗಿ ಅದು ಎಂದೆಂದಿಗೂ ಭಾರತೀಯ ಜನತೆಯ ವಾಸ್ತವ ಸಮಸ್ಯೆಗಳನ್ನು ಪರಿಹರಿಸಲಾರದು. ಸ್ವತಂತ್ರ್ಯ ಭಾರತ ಭೌತಿಕ ಕ್ಷೇತ್ರದಲ್ಲಿ ಮಹತ್ತರ ಅಭಿವೃದ್ಧಿಯನ್ನೇನೋ ಸಾಧಿಸಿದೆ. ಆದರೆ ಕುಸಿಯುತ್ತಿರುವ ನೈತಿಕತೆಯ ಮಟ್ಟದಿಂದಾಗಿ, ಇಂದು ಭಾರತೀಯ ರಾಜಕಾರಣ ಮತ್ತು ಆಡಳಿತದಲ್ಲಿ ಹತಾಶೆಯ ಸ್ಥಿತಿ ಕಂಡುಬರುತ್ತಿದೆ. ಲೋಭ, ಹಿಂಸೆ ತೀರ ತೀವ್ರಗೊಂಡು ಯಾವ ಮಟ್ಟಕ್ಕೆ ಮುಟ್ಟಿವೆಯೆಂದರೆ, ಯಾರೊಬ್ಬರೂ ವಿವೇಕ, ವಿಚಾರದ ಮಾತಿಗೆ ಕಿವಿಗೊಡುತ್ತಿಲ್ಲ. ದೇಶದ ಪ್ರತಿಯೊಬ್ಬ ನಾಗರಿಕನೂ ಅತ್ಯಂತ ಗರಿಷ್ಠ ಮಟ್ಟದ ಭೌತಿಕ ಸುಖ ಸಂಪತ್ತನ್ನು ಸಂಚಯಿಸಿಕೊಳ್ಳಲು ಹೊಂಚು ಹಾಕುತ್ತಿದ್ದಾನೆ. ಉನ್ಮಾದದಿಂದ ಸುಖಲೋಲುಪತೆಯ ಬೆಂಬತ್ತುತ್ತಿದ್ದಾನೆ. ಪ್ರತಿಯೊಬ್ಬನು ಸಾಧ್ಯವಿದ್ದಷ್ಟು

ಹಣಗಳಿಸಲು ಹೆಣಗುತ್ತಿದ್ದಾನೆ. ಹಣ ಉಳ್ಳವರ ಕೈಯಲ್ಲಿಯೇ ನಮ್ಮ ಪ್ರಜಾಸತ್ತೆಯ ಭವಿಷ್ಯತ್ತು ನಿರ್ಧಾರವಾಗುವಂತೆ ಕಾಣುತ್ತಿದೆ. ನೀವೇನೋ ಇದನ್ನು ಪ್ರಜಾಸತ್ತೆ ಎಂದು ಕರೆಯಬಹುದು. ಆದರೆ ರಾಜೇಂದ್ರ ಬಾಬು ಈ ಕುರಿತು ಒಂದು ದೊಡ್ಡ ಪ್ರಶ್ನಾರ್ಥಕ ಚಿಹ್ನೆ ಇಟ್ಟಿದ್ದಾರೆ.

ತ್ಯಾಗ, ಸಮರ್ಪಣೆಯಿಂದ ಕೂಡಿದ ಯುಗವು ಸಂಸ್ಕೃತಿ ಮತ್ತು ನಾಗರಿಕತೆಯನ್ನು ಕಟ್ಟಿ ಬೆಳೆಸಿದರೆ, ಭೌತಿಕ ಸುಖಲೋಲುಪತೆಯ ಯುಗವು ಅವುಗಳ ಅವನತಿಗೆ ಕಾರಣೀಭೂತವಾಗುತ್ತದೆ ಎಂದು ಅಮೇರಿಕೆಯ ವಿಖ್ಯಾತ ಸಮಾಜವಾದಿ ತತ್ವಜ್ಞಾನಿ ಸೋರೊಕಿನ್ ಬರೆದಿದ್ದಾನೆ. ಶ್ರೀರಾಮಕೃಷ್ಣ ಪರಮಹಂಸರಿಂದ ಮಹಾತ್ಮಾ ಗಾಂಧೀಜಿಯವರೆಗಿನ ಕಾಲವು ತ್ಯಾಗಕ್ಕೆ ಹೆಸರಾಗಿತ್ತು. ಆದ್ದರಿಂದಲೇ ಆ ಅವಧಿಯಲ್ಲಿ ನಮ್ಮ ಸಂಸ್ಕೃತಿ, ನಾಗರೀಕತೆಗಳು ಉತ್ತರೋತ್ತರವಾಗಿ ಬೆಳೆದವು. ಆದರೆ ಅನಂತರದ ಕಾಲಾವಧಿ ಭೌತಿಕ ಭೋಗದ ಕಾಲಾವಧಿಯಾಗಿದ್ದರಿಂದ ನಮ್ಮ ಸಂಸ್ಕೃತಿ ಮತ್ತು ನಾಗರೀ೦ ಕತೆಯ ಅಧೋಗತಿ ಆರಂಭವಾಯಿತು. ಸೋರೊಕಿನ್‌ನ ವಿಶ್ಲೇಷಣೆಯ ತೀರ್ಮಾನಕ್ಕೆ ಉತ್ತರ ಕಂಡುಕೊಳ್ಳುವುದು ಸರಳವಾದ ಕೆಲಸವೇನಲ್ಲ. ಭೌತಿಕ ಭೋಗದ ಬೆಂಬತ್ತುವುದರ ಅಪಾಯ ಕುರಿತು ರಾಜೇಂದ್ರ ಬಾಬು ಅನೇಕ ಸಲ ಮುನ್ನೆಚ್ಚರಿಕೆ ನೀಡಿದ್ದರು.

ಮಾನವ ಬದುಕಿನ ಸಂಪೂರ್ಣ ಮತ್ತು ಸಂತುಲಿತ ಉಜ್ಜೀವನಕ್ಕಾಗಿ ಸಾಮಾಜಿಕ, ಆರ್ಥಿಕ, ಆಡಳಿತಾತ್ಮಕ, ಸಾಂಸ್ಕೃತಿಕ, ಆಧ್ಯಾತ್ಮಿಕ ಪ್ರಕ್ರಿಯೆಯ ಸಮಗ್ರ ಅಭಿವೃದ್ಧಿಯ ಅವಶ್ಯಕತೆ ಇರುತ್ತದೆ. ಆದರೆ ಆಳುವ ಅಧಿಕಾರ ಒಂದು ಬಿಟ್ಟರೆ ಬೇರೆ ಇನ್ನಾವುದೆ ಅಧಿಕಾರವೇ ಇರುವುದಿಲ್ಲವೆಂಬುವುದು ಹುರುಳಿಲ್ಲದ ಮಾತು. ಯಾಕೆಂದರೆ ಮಹಾತ್ಮಾ ಗಾಂಧಿ, ಆಚಾರ್ಯ ವಿನೋಬಾ ಭಾವೆ, ಮತ್ತು ಲೋಕನಾಯಕ ಜಯಪ್ರಕಾಶ ನಾರಾಯಣ-ಇವರೆಂದೂ ಅಧಿಕಾರದ ಗದ್ದುಗೆಯಲ್ಲಿ ಪವಡಿಸಿದವರಲ್ಲ. ಆದರೂ ಅಧಿಕಾರದಲ್ಲಿದ್ದ ಅನೇಕರು ಇವರ ಪದತಲದಲ್ಲಿ ಕುಳಿತು ಪುನೀತರಾದದ್ದು ಇಲ್ಲಿ ಹೇಳುವ ಅವಶ್ಯಕತೆ ಇಲ್ಲವಷ್ಟೆ ? ಇದು ಯಾಕೆ, ಗೊತ್ತೆ ? ಯಾಕೆಂದರೆ, ರಾಜ್ಯಾಧಿಕಾರವು ಪಾಶವೀಶಕ್ತಿಯಾಗಿದ್ದರೆ, ಸಂತನ ಸಾತ್ವಿಕ ಶಕ್ತಿ ನೈತಿಕ ಬಲವಾಗಿರುತ್ತದೆ. ರಾಜ್ಯಾಧಿಕಾರ ಮತ್ತು ನೈತಿಕ ಬಲ ಎರಡೂ ಪರಸ್ಪರ ಪೂರಕವಾಗಿದ್ದಾಗ ಮಾತ್ರ ಸಮಾಜದ ಸಕಲಾಂಗಗಳು ಸಮನ್ವಿತ ಹಾಗೂ ಸಂತುಲಿತ ಬೆಳವಣಿಗೆ ಕಾಣುವವು. ಆದರೆ ಇದಕ್ಕೆ ವ್ಯತಿರಿಕ್ತವಾಗಿ, ಆ ಎರಡು ಶಕ್ತಿಗಳ ಮಧ್ಯ ವೈರುಧ್ಯ ಕಾಣಿಸಿ ಕೊಂಡರೆ, ಸಾರ್ವಜನಿಕ ಕಲ್ಯಾಣದ ಪ್ರಕ್ರಿಯೆ ಕಲುಷಿತಗೊಳ್ಳುವುದು. ಇಂಥ ಸನ್ನಿವೇಶದಲ್ಲಿ ಸಮಾಜ ತನ್ನ ಪ್ರವಾಹಿ ಗುಣ ಕಳೆದು ಕೊಂಡು 'ಸ್ಥಾಯಿಯಾಗುವುದು, ಅದು ತನ್ನ ಜೀರ್ಣಾಗ್ನಿಯನ್ನು ಕಳೆದುಕೊಂಡು, ಒಳಗಿನಿಂದಲೇ ವಿಘಟಿಸಲಾರಂಭಿಸುತ್ತದೆ.

ತುಳಸಿದಾಸರ ಶ್ರೀರಾಮ ಹೀಗೆ ಹೇಳಿದ್ದಾನೆ :

" ಜಾಂ ಅನೀತಿ ಕಮ ಭಾಸಾವು ಭಯಿ

ತೌ ಮೋಂಹಿ ಚಿರಜಾವು ಭಯ ಬಿಸರಾಯಿ "

ಸಾರ್ವಜನಿಕ ಕಲ್ಯಾಣದ ರಾಜಕಾರಣವನ್ನು ಸಾರ್ವಜನಿಕ ತಾತ್ವಿಕ ಧೋರಣೆಯನ್ನಾಗಿ ಪರಿಗಣಿಸುವುದೇ ಸೂಕ್ತವೆಂಬುವುದು ಈ ಮೇಲಿನ ಮಾತಿನಿಂದ ಸ್ಪಷ್ಟವಾಗುತ್ತದೆ. ವಾಸ್ತವವಾಗಿ, ನಿಜವಾದ ಬಲ, ಅಧಿಕಾರವೆಂಬುವವು ನ್ಯಾಯನಿರ್ಭೀತಿಯಲ್ಲಿ ಇರುತ್ತವೆ. ಭಯ, ಅನ್ಯಾಯಗಳಿದ್ದಲ್ಲಿ ಪ್ರಜಾಪ್ರಭುತ್ವದ ಆರೋಗ್ಯ ಪೂರ್ಣ ಅಭಿವೃದ್ಧಿ ಸಾಧ್ಯವಿಲ್ಲ.

ರಾಜಕಾರಣಿಯಾಗಿಯೂ ರಾಜೇಂದ್ರ ಬಾಬು ಎಂದೂ ನ್ಯಾಯ ಮಾರ್ಗದಿಂದ ದೂರ ಸರಿಯಲಿಲ್ಲ. ತಮ್ಮ ವೈಯಕ್ತಿಕ ಹಿತಾಸಕ್ತಿಗೆ ಧಕ್ಕೆಯಾಗಬಹುದೆಂಬ ಲೆಕ್ಕಾಚಾರದಿಂದ ಸತ್ಯವನ್ನು ನುಡಿಯಲು ಕಿಂಚಿತ್ತೂ ಹಿಂಜರಿಯಲಿಲ್ಲ. ಹೂವಿನ ಮೃದುತ್ವ ಮತ್ತು ವಜ್ರದ ಕಾಠಿಣ್ಯ ಎರಡೂ ಸಮರಸವಾಗಿ ಬೆರೆತ ಆದರ್ಶ ವ್ಯಕ್ತಿತ್ವ ಅವರದು. ಆದ್ದರಿಂದಲೇ ನಾನು ಅವರನ್ನು ಆಧುನಿಕ ಭಾರತೀಯ ರಾಜಕಾರಣದ ಅರ್ಧನಾರೀಶ್ವರನೆಂದು ಕರೆಯುತ್ತಿದ್ದೇನೆ. ಅವರ ನುಡಿ, ಸ್ವಭಾವದಲ್ಲಿ ನಯವಿತ್ತು, ವಿನಯವಿತ್ತು. ಆದರೆ ಸತ್ಯ ಅಹಿಂಸೆಯ ಮಾರ್ಗ ಅನುಸರಿಸುವ ಪ್ರಸಂಗ ಬಂದಾಗ ಅವರ ನಡೆ ವಜ್ರಕಠಿಣವಾಗುತ್ತಿತ್ತು, ನಿಲುವು ಅನವ್ಯವಾಗುತಿತ್ತು. ಭಾರತದ ರಾಷ್ಟ್ರಪತಿಗಳಾಗಿ ಅವರು ಕೊರೆದ ಲಕ್ಷ್ಮಣರೇಖೆ, ನಮ್ಮ ಪ್ರಜಾಪ್ರಭುತ್ವದ ರಕ್ಷಾಕವಚವಾಗಿದೆ. ಈ ಕುರಿತು ಅವರು ಸವೆಸಿದ ದಾರಿ, ತೆಗೆದುಕೊಂಡ ತೀರ್ಮಾನಗಳು, ಪುನರಪಿ ಮನನೀಯವಾಗಿವೆ.

ನ್ಯಾಯವೇ ರಾಜಕಾರಣದ ನೆಲೆಯಾಗಿರುತ್ತದೆ. ಆದರೆ ನ್ಯಾಯದ ನೆಲೆ ಯಾವುದು ? ಆಧ್ಯಾತ್ಮವೇ ನ್ಯಾಯದ ಬೇರು, ಬುನಾದಿ. ನಾನಿಲ್ಲಿ ಉದ್ದೇಶಪೂರ್ವಕವಾಗಿ 'ಧರ್ಮ' ಎಂಬ ಪದವನ್ನು ಬಳಸುತ್ತಿಲ್ಲ. ಇತ್ತೀಚಿಗೆ ಧರ್ಮ ಎಂಬ ಪದವನ್ನು ಮುಖ್ಯವಾಗಿ ಕೋಮುವಾದಿ ಅರ್ಥದಲ್ಲಿ ಬಳಸಲಾಗುತ್ತಿದೆ. ಆ ಅರ್ಥದಲ್ಲಿಯೇ ಧರ್ಮ 'ನಿರಪೇಕ್ಷ' Secular ಎಂಬ ಪದ ಹೆಚ್ಚು ಪ್ರಚಾರಕ್ಕೆ ಬಂದಿದೆ. ಇದು ಎಲ್ಲವನ್ನು ಒಳಗೊಳ್ಳುವ 'ಸನಾತನ ಧರ್ಮ' ವಲ್ಲ. ಮನುಸ್ಮೃತಿಯ ಪ್ರಕಾರ, ಈ ಸನಾತನ ಧರ್ಮಕ್ಕೆ ಹತ್ತು ಗುಣಲಕ್ಷಣಗಳಿರುತ್ತವೆ. ಗಾಂಧೀಜಿ ಅದನ್ನು ಇನ್ನೂ ಸುಧಾರಣೆಗೊಳಿಸಿ, ಅದಕ್ಕೆ ಆದೇಶದ ರೂಪ ಕೊಟ್ಟು ಅದನ್ನು ರಾಷ್ಟ್ರೀಯ ಸೇವೆಯ ತಳಹದಿಯನ್ನಾಗಿ ಮಾರ್ಪಡಿಸಿದರು. ಧರ್ಮದ ಕೋಮುವಾದಿ ರೂಪ ಸಂಕುಚಿತತೆಯಿಂದ, ಮತಾಂಧತೆಯಿಂದ ಕೂಡಿರುತ್ತದೆ. ಅದು ದ್ವೇಷ, ತ್ವೇಷ ಮತ್ತು ಹಿಂಸೆಯ ವಾತಾವರಣವನ್ನು ಸೃಷ್ಟಿಸುತ್ತದೆ. ಕೋಮು ಅತೀತವಾದ ಧರ್ಮದ ಇನ್ನೊಂದು ರೂಪವಿರುತ್ತದೆ. ಅಲ್ಲಿ ಕೋಮುವಾದಕ್ಕೆ ಎಡೆಯಿರುವುದಿಲ್ಲ. ಅಲ್ಲಿ ವ್ಯಕ್ತಿಯು, ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಸುಖ ಸಂತೋಷವನ್ನರಸುತ್ತಾನೆ. ಐಹಿಕ, ಪಾರಲೋಕಿಕ- ಎರಡೂ ಬದುಕಿನಲ್ಲಿ ದುಃಖ ದುಮ್ಮಾನವಳಿದು, ಆನಂದಾತಿಶಯ ತುಂಬಿ ತುಳುಕಲೆಂದು ಹಂಬಲಿಸುತ್ತಾನೆ. ಆಧ್ಯಾತ್ಮದ ಪರಮಸ್ಥಿತಿಯಲ್ಲಿ ವ್ಯಕ್ತಿ, ದೇವರೊಂದಿಗೆ ತನ್ನ ತಾದಾತ್ಮ್ಯವನ್ನನುಭವಿಸುತ್ತಾನೆ. ಐಹಿಕ ಬದುಕಿನ ಭಿನ್ನಭಾವದಿಂದ ಮೇಲೇರಿ, ಎಲ್ಲ ದ್ವಂದ್ವಗಳನ್ನು ಕಳೆದುಕೊಂಡು, ಸಮಭಾವದ

ಸಾಕಾರವಾಗುತ್ತಾನೆ. ಆಸೆ ಅಮಿಷಗಳಿಂದ ಮುಕ್ತನಾಗಿ, ಕೈವಲ್ಯ ಸ್ಥಿತಿಯನ್ನು ಅನುಭವಿಸುತ್ತಾನೆ. ಲಾಭಕ್ಕೆ ಹಿಗ್ಗುವ, ನಷ್ಟಕ್ಕೆ ಕುಗ್ಗುವ ಅವಸ್ಥೆಯನ್ನು ಮೆಟ್ಟಿ, ಮೀರಿ, ಸ್ಥಿತಪ್ರಜ್ಞಾನಾಗುತ್ತಾನೆ. ಭವ ಬಂಧನದಿಂದ ಮುಕ್ತನಾದ ಇಂಥ 'ಕರ್ಮ' ಯೋಗಿಯ 'ರಾಜಕಾರಣ' ಮೂಲಭೂತವಾಗಿ ಆಧ್ಯಾತ್ಮಿಕ ಸ್ವರೂಪದ್ದಾಗಿರುತ್ತದೆ. ಸಾರ್ವತ್ರಿಕ, ಸಾರ್ವಜನಿಕ ಕಲ್ಯಾಣವೇ ಅದರ ಗುರಿ ಗಮ್ಯವಾಗಿರುತ್ತದೆ. ಎಂಥ ಸಂಕಟದ ಸಮಯದಲ್ಲೂ ಅದು ನ್ಯಾಯಪಥದಿಂದ ಕದಲುವುದಿಲ್ಲ. ಪಥಭ್ರಷ್ಟತೆ ಅಂಥ ರಾಜಕಾರಣದ ಸಮೀಪವೂ ಸುಳಿಯುವುದಿಲ್ಲ. ಧರ್ಮದ ಇಂಥ ಆಧ್ಯಾತ್ಮಿಕ ಅರ್ಥದಲ್ಲಿಯೇ ಮಹಾತ್ಮಾ ಗಾಂಧೀ ಮತ್ತು ರಾಜೇಂದ್ರ ಬಾಬುಜಿ ಧರ್ಮ ಮತ್ತು ರಾಜಕಾರಣವನ್ನು ಪರಸ್ಪರ ಹೊಸೆದಿದ್ದರು, ಬೆಸೆದಿದ್ದರು. ರಾಜಕಾರಣ ಮತ್ತು ಚಾರಿತ್ರ್ಯ ನಿರ್ಮಾಣ ಎರಡೂ ಒಂದಕ್ಕೊಂದು ತಳುಕು ಹಾಕಿಕೊಳ್ಳುವ ಅವಶ್ಯಕತೆ ಇದೆ ಎಂದು ರಾಜೇಂದ್ರ ಬಾಬು ಮೇಲಿಂದ ಮೇಲೆ ಹೇಳುತ್ತಿದ್ದರು. ಒಬ್ಬ ವ್ಯಕ್ತಿ ಎಷ್ಟೇ ಕಲಾಕುಶಲಿಯಾಗಿರಬಹುದು, ಸಮರ್ಥನಾಗಿರಬಹುದು. ಆದರೆ ಅವನೊಬ್ಬ ಲಫಂಗನಾಗಿದ್ದರೆ, ದಗಾಖೋರನಾಗಿದ್ದರೆ, ಅವನಿಂದ ದೇಶದ ಸಮೃದ್ಧಿ ಸಾಧ್ಯವಾಗುವುದಿಲ್ಲ.

ಇಪ್ಪತ್ತನೆಯ ಶತಮಾನದ ಕೊನೆಯ ದಶಮಾನದಲ್ಲಿ, ಅಭೂತ ಪೂರ್ವ ರಾಜಕೀಯ ಬದಲಾವಣೆಗಳ ಯುಗವೊಂದು ಆರಂಭವಾಗಿದೆ. ಈ ಶತಮಾನದ ಮೊದಲ ಏಳು ದಶಕಗಳುದ್ದಕ್ಕೂ ಮಾರ್ಕ್ಸ್‌ವಾದಿಗಳು ಒಂದು ಹೊಸ ನಾಗರಿಕತೆಯನ್ನು ಕಟ್ಟಲು ಪ್ರಾರಂಭಿಸಿದರು. ಹಿಂಸೆ ಮತ್ತು ಅಧಿಕಾರದ ಕೇಂದ್ರೀಕರಣ ಅವರ ಕೈದುಗಳಾಗಿದ್ದುವು. ಆದರೆ ಇಂದು ಅವರೇ ಆ ನಾಗರಿಕತೆಯನ್ನು ನಾಶಮಾಡುತ್ತಿದ್ದಾರೆ. ಐದು ದಶಕಗಳ ಹಿಂದೆ ಜರ್ಮನಿಯನ್ನು ವಿಭಜಿಸಿದ ಶಕ್ತಿಗಳೇ ಅದನ್ನು ಒಗ್ಗೂಡಿಸುವಲ್ಲಿ ಈಗ ಸಕ್ರಿಯ ಪಾತ್ರ ವಹಿಸುತ್ತಿವೆ. ಹಿಂಸಾ ರಾಜಕಾರಣದ ಒಂದು ಸುತ್ತು ಈಗ ಪೂರ್ತಿಯಾಯಿತೆಂದು ಕಾಣುತ್ತದೆ.

ಭಾರತದ ವಿಭಜನೆ ನಮ್ಮ ದೇಶದ ಕೋಮು ಸಮಸ್ಯೆಗಳಿಗೆ ಪರಿಹಾರವಲ್ಲವೆಂದು ರಾಜೇಂದ್ರ ಬಾಬು ಅನೇಕಸಲ ಸಾರಿ ಹೇಳಿದ್ದರು. ಪಾಕಿಸ್ತಾನವನ್ನು ಸೃಷ್ಟಿಸಿದ 'ಎರಡು ರಾಷ್ಟ್ರಗಳ ಪರಿಕಲ್ಪನೆ' ಐತಿಹಾಸಿಕ ಸತ್ಯಕ್ಕೆ ವಿರುದ್ಧವಾದದ್ದು. ಅಸಾಧುವಾದದ್ದು. ಅಮಾನವೀಯವಾದದ್ದು. ಅಷ್ಟೇ ಅಲ್ಲ, ಅನೈತಿಕವಾದದ್ದು. ಮಿಗಿಲಾಗಿ ಅದು ಅಸತ್ಯ ಮತ್ತು ಹಿಂಸೆಯನ್ನು ಆಧರಿಸಿದ್ದುದರಿಂದ ಆಧ್ಯಾತ್ಮದ ಮೂಲಭೂತ ಪರಿಕಲ್ಪನೆಗೆ ವಿರುದ್ದವಾದದ್ದಾಗಿದೆ. ಆದರೂ ವಿಭಜನೆಯಾಯಿತು. ಆ ವಿಭಜನೆಗೆ ಕೋಮು ಹಿಂಸೆ ಮತ್ತು ಸಂಚಿನ ರಾಜಕಾರಣ ಬುನಾದಿಯಾಗಿರಲಿಲ್ಲ. ಅದಕ್ಕೆ ಬದಲಾಗಿ, ಭಾರತೀಯ ಬದುಕಿನ ರೀತಿ ನೀತಿಯಲ್ಲಿ ಸತ್ಯ, ಅಹಿಂಸೆ, ಪ್ರೇಮ ಮತ್ತು ಸಾಮರಸ್ಯವನ್ನು ಸದೃಢವಾಗಿ ರೂಢಿಸುವುದೇ ಆ ವಿಭಜನೆಯ ಉದ್ದೇಶವಾಗಿತ್ತು.

1749-9

ಅರ್ಧನಾರೀಶ್ವರ ಪರಿಕಲ್ಪನೆಯಲ್ಲಿ ಬದುಕಿನ ಸಮಗ್ರತೆ ಅಡಗಿದೆ. ಅದೊಂದು ನಿರ್ಜೀವವನ್ನು ಸಜೀವವಾಗಿ ಮಾರ್ಪಡಿಸುವ ಪ್ರಯತ್ನವಾಗಿದೆ. ಉಪನಿಷತ್ತುಗಳ ಪ್ರಕಾರ ಇದೊಂದು ಕಷ್ಟ ಸಾಧ್ಯವಾದ ಕೆಲಸ. ಆದರೂ ಈ ತತ್ವವನ್ನು ಅನುಸರಿಸುವ ಮೂಲಕವೇ ನಾವು ನಮ್ಮ ಸ್ವಾತಂತ್ರ್ಯವನ್ನು ಪಡೆದಿದ್ದೇವೆ. ಆ ಸಂದರ್ಭದಲ್ಲಿ ಲಕ್ಷೋಪಲಕ್ಷ ಜನರು ಬಿಸ್ಮಿಲ್ಲ್ ಅವರ ಗೀತೆಯ ಈ ಕೆಳಗಿನ ಸಾಲುಗಳನ್ನು ಏಕ ಕಂಠದಿಂದ ಹಾಡುತ್ತಿದ್ದರು.

" ಸರ್ ಫರೋಸಿಕಿ ತಮನ್ನಾ ಅಬ್ ಹಮಾರೆ ದಿಲ್ ಮೆಂ ಹೈ,

ದೇಖನಾ ಹೈ ಜೋರ್ ಕಿತ್ನಾ ಬಾಜುಏ-ಕಾತಿಲ್ ಮೆಂ ಹೈ ".

ನಾವು ಸ್ವಾತಂತ್ರ್ಯವನ್ನೇನೋ ಪಡೆದುಕೊಂಡೆವು. ಆದರೆ ನಮ್ಮ ವೈರಿಗಳು ನಮ್ಮ ರಾಷ್ಟ್ರವನ್ನು ಇಬ್ಭಾಗಿಸಿದರು. ನಾವು ಈ ಕವಿಯ ಕೊನೆಯ ಸಾಲುಗಳನ್ನು ಮರೆತುಬಿಟ್ಟೆವು.

" ಏ ಶಹಿದೊ-ಮುಲ್ಕೋ-ಮಿಲ್ಲತ್, ತೇರೆ ಜಜ್‌ಬೊಂಕೆ ನಿಸಾರ್,

ತೇರಿ ಕುರ್ಬಾನಿಕಿ ಚರ್ಚಾ ಗೈರ್ ಕೀ ಮೆಹಫಿಲ್ ಮೆ ಹೈ. "

ದೇಶದ ವಿಭಜನೆಗೆ ಕಾರಣರಾಗಿದ್ದವರೇ, ಈಗ ಸ್ವಾತಂತ್ರ್ಯಾ ನಂತರ, ಜನತೆಯಲ್ಲಿ ಸಾಮರಸ್ಯವನ್ನು ಸೃಷ್ಟಿಸುವ ಬದಲು ಹಗೆತನ ಹುಟ್ಟು ಹಾಕುವುದರಲ್ಲಿ ಹೆಮ್ಮೆಪಡುತ್ತಿದ್ದಾರೆ. ಜನರಲ್ಲಿ ಪರಸ್ಪರ ದ್ವೇಶದ ವಿಷಭಾವನೆಯ ಬೀಜ ಬಿತ್ತಿದ್ದಕ್ಕೆ ಯಾರು ಹೊಣೆ ? ಎಂಬ ಕುರಿತು ಎಲ್ಲೆಲ್ಲೂ ಚರ್ಚೆ ನಡೆಯುತ್ತಿದೆ. ಜನರ ಮಧ್ಯೆ ಹಿಂಸೆ, ಭೀತಿಯನ್ನು ಹುಟ್ಟಿಸಿ, ಸುಳ್ಳು ವದಂತಿಗಳನ್ನು ಹರಡುತ್ತಿರುವವರು ಯಾರು ? ಎಂಬುವುದೇ ಇಂದು ಎಲ್ಲರ ಜಿಜ್ಞಾಸೆಯ ಪ್ರಶ್ನೆಯಾಗಿದೆ.

ಜಾನ್-ನಿಸ್ಸಾರ್ ಅಖ್ತರ್ ಹೇಳಿದ ಮಾತುಗಳು ಮಾನವೀಯವಾಗಿವೆ :

" ಯಹ ವಕ್ತ್ ಖೋನೆಕಾ ನಹಿಂ, ಯಹ ವಕ್ತ್ ಸೋನೆಕಾ ನಹಿಂ,

ಜಾಗೋ ವತನ್ ಖತ್ರೆ ಮೆಂ ಹೈ, ಸಾರಾ ಚಮನ್ ಖತ್ರೆ ಮೆಂ ಹೈ."

ಇಂದು ರಾಜಕೀಯ ಶಕ್ತಿಗಳು ಧರ್ಮ, ಭಾಷೆ, ಜಾತಿ ಪ್ರಾಂತೀಯ ಭಾವನೆಗಳನ್ನು ಬಡಿದೆಬ್ಬಿಸುತ್ತಿವೆ. ಕೋಮು ಭಾವನೆಗಳನ್ನು ಪ್ರಚೋದಿಸುವ ಮೂಲಕ, ಎಲ್ಲೆಲ್ಲೂ ತಮ್ಮ ಪ್ರಭಾವ ಪಸರಿಸುವಂತೆ ಮಾಡುತ್ತಿವೆ. ಪ್ರತಿಯೊಬ್ಬ ಭಾರತೀಯನು ತನ್ನ ಹಿತಾಸಕ್ತಿಯನ್ನೇ ಪರಮವೆಂದು ಬಗೆದರೆ, ಸಮಾಜ ಮತ್ತು ರಾಷ್ಟ್ರದ ಬಗ್ಗೆ ಕಾಳಜಿ ವಹಿಸುವವರು ಯಾರು ? ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಬಿಕ್ಕಟ್ಟಿನ ಈ ಸಂದರ್ಭದಲ್ಲಿ ನಾವು ಜಾಗೃತರಾಗಿ, ನಮ್ಮ ಅಂತರಾತ್ಮದ ಧ್ವನಿಗೆ ಕಿವಿಗೊಟ್ಟು ವಿವೇಕದಿಂದ ನಡೆದರೆ, ಡಾ|| ರಾಜೇಂದ್ರ ಪ್ರಸಾದರ ಬದುಕು ಮತ್ತು ಕೃತಿಗಳು ನಮಗೆ ಯೋಗ್ಯ ಮಾರ್ಗದರ್ಶನ ಒದಗಿಸಬಲ್ಲವು.

## ಸದ್ವಿನಯ ಮೇರು : ರಾಜೇನ್ ಬಾಬು

- ಸತ್ಯೇಂದ್ರ ನಾರಾಯಣ ಸಿನ್ಹಾ *

ರಾಜೇನ್ ಬಾಬು ಅವರನ್ನು ಭೇಟಿಯಾಗುವ ಮೊದಲ ಅವಕಾಶ ನನಗೆ ದೊರೆತದ್ದು 1926ರಲ್ಲಿ. ಮಹಾತ್ಮಾ ಗಾಂಧೀಜಿ ಆಗ ಔರಂಗಾಬಾದಿಗೆ ಬಂದಿದ್ದರು. ಮಹಾತ್ಮಾಜಿಯ ಪಾದಗಳನ್ನು ಸ್ಪರ್ಶಿಸಲು ವೇದಿಕೆ ಮೇಲೇರಲು ಅವಕಾಶ ದೊರೆತ ಕೆಲವೇ ಮುಖ್ಯರಲ್ಲಿ ನಾನು ಮತ್ತು ನನ್ನ ಸಹೋದರ ಇಬ್ಬರೂ ಇದ್ದೆವು. ರಾಜೇಂದ್ರ ಬಾಬು ನಮ್ಮನ್ನು ಗಾಂಧೀಜಿಯವರಿಗೆ ಪರಿಚಯಿಸಿದರು.

ನಾನು ಆಗ ತುಂಬಾ ಚಿಕ್ಕವನಾಗಿದ್ದೆ. ಆದರೂ ರಾಜೇನ್ ಬಾಬು ಅವರ ಸರಳತೆ ನನ್ನಲ್ಲಿ ವಿಸ್ಮಯವನ್ನುಂಟು ಮಾಡಿತ್ತು. ಅವರ ನಿರಾಡಂಬರ ಬದುಕು ಆಗಲೇ ಅವರನ್ನು ಇತರ ಸಹೋದ್ಯೋಗಿಗಳಿಂದ ಪ್ರತ್ಯೇಕಿಸಿ, ಎದ್ದು ಕಾಣುವಂತೆ ಮಾಡಿತ್ತು. ಉಜ್ವಲ ಪ್ರತಿಭೆಯ ವಕೀಲರಾಗಿದ್ದ ಅವರು ಮನಸ್ಸು ಮಾಡಿದ್ದರೆ, ಅಂದಿನ ಪ್ರಮುಖ ವಕೀಲರಂತೆ ಅವರೂ ಸಾಕಷ್ಟು ಸಂಪತ್ತನ್ನು ಗಳಿಸಬಹುದಾಗಿತ್ತು. ಆದರೆ ರಾಜೇಂದ್ರ ಬಾಬು ಸರಳ ಜೀವನವನ್ನು ಆಯ್ದುಕೊಂಡರು. ಕಾಂಗ್ರೆಸ್ಸಿನ ಪ್ರಧಾನ ಕಛೇರಿ, ಸದಾಕತ್ ಆಶ್ರಮದ ಬದುಕು ಅವರಿಗೆ ಎಲ್ಲಿಲ್ಲದ ನೆಮ್ಮದಿ ನೀಡಿತು. ಆದ್ದರಿಂದಲೇ ಅವರು ನಿಜವಾದ ಗಾಂಧೀ ಮಾರ್ಗದಲ್ಲಿ ನಡೆಯುತ್ತಾ, ಇತರ ಆಶ್ರಮವಾಸಿಗಳೊಂದಿಗಿನ ಸಾಮುದಾಯಿಕ ಬದುಕನ್ನು ತಮ್ಮ ಹೃದಯಕ್ಕೆ ಹತ್ತಿರ ಮಾಡಿಕೊಂಡಿದ್ದರು.

ಅವರು ಪಾಟ್ನ ಮುನ್ಸಿಪಾಲಿಟಿಯ ಅಧ್ಯಕ್ಷರಾಗಿ ಚುನಾಯಿತರಾದ ಮೇಲೂ ಅವರ ಬದುಕಿನ ರೀತಿ-ನೀತಿಗಳಲ್ಲಿ, ವಿಧಿ-ವಿಧಾನಗಳಲ್ಲಿ ಯಾವುದೇ ಬದಲಾವಣೆಗಳು ಕಂಡು ಬರಲಿಲ್ಲ. ರಾಜೇಂದ್ರ ಬಾಬು, ಉಪಾಧ್ಯಕ್ಷರಾಗಿದ್ದ ಅನುಗ್ರಹ ಬಾಬು ಅವರ ಜೊತೆಗೂಡಿ ಸುಮಾರು ಹನ್ನೆರಡು ಕಿಲೋಮೀಟರ್ ದೂರವನ್ನು ಟಾಂಗಾದಲ್ಲಿ ಪ್ರಯಾಣಿಸಿ ಪ್ರತಿದಿನ ಮುನ್ಸಿಪಲ್ ಕಛೇರಿ ತಲುಪುತ್ತಿದ್ದರು. ಅವರ ಬದುಕಿನಲ್ಲಿ ಯಾವುದೇ ಪ್ರದರ್ಶನ ಮತ್ತು ಆಡಂಬರಕ್ಕೆ ಅವಕಾಶವಿರಲಿಲ್ಲ.

ರಾಜೇಂದ್ರ ಬಾಬು ಅವರ ಇನ್ನೊಂದು ಪ್ರಮುಖ ಗುಣವೆಂದರೆ, ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದ ಸಾವಿರಾರು ಜನರಿಗೆ ಅವರು ತೋರುತ್ತಿದ್ದ ಮಹತ್ತರ ಪ್ರೀತಿ. ಅವರ ದೃಷ್ಟಿಯಲ್ಲಿ ಹೋರಾಟಗಾರರೆಲ್ಲರೂ ಅವರ ಕುಟುಂಬದ ಸದಸ್ಯರಾಗಿದ್ದರು. ಆಶ್ರಮದಲ್ಲಿಯ ಅವರ ಬದುಕು, ನೇತಾರ ಮತ್ತು ಅನುಚರರು ಕೂಡಿಯೇ ಬಾಳುತ್ತಾ ಪರಸ್ಪರರ ಸುಖ - ದುಃಖಗಳನ್ನು ಹಂಚಿಕೊಳ್ಳುವ ಒಂದು ಸಾಮಾನ್ಯ ಕಾಳಜಿಯನ್ನು ಹೊಂದಿರುವ ಪರಿಕಲ್ಪನೆಗೆ ಆದರ್ಶ ನಿದರ್ಶನವಾಗಿತ್ತು. ಇದರಿಂದ ಅವರು ತಮ್ಮ ದೇಶ ಬಾಂಧವರೊಂದಿಗೆ ವೈಯಕ್ತಿಕ ಸಂಬಂಧ ಬೆಳೆಸಿಕೊಳ್ಳಲು ಸಹಾಯವಾಯಿತು; ಸಮಗ್ರ ಜನತೆಗೆ ನೇತೃತ್ವ ನೀಡಿ, ಸ್ವಾತಂತ್ರ್ಯ ಆಂದೋಲನದ ಅಪಾರ ಕಷ್ಟ - ನಷ್ಟಗಳ ಅಗ್ನಿ ಪರೀಕ್ಷೆಯನ್ನು ಹಾಯ್ದು ಹೊರಬರಲು ಅನುಕೂಲವಾಯಿತು.

---

* ಶ್ರೀ ಸಿನ್ಹಾ ಅವರು ಬಿಹಾರಿನ ಮಾಜಿ ಮುಖ್ಯ ಮಂತ್ರಿಗಳು

ಅವರ ಇನ್ನೊಂದು ಎದ್ದು ಕಾಣುವ ಗುಣ, ತಾಳ್ಮೆ, ಸಹನಶೀಲತೆ. ಅವರೆಂದೂ ತಾಳ್ಮೆಗೆಟ್ಟು ವ್ಯಗ್ರಗೊಂಡವರಲ್ಲ. ಎಂಥಾ ಪ್ರಚೋದನ ಕಾರ್ಯ ಸಂದರ್ಭದಲ್ಲಿಯೂ ಅವರು ತಮ್ಮ ಮಾನಸಿಕ ಸ್ಥಿಮಿತತೆಯನ್ನು ಕಳೆದುಕೊಳ್ಳುತ್ತಿರಲಿಲ್ಲ. ನನಗೆ ಈ ಸಂದರ್ಭದಲ್ಲಿ ಒಂದು ಸಣ್ಣ ಘಟನೆ ನೆನಪಾಗುತ್ತದೆ. ಸ್ವತಃ ಕಾಂಗ್ರೆಸ್ ಕಾರ್ಯಕರ್ತರೂ ಆಗಿದ್ದ ಅವರ ಟೇಲರ್ ಒಮ್ಮೆ ಅವರ ಉಣ್ಣೆ ಜಾಕೇಟನ್ನು ಎದ್ವಾತದ್ವಾ ಹೊಲಿದು ಬಿಟ್ಟಿದ್ದ. ಜಾಕೇಟಿನ ಎರಡೂ ಕೈಗಳಿಗೆ ಬೇರೆ ಬೇರೆ ಬಟ್ಟೆಯನ್ನು ಬಳಸಿದ್ದನು. ರಾಮದಾಸ್ ಎಂಬ ಹೆಸರಿನ ಆ ಟೇಲರನಿಗೆ ತನ್ನ ತಪ್ಪು ಅರಿವಾದ್ದದ್ದು ತುಂಬಾ ತಡವಾಗಿ. ತನ್ನ ತಪ್ಪನ್ನು ಅವನು ಒಪ್ಪಿಕೊಂಡಿದ್ದೂ ಆಯಿತು. ಆದರೆ ರಾಜೇಂದ್ರ ಬಾಬು ಆ ಬಗ್ಗೆ ಕಿಂಚಿತ್ತೂ ತಲೆ ಕೆಡಿಸಿಕೊಳ್ಳಲಿಲ್ಲ. ಆದರ ಬಗ್ಗೆ ಚಕಾರವೆತ್ತದೆ ಅವರು ಆ ಜಾಕೇಟನ್ನು ತೆಗೆದುಕೊಂಡು ತಮ್ಮ ಬಳಿ ಇಟ್ಟುಕೊಂಡರು. ಆ ಮೇಲೆ ಚಳಿಗಾಲ ಬಂದಾಗ ಅದನ್ನು ಬಳಸತೊಡಗಿದರು.

ಅವರ ಈ ಅತ್ಯಂತ ಸರಳತನ ಮತ್ತು ಕೃತಿಮತೆ ರಹಿತ ಸಹಜ ಸ್ವಭಾವಕ್ಕೆ ವೈಷಮ್ಯವಾಗಿ ಅವರ ಜಾಜ್ವಲ್ಯ ಪ್ರತಿಭೆ, ಅದ್ಭುತ ನೆನಪಿನ ಶಕ್ತಿ ಯಾರನ್ನೂ ದಂಗುಬಡಿಸುತ್ತಿದ್ದವು. ಅವರ ಶೈಕ್ಷಣಿಕ ಸಾಧನೆಯೂ ದಾಖಲಾರ್ಹವಾಗಿತ್ತು. ಆದರೆ ಇವು ಯಾವುವೂ ಅವರ ನಡೆ - ನುಡಿಯಲ್ಲಿ ಅಹಮಿಕೆ ತಾಳಿ ಹೊರಹೊಮ್ಮುತ್ತಿರಲಿಲ್ಲ. ಅವರ ನೇರ ಪರಿಚಯವಿಲ್ಲದವರಿಗೆ ಅವರು ಹಳ್ಳಿಗಾಡಿನ ರೈತರಂತೆ ಕಾಣುತ್ತಿದ್ದರು. ಅವರನ್ನು ಮೊದಲ ಬಾರಿಗೆ ನೋಡುವ ಹೊಸಬರು ಅವರೊಬ್ಬ ಅಶಿಕ್ಷಿತ, ಗ್ರಾಮಾಂತರದ ಗಮಾರನೆಂದೇ ಭಾವಿಸುತ್ತಿದ್ದರು. ಅಷ್ಟೇ ಅಲ್ಲ, ಅವರ ಪೊದೆ ಮೀಸೆ, ಭಾರವಾದ, ತೋರವಾದ ಗಲ್ಲಗಳಿಂದಾಗಿ, ಅವರನ್ನು ನೋಡಿದವರಿಗೆ ಬೇರೆಯೆ ಕಲ್ಪನೆ ಬರುತ್ತಿತ್ತು.

ಪತ್ರಕರ್ತ ಜಾನ್ ಗುಂಥರ್ ಒಂದು ಸ್ವಾರಸ್ಯಕರ ಪ್ರಸಂಗವನ್ನು ದಾಖಲೆ ಮಾಡಿದ್ದಾನೆ. ಬ್ರಿಟಿಷ್ ಸಂಸದೀಯ ನಿಯೋಗದ ಸದಸ್ಯನೊಬ್ಬ ಹಜಾರಿಬಾಗಿನ ಕೇಂದ್ರ ಜೈಲಿನಲ್ಲಿ ರಾಜೇಂದ್ರ ಬಾಬು ಇದ್ದ ಕೋಣೆಯ ಬದಿಯಿಂದ ಹಾದು ಹೋಗುವಾಗ, ಅವರನ್ನು ನೋಡಿ, ಅವರೊಬ್ಬ ಪಕ್ಕಾ ಅಪರಾಧಿಯೆಂದೇ ಭಾವಿಸಿದ್ದನು. ಅವನ ಈ ಅಭಿಪ್ರಾಯವನ್ನು ಕೇಳಿ, ಬಿಹಾರಿನ ಈ ಪ್ರಕಾಂಡ ಪಂಡಿತ ಕೇವಲ ಒಂದು ಹೂನಗೆ ಬೀರಿ ಸುಮ್ಮನಾಗಿದ್ದ. ಜಾನ್ ಗುಂಥರ್ ಮುಂದುವರೆದು ಬರೆದದ್ದೇನೆಂದರೆ, 'ಏಳು ಭಾಷೆಗಳನ್ನು ಲೀಲಾಜಾಲವಾಗಿ ಮಾತಾಡಬಲ್ಲ ವಿದ್ವಾಂಸನೊಬ್ಬ ಆ ಜೈಲಿನಲ್ಲಿ ಇದ್ದನೆಂಬುವುದು ಸದರಿ ನಿಯೋಗದ ಕಲ್ಪನೆಗೂ ಬಂದಿರಲಿಲ್ಲ.'

ಒಮ್ಮೆ ಒಂದು ಮೊಕದ್ದಮೆಗೆ ಸಂಬಂಧಿಸಿ ನಾನು ಅವರ ಮುಂದೆ ಹಾಜರಾಗುವ ಅವಕಾಶ ದೊರೆತಿತ್ತು. ಅದೊಂದು ಸುಣ್ಣದ ಕಲ್ಲಿನ ಗಣಿಗೆ ಸಂಬಂಧಿಸಿದ ವಿವಾದವಾಗಿತ್ತು. ಎರಡೂ ಪಕ್ಷಗಳ ವತಿಯಿಂದ ಅನೇಕ ಜನ ಪ್ರಾಧ್ಯಾಪಕರನ್ನೊಳಗೊಂಡು ಹಲವು ರಸಾಯನ ಶಾಸ್ತ್ರ ತಜ್ಞರು ತಮ್ಮ ತಮ್ಮ ವಾದದ ಅಧಿಕೃತತೆಯನ್ನು ಬೆಂಬಲಿಸಲು ಅನೇಕ ಹೊತ್ತಿಗೆ, ಹೆಬ್ಬೊತ್ತಿಗೆಗಳನ್ನು ಸಾದರ ಪಡಿಸಿದರು. ಅನೇಕ ದಿನಗಳವರೆಗೆ ಎರಡೂ ಪಕ್ಷಗಳ ವಾದಗಳನ್ನು ಆಲಿಸಿ, ಆ ಮೇಲೆ ಅವರು ತಮ್ಮ ನ್ಯಾಯ ತೀರ್ಮಾನ ಬರೆಯಲಾರಂಭಿಸಿದರು. ಆಗ ಅವರು ಅನಾರೋಗ್ಯದಿಂದ ಬಳಲುತ್ತಿದ್ದರೂ ಯಾವುದೇ ಸ್ಟೆನೋ ಟೈಪಿಸ್ಟ್‌ನ ಸಹಾಯ ತೆಗೆದುಕೊಳ್ಳಲಿಲ್ಲ. ಸುಮಾರು ಎರಡೂ ನೂರು ಪುಟಗಳಷ್ಟು ದೀರ್ಘವಾದ ನ್ಯಾಯ

ನಿರ್ಣಯವನ್ನು ಅವರು ಸ್ವತಃ ತಮ್ಮ ಕೈಯಿಂದಲೇ ಬರೆದರು. ಇದೆಲ್ಲಕ್ಕೂ ಸಾಕ್ಷಿಯಾಗಿ ನಾನು ಅವರ ಬದಿಯಲ್ಲಿಯೇ ಇದ್ದೆ. ಯಾವುದೇ ಸಂದರ್ಭ ಗ್ರಂಥಗಳನ್ನು ಬಳಸದೆ, ತಮ್ಮ ಮುಂದೆ ಸಾದರಪಡಿಸಲಾಗಿದ್ದ ಕಾಯ್ದೆಯ ಪುಸ್ತಕಗಳ ಪುಟಗಳನ್ನು ಬಿಚ್ಚದೆ, ಅವರು ನಿರಂತರವಾಗಿ ಬರೆಯುತ್ತಿದ್ದ ವೈಖರಿ ನನ್ನನ್ನು ಆಶ್ಚರ್ಯಚಕಿತನನ್ನಾಗಿ ಮಾಡಿತು. ಕಾಯ್ದೆಯ ಒಳ-ಹೊರಗುಗಳನ್ನು ನಖಶಿಖಾಂತವಾಗಿ ಅರಿತಿದ್ದ ಅವರ ಜ್ಞಾನವ್ಯಾಪ್ತಿ, ಅನುಪಮ ಸ್ಮರಣಶಕ್ತಿ ಎಂಥವರನ್ನು ಬೆರಳು ಕಚ್ಚುವಂತೆ ಮಾಡುತ್ತಿದ್ದವು.

ಚಂಪಾರಣ ಸತ್ಯಾಗ್ರಹದ ಸಂದರ್ಭದಲ್ಲಿ ಗಾಂಧೀಜಿಯ ಸಂಪರ್ಕಕ್ಕೆ ಬಂದಾಗಿನಿಂದಲೂ ರಾಜೇಂದ್ರ ಬಾಬು ತಮ್ಮ ವಕೀಲ ವೃತ್ತಿಯನ್ನು ಬಿಟ್ಟು ಸಂಪೂರ್ಣವಾಗಿ ಸ್ವಾತಂತ್ರ್ಯ ಹೋರಾಟದ ಮಹತ್ಕಾರ್ಯಕ್ಕೆ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಗಾಂಧೀಜಿಯ ಬಗೆಗೆ ಇದ್ದ ಅವರ ವಿಶ್ವಾಸ ಅಚ್ಯುತವಾಗಿತ್ತು. ಅಂತೆಯೇ ಸತ್ಯ-ಅಹಿಂಸೆಯಲ್ಲಿ ಇದ್ದ ಅವರ ನಂಬಿಗೆ ಪ್ರಶ್ನಾತೀತವಾಗಿತ್ತು; ಅಷ್ಟೇ ದೃಢವಾದದ್ದಾಗಿತ್ತು. ಅವರ ಬದುಕು ಒಂದು ತೆರೆದ ಪುಸ್ತಕ. ಅದರ ಪುಟ-ಪುಟಗಳಲ್ಲಿಯೂ ಗಾಂಧೀ ಮಾರ್ಗದ ನಡೆ-ನುಡಿಗಳೇ ಲೇಖಿಸಲ್ಪಟ್ಟಿದ್ದವು. ಶ್ರೇಷ್ಠ-ಕನಿಷ್ಠರೆನ್ನದೆ, ಅವರನ್ನು ಕಾಣಲು ಬರುತ್ತಿದ್ದ ಎಲ್ಲರಿಗೂ ಅವರ ಬಾಗಿಲುಗಳು ಸದಾ ತೆರೆದಿರುತ್ತಿದ್ದವು. ಅವರ ಹೃದಯಾಂತರಾಳದಿಂದ ಹೊರ ಹೊಮ್ಮುತ್ತಿದ್ದ ಮೃದು ಮಧುರ ಮಾತುಗಳು ಕೇಳುಗರ ಹೃದಯವನ್ನು ನೇರವಾಗಿ ತಟ್ಟುತ್ತಿದ್ದವು. ಅವರ ನಿಷ್ಪೃಹ ನುಡಿಗಳಿಂದ ಸ್ಫೂರ್ತಿ ತಾನೇ ತಾನಾಗಿ ಉಕ್ಕುತ್ತಿತ್ತು. ಅವರೊಬ್ಬ ಅಜಾತ ಶತ್ರು. ಅಂದರೆ ಅವರಿಗೆ ವೈರಿಗಳೇ ಇರಲಿಲ್ಲ. ಅವರು ಯಾರ ಬಗ್ಗೆಯೂ ಎಂದೂ ಕೆಟ್ಟದ್ದನ್ನು ಯೋಚಿಸುತ್ತಿರಲಿಲ್ಲ. ದುರ್ಭಾವದೂರದ ಅವರ ವ್ಯಕ್ತಿತ್ವ ಅನುಕರಣೀಯವಾಗಿತ್ತು. ಹಾಗೆಂದೇ ಅವರು ಎಲ್ಲರ ಮೆಚ್ಚುಗೆಗೂ ಪಾತ್ರರಾಗಿದ್ದರು. ಅವರ ಈ ಸರ್ವಜನಪ್ರಿಯತೆಯನ್ನು ಗಾಂಧೀಜಿ ಅನೇಕ ಸಲ ಬಳಸಿದ್ದುಂಟು. ಪಕ್ಷದಲ್ಲಿ ವಾದ - ವಿವಾದ ತಲೆ ಎತ್ತಿದಾಗಲೆಲ್ಲಾ ಗಾಂಧೀಜಿ ರಾಜೇಂದ್ರ ಬಾಬು ಅವರನ್ನು ಆ ಚರ್ಚೆ ಜಿಜ್ಞಾಸೆಯ ಕೇಂದ್ರಕ್ಕೆ ತಂದು ಕೂಡಿಸುತ್ತಿದ್ದರು. ಹರಿಪೂರ್ ಅಧಿವೇಶನದ ನಂತರ ಸುಭಾಸ್ ಬೋಸರು ರಾಜೀನಾಮೇ ನೀಡಿದ್ದಾಗ, ರಾಜೇಂದ್ರ ಬಾಬು ಕಾಂಗ್ರೆಸ್ಸಿನ ಅಭ್ಯರ್ಥಿಯಾಗಿ ಆಯ್ಕೆಯಾದರು. ಆಮೇಲೆ ಆಚಾರ್ಯ ಕೃಪಲಾನಿಯವರು ರಾಜೀನಾಮೆ ನೀಡಿದಾಗ ಸಹಜವಾಗಿಯೇ ಪಂಡಿತ ನೆಹರೂ ಮತ್ತು ಸರದಾರ ಪಟೇಲರು ರಾಜೇಂದ್ರ ಬಾಬು ಅವರೆಡೆಗೆ ನೋಡಿದರು. ರಾಜೇನ್ ಬಾಬು ಆಗಲೇ ಸಂವಿಧಾನ ಸಭೆಯ ಅಧ್ಯಕ್ಷತೆಯ ಜವಾಬ್ದಾರಿ ಹೊತ್ತಿದ್ದರು. ಆದರೂ ನೆಹರೂ ಮತ್ತು ಪಟೇಲರ ವಿನಂತಿಯನ್ನು ಮನ್ನಿಸಿ ಅವರು ಕಾಂಗ್ರೆಸ್ಸಿನ ಅಧ್ಯಕ್ಷತೆಯನ್ನು ವಹಿಸಿಕೊಂಡರು. ಇದರಿಂದ ಅವರ ಕೆಲಸದ ಗುಣದಲ್ಲೇನೂ ವ್ಯತ್ಯಾಸವಾಗಲಿಲ್ಲ. ಬದಲಾಗಿ ಮೊದಲಿಗಿಂತಲೂ ಹೆಚ್ಚು ಪರಿಶ್ರಮದಿಂದ ದುಡಿಯತೊಡಗಿದರು.

ಸದ್ವಿನಯ ಅವರ ವ್ಯಕ್ತಿತ್ವದ ಸಾರ ಸರ್ವಸ್ವವಾಗಿತ್ತು. ಇದು ಯಾವ ಮಟ್ಟಿಗೆ ಎಂದರೆ, ಅವರು ತಮ್ಮ ಸ್ವಂತದ ಸಾಧನೆಗಳನ್ನು ಗಾಂಧೀಜಿಯವರ ಸ್ಫೂರ್ತಿಯಿಂದಲೇ ಮಾಡಿದ್ದು ಎಂದು ತಮ್ಮ ವಿನಯವನ್ನು ಮೆರೆಯುತ್ತಿದ್ದರು. ಚಿಕಿತ್ಸಕ ಬುದ್ಧಿ, ಹರಿತವಾದ ಪರಾಮರ್ಶನ ಶಕ್ತಿಯಿಂದ ಕೂಡಿದ ರಾಜೇಂದ್ರ ಬಾಬುಜಿಯ ವ್ಯಕ್ತಿತ್ವದ ಮೌಲ್ಯವನ್ನು ಗಾಂಧೀಜಿ ಸಂಪೂರ್ಣವಾಗಿ

ಮನಗಂಡಿದ್ದರು. ಕಠಿಣ ಸಮಸ್ಯೆಗಳು ಎದುರಾದಾಗಲೆಲ್ಲಾ, ಗಾಂಧೀಜಿ ರಾಜೇಂದ್ರ ಬಾಬು ಅವರನ್ನು ತಮ್ಮ ವಿಶ್ವಾಸಕ್ಕೆ ತೆಗೆದುಕೊಂಡು ಸುದೀರ್ಘ ಸಮಾಲೋಚನೆ ನಡೆಸುತ್ತಿದ್ದರು. ಗಾಂಧೀಜಿಯ ಕಾರ್ಯಕ್ಷೇತ್ರವಾಗಿದ್ದ ವರ್ಧಾದಲ್ಲಿ ರಾಜೇಂದ್ರ ಬಾಬು ಅವರಿಗೆ ನಿರಂತರ ಬೇಡಿಕೆ ಇತ್ತು. ಆದರೆ ರಾಜೇಂದ್ರ ಬಾಬು ಗಾಂಧೀಜಿಯವರೊಡನಿದ್ದ ತಮ್ಮ ಈ ಆತ್ಮೀಯತೆ, ನಿಕಟ ಸಂಪರ್ಕವನ್ನೆಂದೂ ಪ್ರದರ್ಶಿಸಿಕೊಳ್ಳುತ್ತಿರಲಿಲ್ಲ. ತಮಗೆ ಮಹಾತ್ಮರ ಜೊತೆಗಿದ್ದ 'ಸಲುಗೆಯ ಹಮ್ಮು' ಎಂದೂ ಅವರ ಹತ್ತಿರ ಸುಳಿಯುತ್ತಿರಲಿಲ್ಲ. ಇದಕ್ಕೆ ಪ್ರತಿಯಾಗಿ ಅವರು ಅದನ್ನು ತಮ್ಮ ಕರ್ತವ್ಯದ ಕರೆ ಎಂದು ಭಾವಿಸಿ, ತಮಗೊದಗಿ ಬಂದ ಕೆಲಸವನ್ನು ಮೌನದಿಂದ ಮಾಡಿ ಮುಗಿಸುತ್ತಿದ್ದರು. ಅವರ ಬದುಕಿನ ಸಾಧನೆ, ರಾಷ್ಟ್ರ ಜೀವನಕ್ಕೆ ನೀಡಿದ ಕಾಣಿಕೆ ಮುಂತಾದವನ್ನು ಸಮುಚಿತವಾಗಿ ಮೌಲ್ಯಾಂಕನ ಮಾಡಿ, ಅವುಗಳಿಗೆ ಅರ್ಹ ಮನ್ನಣೆ ನೀಡಬೇಕಾದದ್ದು ಇತಿಹಾಸಕಾರರಿಗೆ ಬಿಟ್ಟದ್ದು. ಆದರೆ ಈ ವರೆಗೆ ಅಂಥ ಕೆಲಸ ನಡೆದಿಲ್ಲವೆಂದೇ ನನ್ನ ಭಾವನೆ.

ಅನೇಕ ಸಮಸ್ಯೆಗಳ ಕುರಿತು ರಾಜೇಂದ್ರ ಬಾಬು ಮತ್ತು ಪಂಡಿತಜಿ ಅವರಲ್ಲಿ ಭಿನ್ನಾಭಿಪ್ರಾಯಗಳಿದ್ದವೆಂಬುವುದು ನಿಜ. ರಾಜೇಂದ್ರ ಬಾಬು ಪ್ರಗಾಢ ಧಾರ್ಮಿಕ ನಂಬುಗೆಯ ವ್ಯಕ್ತಿಯಾಗಿದ್ದರು. ಹಿಂದೂ ಪರಂಪರೆಗಳ ಬಗ್ಗೆ ಅವರಲ್ಲಿ ಅಪಾರ ಗೌರವವಿತ್ತು. ಆದರೆ ಹಜಾರಿಬಾಗ ಕೇಂದ್ರ ಜೈಲಿನಲ್ಲಿ ರಾಜೇಂದ್ರ ಬಾಬು ಅವರ ಜೊತೆಗಿದ್ದ ಖಾನ್ ಅಬ್ದುಲ್ ಗಫಾರ ಖಾನ್ ಬಾಬೂಜಿಯನ್ನು ಬಹು ಹತ್ತಿರದಿಂದ ಬಲ್ಲವರಾಗಿದ್ದರು ಅವರು ಆಡಿದ ಮಾತುಗಳು ಗಮನಾರ್ಹವಾಗಿವೆ. ಅವರ ದೃಷ್ಟಿಯಲ್ಲಿ ಬಾಬೂಜಿ ವಿಶಾಲ ಮನೋಭಾವದ ವ್ಯಕ್ತಿಯಾಗಿದ್ದರು. ವ್ಯಕ್ತಿ-ವ್ಯಕ್ತಿಗಳಲ್ಲಿ ಭಿನ್ನತೆಯನ್ನು ಕಾಣುವ ಸಂಕುಚಿತ ದೃಷ್ಟಿ ಅವರ ಬಳಿಯಲ್ಲಿಯೂ ಸುಳಿಯುತ್ತಿರಲಿಲ್ಲ. ರಾಜೇಂದ್ರ ಬಾಬು ಅವರ ಈ ಗುಣದಿಂದಾಗಿಯೇ ಅವರ ಧಾರ್ಮಿಕ ನಂಬುಗೆಗಳು ಮತ್ತು ಚಿಂತನೆಗಳು ಪಂಡಿತ ನೆಹರೂ ಅವರ ಜೊತೆಗೂಡಿ ಕೆಲಸ ಮಾಡುವುದಕ್ಕೆ ಎಂದೂ ಅಡ್ಡ ಬರಲಿಲ್ಲ. ವೈಯಕ್ತಿಕ ದೃಷ್ಟಿ ಕೋನಗಳ ಭಿನ್ನತೆಯ ಹೊರತಾಗಿಯೂ ಈ ಇಬ್ಬರೂ ಮುತ್ಸದ್ದಿಗಳು ನಿರ್ವ್ಯಾಜ್ಯ ನಿಕಟತೆಯಿಂದ ಅಹರ್ನಿಸಿ, ದುಡಿದು, ನವಜಾತ ಪ್ರಜಾಪ್ರಭುತ್ವಕ್ಕೆ ಭದ್ರ ಬುನಾದಿ ಹಾಕಿದರು. ಸಂವಿಧಾನದ ನೀತಿ ನಿಯಮಗಳ ಆಚೆ ಎಂದೂ ಕಾಲಿಡದಂತೆ ಬಾಬೂಜಿ ಸದಾ ಜಾಗೂರೂಕರಾಗಿರುತ್ತಿದ್ದರು. ಆದಾಗ್ಯೂ ರಾಷ್ಟ್ರದ ಸ್ವಾತಂತ್ರ್ಯವನ್ನು ಕ್ರೋಢೀಕರಿಸಿ ದೇಶದ ಐಕ್ಯತೆಯನ್ನು ಸಾಧಿಸುವಲ್ಲಿ ರಾಜೇಂದ್ರ ಬಾಬು ನೀಡಿದ ಕಾಣಿಕೆಯನ್ನು ಸ್ವತಃ ನೆಹರೂಜಿಯೇ ಮನಸಾರೆ ಹೊಗಳಿದ್ದಾರೆ. ನಮ್ಮ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಬೇರುಗಳನ್ನು ಗಟ್ಟಿಗೊಳಿಸುವ ದಾರಿಯಲ್ಲಿ ರಾಜೇಂದ್ರ ಬಾಬು ರೂಢಿಸಿದ, ಸತ್ ಸಂಪ್ರದಾಯಗಳು ಸರ್ವರ ಮನ್ನಣೆ ಮೆಚ್ಚುಗೆಯನ್ನು ಗಳಿಸಿವೆ.

ಬದುಕಿನುದ್ದಕ್ಕೂ ಜನಸಾಮಾನ್ಯರ ಮಧ್ಯದಲ್ಲಿಯೇ ದಾರಿ ಸವೆಸಿದ್ದ ರಾಜೇಂದ್ರ ಬಾಬು ರಾಷ್ಟ್ರಾಧ್ಯಕ್ಷರಾಗಿ ರಾಷ್ಟ್ರಪತಿ ಭವನ ಪ್ರವೇಶಿಸಿದ ಮೇಲೆ ಪಂಜರದ ಪಕ್ಷಿಯಂತಾಗಿದ್ದರು. ಅವರು ತಮಗೆ ಸಾಧ್ಯವಿದ್ದ ಸಕ್ರಿಯ ಪಾತ್ರವಹಿಸಲು ಇದ್ದ ಅಡಚಣೆಗಳ ಬಗ್ಗೆ ಮನ ನೊಂದಿದ್ದರು. ಅಸಹಾಯಕತೆಯ ಒಳತೋಟಿ ಅವರ ಮನಸ್ಸನ್ನು ಕೊರೆಯುತ್ತಿತ್ತು. ಆದ್ದರಿಂದಲೇ ಅವರು ರಾಷ್ಟ್ರಪತಿ ಭವನವನ್ನು ತ್ಯಜಿಸಿದಾಗ ಅವರಿಗಾದ ಆನಂದ ಹೇಳಲಸದಳ. ವಾರ್ಷಿಕ ಪರೀಕ್ಷೆಗಳು ಮುಗಿದು ಶಾಲೆ ರಜೆ ಘೋಷಿಸಿದಾಗ ವಿದ್ಯಾರ್ಥಿಗಳಿಗಾಗುವ ಆನಂದ ತಮ್ಮದೆಂದು ಅವರು

ಮಾರ್ಮಿಕವಾಗಿ ನುಡಿದಿದ್ದರು. ಈ ಎಲ್ಲದರ ಯುಕ್ತಾಯುಕ್ತತೆ ಕುರಿತು ಮೌಲ್ಯ ವಿವೇಚನೆ ಮಾಡುವ, ಅಂತಿಮ ತೀರ್ಮಾನ ನೀಡುವ ಕೆಲಸವನ್ನು ಚರಿತ್ರೆಗೆ ಬಿಟ್ಟು ಬಿಡೋಣ. ನಮ್ಮಲ್ಲಿ ಭಯ ಭಕ್ತಿಯನ್ನು ಕುದುರಿಸುವ, ಸ್ಫೂರ್ತಿ ಹುಮ್ಮಸ್ಸನ್ನು ಚಿಮ್ಮಿಸುವ, ಅವರ ಮಹಾನ್ ವ್ಯಕ್ತಿತ್ವ ಅಸಾಧಾರಣವಾದ್ದದ್ದಾಗಿತ್ತು. ಸ್ವಾತಂತ್ರ್ಯ ಹೋರಾಟದ ಸಮಸ್ತ ನೇತಾರರ ವ್ಯಕ್ತಿತ್ವದ ಶಕ್ತಿ ಸಾಮರ್ಥ್ಯಗಳ ಸಂಚಿತ ರೂಪವೇ ಅವರ ವ್ಯಕ್ತಿತ್ವವಾಗಿತ್ತು. ನಮ್ಮ ಚರಿತ್ರೆಯ ಸಂದಿಗ್ಧ ಸಂದರ್ಭದಲ್ಲೆಲ್ಲಾ ಭಾರತ ಮಾತೆ ಇಂಥ ಮಹಾನ್ ಪುತ್ರರಿಗೆ ಆಗಾಗ ಜನ್ಮ ನೀಡಲೆಂದು ಆಶಿಸೋಣ.

## ಡಾ: ರಾಜೇಂದ್ರ ಪ್ರಸಾದ : ಜೀವನ ಸಾಧನೆ ಮತ್ತು ಸಿದ್ಧಾಂತ

- ಡಾ: ಸವಾಯಿ ಸಿಂಗ್ ಸಿಸೋಡಿಯಾ *

ಡಾ: ರಾಜೇಂದ್ರ ಪ್ರಸಾದರು ಗಾಂಧೀವಾದದ ಪ್ರಮುಖ ಹಾಗೂ ನಿಜವಾದ ಪ್ರತಿಪಾದಕರಾಗಿದ್ದರು. ಸ್ವಾತಂತ್ರ್ಯ ಹೋರಾಟದ ಸಂದರ್ಭದ ಗಣ್ಯ ನೇತಾರರಾಗಿದ್ದ ಅವರು ತಮ್ಮ ಬದುಕಿನ ಅವಧಿಯಲ್ಲಿಯೇ ಐತಿಹ್ಯವಾಗಿ ಬಿಟ್ಟಿದ್ದರು. ಸುದೈವದ 'ಸುಕುಮಾರ' ರೆಂದೇ ಸ್ಮರಿಸಲ್ಪಡುವ ಅವರು ರಾಜೇನ್ ಬಾಬು ಎಂದೇ ಸಂಬೋಧಿಸಲ್ಪಡುತ್ತಿದ್ದರು. ಇದು ಜನಸಾಮಾನ್ಯರೊಂದಿಗಿದ್ದ ಅವರ ಸಲುಗೆಯ ಸ್ನೇಹಕ್ಕೆ ಸಂಕೇತವಾಗಿತ್ತು. 3ನೇ ಡಿಸೆಂಬರ 1884 ರಂದು ಜಿರಾದೇಯಿಯಲ್ಲಿ ಜನಿಸಿದ್ದ ಅವರು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿಗಿಂತಲೂ ಒಂದು ವರ್ಷ ಹಿರಿಯರಾಗಿದ್ದರು. ಜಿರಾದೇಯಿ ಬಿಹಾರಿನ ಸಾರಣ ಜಿಲ್ಲೆಯ ದೂರದ ಒಂದು ಕುಗ್ರಾಮವಾಗಿತ್ತು.

ಕಾಯಸ್ಥ ಕುಟುಂಬಕ್ಕೆ ಸೇರಿದ ಅವರ ಪೂರ್ವಜರು ಪಾರಂಪರಿಕ ಪಾಂಡಿತ್ಯಕ್ಕೆ ಹೆಸರಾಗಿದ್ದರು. ಉತ್ತರ ಪ್ರದೇಶದ ಅಮ್ರೋಹಾದಿಂದ ವಲಸೆ ಬಂದ ಅವರು ಜಿರಾದೇಯಿಯಲ್ಲಿ ಸ್ಥಾಯಿಯಾಗಿ ಉಳಿದುಕೊಂಡಿದ್ದರು. ಸರಳ ಜೀವನಕ್ಕೆ ಹೆಸರಾಗಿದ್ದ ಅವರು ಕ್ರಮೇಣ ಜಮೀನ್ದಾರರ ಸ್ಥಾನಮಾನ ಪಡೆದುಕೊಂಡಿದ್ದರು.

ರಾಜೇನ್ ಬಾಬೂಜಿಯ ಆರಂಭಿಕ ಅಭ್ಯಾಸ ನಡೆದದ್ದು ಒಬ್ಬ ಮೌಲ್ವಿಯ ಕೈಯಲ್ಲಿ. ಪರ್ಷಿಯನ್ ಭಾಷೆಯಿಂದ ಆರಂಭವಾದ ಅದು ಆಮೇಲೆ ಹಿಂದೀ, ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಗೂ ತಿರುಗಿತು. ಬಾಬೂಜಿ ಎಲ್ಲ ಭಾಷೆಗಳನ್ನೂ ಅಷ್ಟೇ ಆಸಕ್ತಿ ಮತ್ತು ಉತ್ಸುಕತೆಯಿಂದ ಕಲಿಯುತ್ತಿದ್ದರು. ಬಾಲ್ಯದಲ್ಲಿಯೇ ಅವರು ಹಿಂದೂ, ಮುಸ್ಲಿಂ ಮತ್ತು ಕ್ರಿಶ್ಚನ್ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಆಳವಾದ ಜ್ಞಾನ ಪಡೆದುಕೊಂಡರು. ಅದು ಕ್ರಮೇಣ ಅವರ ಯುವ ಮನಸ್ಸಿನ ಮೇಲೆ ಅಚ್ಚಳಿಯದ ಮುದ್ರೆಯೊತ್ತಿತು.

ಛಾಪ್ರಾ ಜಿಲ್ಲಾ ಶಾಲೆಯಿಂದ ತಮ್ಮ ಶಿಕ್ಷಣವನ್ನು ಯಶಸ್ವಿಯಾಗಿ ಮುಗಿಸಿದ ಅವರು ಉನ್ನತ ಶಿಕ್ಷಣಕ್ಕಾಗಿ ಕಲ್ಕತ್ತೆಯ ಪ್ರೆಸಿಡೆನ್ಸಿ ಕಾಲೇಜ್ ಸೇರಿದರು. ಇಲ್ಲಿಯೂ ಅವರು ವಿಶ್ವವಿದ್ಯಾಲಯಕ್ಕೇ ಪ್ರಪ್ರಥಮ ಸ್ಥಾನ ತಮ್ಮದಾಗಿಸಿಕೊಂಡರು. ಅಂದಿನ ಕಲ್ಕತ್ತೆಯ ಭಿನ್ನ, ಹಾಗೂ ಭರದಿಂದ ಸಾಗುತ್ತಿದ್ದ ಮಹಾನಗರದ ಬದುಕು ಅವರ ಮೇಲೆ ಯಾವುದೇ ಪ್ರಭಾವ ಬೀರಲಿಲ್ಲ. ಛಾಪ್ರಾದಂತಹ ಗ್ರಾಮೀಣ ಪ್ರದೇಶದ ಸರಳ ಸನ್ನಿವೇಶದಿಂದ ಅಲ್ಲಿಯ ಸಹಜ ಹಾಗೂ ನಿರಾಡಂಬರದ ಬದುಕಿನ ಹಿನ್ನೆಲೆಯಿಂದ ಬಂದಿದ್ದ ರಾಜೇನ್ ಬಾಬು ಮಹಾನಗರದ ಥಳುಕು ಬಳುಕಿನ ಆಮಿಷಕ್ಕೆ ಬಲಿಯಾಗಲಿಲ್ಲ. ನಿರ್ಲಿಪ್ತತೆ ಅವರ ನೈಜ ಗುಣವಾಗಿತ್ತು. ತತ್ಕಾರಣವಾಗಿ, ಅವರು ತಮ್ಮ ಸ್ನಾತಕೋತ್ತರ ಪದವಿ ಮುಗಿಯುವರೆಗೂ ಪ್ರಥಮ ಸ್ಥಾನ ಯಾರಿಗೂ ಬಿಟ್ಟು ಕೊಡಲಿಲ್ಲ. ಅವರ ಬಗ್ಗೆ ವಿದ್ಯಾರ್ಥಿ ಮತ್ತು ಶಿಕ್ಷಕರಿಬ್ಬರಿಗೂ ಸಮಾನ ಪ್ರೀತಿ ಇತ್ತು. ಎಲ್ಲರ ಮೆಚ್ಚುಗೆಗೂ ಪಾತ್ರವಾಗಿದ್ದ ಅವರ ವ್ಯಕ್ತಿತ್ವ ವಿಶಿಷ್ಟವಾಗಿತ್ತು. ಆ ಕಾಲದ

* ಡಾ: ಸಿಸೋಡಿಯಾ ಕೇಂದ್ರದ ಮಾಜಿ ಮಂತ್ರಿಗಳು.

ಪ್ರಖ್ಯಾತ ವಿಜ್ಞಾನಿಗಳಾಗಿದ್ದ ಡಾ: ಜೆ.ಸಿ. ಬೋಸ್ (ಭೌತಶಾಸ್ತ್ರ) ಮತ್ತು ಡಾ:ಪಿ.ಸಿ. ರೇ (ರಸಾಯನ ಶಾಸ್ತ್ರ) ಅವರಂಥವರು ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಬಾಬೂಜಿಯ ಶಿಕ್ಷಕರಾಗಿದ್ದರು.

ಯುವ ಪ್ರಸಾದರು ತಮ್ಮ ಉಜ್ವಲ ಶೈಕ್ಷಣಿಕ ಬದುಕಿನೊಂದಿಗೇ ಸಾಮಾಜಿಕ ಸೇವೆಯ ಪಾಠಗಳನ್ನು ಕಲಿತರು. ಸ್ವಾಮಿ ವಿವೇಕಾನಂದರ ಸಮಕಾಲೀನರಾಗಿದ್ದ ಸತೀಶ ಚಂದ್ರ ಮುಖರ್ಜಿಯವರು ಸಂಸ್ಥಾಪಿಸಿದ 'ಮೂಡಲ ಸಂಘ'ದ (DAWN SOCIETY) ಮೂಲಕ ಅವರು ತಮ್ಮ ಸಾರ್ವಜನಿಕ ಸೇವೆಯ ಪ್ರಥಮ ಪಾಠಗಳನ್ನು ಕಲಿತರು. ತಮ್ಮ ಪ್ರಾಂತದ ವಿದ್ಯಾರ್ಥಿಗಳಿಗೆ ಸಹಾಯ ಮಾಡುವ, ಮಾರ್ಗದರ್ಶನದ ಉದ್ದೇಶದಿಂದ ಕಲ್ಕತ್ತಾದಲ್ಲಿ ಬಿಹಾರಿ ಕ್ಲಬ್‌ವೊಂದನ್ನು ಸ್ಥಾಪಿಸಿದರು (1906). ಮುಂದೆ ಇದು 'ಬಿಹಾರ ಸ್ಟೂಡೆಂಟ್ಸ್ ಕಾನಫರೆನ್ಸ್' ಆಗಿ ರೂಪು ತಳೆಯಿತು. ಅದು ಭಾರತದಲ್ಲಿಯೇ ಒಂದು ಹೊಸ ದಾರಿ ತುಳಿದ ಪ್ರಪ್ರಥಮ ವಿದ್ಯಾರ್ಥಿಗಳ ಸಂಘಟನೆಯಾಗಿತ್ತು. ಈ ಸಂಘಟನೆಯಿಂದ ತರಬೇತಿ ಪಡೆದ ಅನೇಕ ವಿದ್ಯಾರ್ಥಿಗಳು ಮುಂದೆ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ವಿಶ್ವಾಸನೀಯ ಸೈನಿಕರಾಗಿ ಸೇವೆ ಸಲ್ಲಿಸಿದರು.

1906ರಲ್ಲಿ ಕಲ್ಕತ್ತೆಯಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನದ ಸಂದರ್ಭದಲ್ಲಿ, ಅಂದಿನ ಅಗ್ರಗಣ್ಯ ಮುಖಂಡರಾಗಿದ್ದ ಅರವಿಂದ ಘೋಷ್, ಫಿರೋಜ್ ಶಾಹ ಮೆಹ್ತಾ, ಸುರೇಂದ್ರನಾಥ ಬ್ಯಾನರ್ಜಿ, ಪಂಡಿತ ಮದನ್ ಮೋಹನ್ ಮಾಳವೀಯ, ಮತ್ತು ಲಾಲಾ ಲಜಪತ್ ರಾಯ್ ಅವರೊಂದಿಗೆ ಮುಖತಃ ಭೆಟ್ಟಿಯಾಗುವ ಒಂದು ಅಪೂರ್ವ ಅವಕಾಶ ರಾಜೇನ್ ಬಾಬು ಅವರಿಗೆ ದೊರೆಯಿತು. ಈ ದರ್ಶನ, ಸಂದರ್ಶನ ಅವರ ಮನಸ್ಸಿನ ಮೇಲೆ ಮಹತ್ತರ ಪ್ರಭಾವ ಬೀರಿತು.

1907ರಲ್ಲಿ ಎಂ.ಎ. ಪದವಿ ಪಡೆದ ನಂತರ ಅವರಿಗೆ ತುಂಬ ಸಂಕಟದ ಸಮಯ ಎದುರಾಯಿತು. ತಮ್ಮ ತಂದೆಯನ್ನು ಕಳೆದುಕೊಂಡು ಅತೀವ ದುಃಖಕ್ಕೆ ಈಡಾದರು. ಬದುಕಿನ ಮುಂದಿನ ಹೆಜ್ಜೆಯ ಬಗ್ಗೆ ಅನಿಶ್ಚಿತತೆ ಕಾಡತೊಡಗಿತು. ಆಯ್.ಸಿ.ಎಸ್. ಪರೀಕ್ಷೆಗೆ ಕೂಡಲು ಲಂಡನ್ನಿಗೆ ಹೋಗುವ ಬದಲು ಮುಜಾಫರ್‌ಪೂರ್ ಕಾಲೇಜಿನಲ್ಲಿ ಪ್ರೊಫೆಸರ್ ಹುದ್ದೆಗೆ ಸೇರಿಕೊಂಡರು. ಮುಂದೆ ಒಂದೇ ವರ್ಷದ ನಂತರ ಆ ಕಾಲೇಜಿನ ಪ್ರಿನ್ಸಿಪಾಲರಾಗಿ ಆಯ್ಕೆಯಾದರು.

ಕಾಯ್ದೆಯ ಬಗ್ಗೆ ಮೊದಲಿನಿಂದಲೂ ಅವರಿಗೆ ಹೆಚ್ಚಿನ ಒಲವು. ಆದ್ದರಿಂದ ಕಾನೂನು ಅಭ್ಯಾಸ ಮಾಡುವ ಉದ್ದೇಶದಿಂದ ಕಲ್ಕತ್ತೆಗೆ ತೆರಳಿದರು. ಯಥಾಪ್ರಕಾರ ಪ್ರಪ್ರಥಮ ಸ್ಥಾನದಲ್ಲಿ ಕಾನೂನು ಪದವಿಯನ್ನು ಪಡೆದು, ಕಲ್ಕತ್ತಾ ಹೈಕೋರ್ಟಿನಲ್ಲಿ ವಕೀಲಿ ವೃತ್ತಿ ಆರಂಭಿಸಿದರು.

ಕಲ್ಕತ್ತಾ ಹೈಕೋರ್ಟಿನ ಖ್ಯಾತ ನ್ಯಾಯಾಧೀಶರೂ ಕಲ್ಕತ್ತಾ ವಿಶ್ವವಿದ್ಯಾನಿಲಯದ ಕುಲಪತಿಗಳೂ ಆಗಿದ್ದ ಸರ್ ಅಸುತೋಷ್ ಮುಖರ್ಜಿಯವರು ರಾಜೇನ್ ಬಾಬು ಅವರ ಪ್ರತಿಭೆ, ಪಾಂಡಿತ್ಯದಿಂದ ತುಂಬ ಪ್ರಭಾವಿತರಾಗಿದ್ದರು. ತತ್ಪರಿಣಾಮವಾಗಿ, ಕಾನೂನು ಕಾಲೇಜಿನಲ್ಲಿ ಬಾಬೂಜಿಯವರನ್ನು ಪ್ರೊಫೆಸರ್ ಹುದ್ದೆಗೆ ನೇಮಕ ಮಾಡಿದರು. ಏತನ್ಮಧ್ಯೆ ಒಂದು ಮಹತ್ವದ ಘಟನೆ ಜರುಗಿತು. 'ಸರ್ವಂಟ್ಸ್ ಆಫ್ ಇಂಡಿಯಾ ಸೊಸೈಟಿ'ಯ

ಸಂಸ್ಥಾಪಕರಾಗಿದ್ದ ಗೋಪಾಲಕೃಷ್ಣ ಗೋಖಲೆಯವರಿಗೆ ರಾಜೇನ್ ಬಾಬು ಅವರನ್ನು ಪರಿಚಯಿಸಲಾಯಿತು. ಅವರು, ರಾಜೇನ್ ಬಾಬು ತಮ್ಮ ವಕೀಲಿ ವೃತ್ತಿಯನ್ನು ಬಿಟ್ಟು ಮಾನವತೆಯ ಸೇವೆಗಾಗಿ ತಮ್ಮ ಸೊಸೈಟಿಯನ್ನು ಸೇರಬೇಕೆಂದು ಬಿನ್ನವಿಸಿದರು. ಅಂತೆಯೇ ರಾಜೇನ್ ಬಾಬು ಕೂಡ ತಮ್ಮ ವೈಯಕ್ತಿಕ ಮತ್ತು ಕೌಟುಂಬಿಕ ಸಮಸ್ಯೆಗಳ ಸಮ್ಮುಖದಲ್ಲಿ ರಾಷ್ಟ್ರೀಯ ಸೇವೆಯ ಅವಕಾಶವನ್ನೇ ಆಯ್ಕೆ ಮಾಡಿಕೊಂಡರು. ತಮ್ಮ ಸೇವೆಯ ಅವಶ್ಯಕತೆ ತಮ್ಮ ಕುಟುಂಬಕ್ಕಿಂತಲೂ ರಾಷ್ಟ್ರಕ್ಕೇ ಹೆಚ್ಚಿದೆ ಎಂಬುದನ್ನು ಮನಗಂಡು, ತಮ್ಮ ಮನದ ಇಂಗಿತವನ್ನು ಸಹೋದರ ಮಹೇಂದ್ರ ಪ್ರಸಾದರ ಮುಂದೆ ಮಂಡಿಸಿದರು. ಅವರು ತಮ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದ ವಕೀಲಿ ವೃತ್ತಿಯನ್ನು ಬಿಟ್ಟು ರಾಷ್ಟ್ರದ ಮೂವತ್ತು ಕೋಟಿ ಜನತೆಯ ಸೇವೆಗೆ ತಮ್ಮನ್ನು ತೊಡಗಿಸಿಕೊಳ್ಳುವ ಸಂದಿಗ್ಧ ಸಂದರ್ಭದ ಕುರಿತು ಹೀಗೆ ಬರೆದಿದ್ದಾರೆ: ".... ಈ ಕ್ಷಣಭಂಗುರ ಪ್ರಪಂಚದಲ್ಲಿ .... ಎಲ್ಲವೂ ನಶ್ವರವಾದದ್ದು. .... ಸಂಪತ್ತು, ಸ್ಥಾನ ಮಾನ .... ಹಿಡಿಗಾಸುಳ್ಳ ಕಡುಬಡವನೇ ಸಂಪತ್ ಸುಪ್ಪತ್ತಿಗೆಯ ಕೋಟ್ಯಾಧೀಶನಿಗಿಂತಲೂ ಹೆಚ್ಚು ಸುಖಿಯಾಗಿರುತ್ತಾನೆ. ಆದ್ದರಿಂದ ನಾವು ಬಡತನವನ್ನು ತುಚ್ಛೀಕರಿಸಬೇಕಿಲ್ಲ. ಪ್ರಪಂಚದ ಮಹಾನ್ ವ್ಯಕ್ತಿಗಳೆಲ್ಲಾ ಕಡುಬಡವರಾಗಿದ್ದರು ...." ಅವರು ಅಂದು ಆಡಿದ ಪ್ರವಾದಿತನದ ಈ ಮಾತುಗಳು ಮುಂದೆ ಅವರ ಬದುಕಿನಲ್ಲಿಯೇ ಸತ್ಯಾಸತ್ಯವಾಗಿ ಸಾಬೀತಾದವು.

ಅವರು ತಮ್ಮ ಹುದ್ದೆಯನ್ನು ತ್ಯಜಿಸಿ ಮಾನವ ಸೇವೆಗೆ ತಮ್ಮನ್ನು ತಾವು ಸಮರ್ಪಿಸಿಕೊಳ್ಳಲು ಸಿದ್ಧರಿದ್ದಾಗ್ಯೂ ಕೌಟುಂಬಿಕ ಕಾರಣಗಳಿಂದಾಗ ಅವರು ಗೋಖಲೆಯವರ ಸೊಸೈಟಿ ಸೇರಲು ಸಾಧ್ಯವಾಗಲಿಲ್ಲ. ಇದರಿಂದ ಅವರ ಮನಸ್ಸಿನ ನೆಮ್ಮದಿ ಕದಡಿತ್ತಾದರೂ ಅನತಿ ಕಾಲದಲ್ಲೇ ಅದು ತನ್ನ ಸ್ಥಿಮಿತತೆಯನ್ನು ಮತ್ತೆ ಪಡೆದುಕೊಂಡಿತು. ಪರಿಣಾಮವಾಗಿ, ಅಂದು ಕಲ್ಕತ್ತಾ ಹೈ ಕೋರ್ಟಿನ ಪ್ರಖ್ಯಾತ ನ್ಯಾಯವಾದಿಗಳಾಗಿದ್ದ ಡಾ: ರಾಶ್ ಬಿಹಾರಿ ಬೋಸ್ ಮತ್ತು ಸರ್ ಎಸ್.ಪಿ. ಸಿನ್ಹಾ (ಆನಂತರ ಲಾರ್ಡ್ ಸಿನ್ಹಾ) ಅವರೊಂದಿಗೆ ಸರಿಮಿಗಿಲಾಗಿ ದುಡಿಯತೊಡಗಿದರು. ಸಾಮಾಜಿಕವಾಗಿ ಕ್ರಿಯಾಶೀಲಾಗಿರುವುದರ ಜತೆಜತೆಗೆ ಕಾಯ್ದೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದುಕೊಂಡರು.

ವಿದ್ಯಾರ್ಥಿಗಳ ಸಂಘಟನೆಗೆ ಸಂಬಂಧಿಸಿದಂತೆ ಅವರು ಅನೇಕ ಚಟುವಟಿಕೆಗಳಲ್ಲಿ ವಹಿಸುತ್ತಿದ್ದ ಮುಖಂಡತ್ವದ ಪಾತ್ರ ಮತ್ತು ಸಂಘಟನಾತ್ಮಕ ಚಟುವಟಿಕೆಗಳ ಬಗ್ಗೆ ಅವರು ತೋರುತ್ತಿದ್ದ ಮುತುವರ್ಜಿಯಿಂದಾಗಿ, ಅವರನ್ನು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರನ್ನಾಗಿ ಚುನಾಯಿಸಲಾಯಿತು. ಮುಂದೆ, 1911 ರಲ್ಲಿ ಕಲ್ಕತ್ತಾದಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ವಾರ್ಷಿಕ ಅಧಿವೇಶನದಲ್ಲಿ ಅವರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿ ಪಾಲ್ಗೊಂಡರು.

ಗಾಂಧೀಜಿ ಚರಿತ್ರಾರ್ಹ ಚಂಪಾರಣ ಸತ್ಯಾಗ್ರಹದ ಮಹಾ ಮಣಿಹ ಹೊತ್ತಾಗ ರಾಜೇನ್ ಬಾಬು, ಅವರ ಅತ್ಯಂತ ನಿಕಟ ಸಂಗಾತಿಗಳಲ್ಲಿ ಒಬ್ಬರಾಗಿದ್ದರು. ಚಂಪಾರಣದ ನೀಲಿ ಬೆಳೆಗಾರರ ಮತ್ತು ಬ್ರಿಟಿಷರ ಅಮಿತ ಶೋಷಣೆಯಿಂದ ಸಹಸ್ರಾರು ರೈತರನ್ನು ರಕ್ಷಿಸುವದೇ ಆ ಸತ್ಯಾಗ್ರಹದ ಉದ್ದೇಶವಾಗಿತ್ತು. ಬಡ ರೈತಾಪಿಗಳಾದರೋ ದಿಕ್ಕಿಲ್ಲದವರಾಗಿ ಅವರ್ಣನೀಯ

ಸಂಕಟಗಳಿಗೆ ಗುರಿಯಾಗುತ್ತಿದ್ದರು. ಆದರೆ ಬೆಳೆಗಾರರಾಗಿದ್ದ ಬ್ರಿಟಿಷರಿಗೆ ಸರ್ಕಾರದ ಎಲ್ಲ ಸೌಲತ್ತು ದೌಲತ್ತು ದೊರೆಯುತ್ತಿದ್ದವು. ಸರ್ಕಾರವೇ ಅವರ ಬೆಂಬಲಕ್ಕೆ ನಿಂತಿರುತಿತ್ತು.

ಚಂಪಾರಣದ ಸಮಗ್ರ ಜನತೆ ಒಂದು ಬೃಹತ್ ಶಕ್ತಿಯಾಗಿ ಎದ್ದು ನಿಂತು, ನಾಗರಿಕ ಅಸಹಕಾರ ಆಂದೋಲನಕ್ಕೆ ಸ್ಪಂದಿಸಿತು. ತಮ್ಮ ಸಮಸ್ಯೆಗಳಿಗಾಗಿ ಐಕ್ಯತೆಯಿಂದ ಹೋರಾಡಲು ದೊರೆತ ಮೊದಲ ಅವಕಾಶಕ್ಕೆ ಅವರು ಸ್ವಯಂ ಸ್ಫೂರ್ತಿಯಿಂದ ತಮ್ಮನ್ನು ತಾವು ತೊಡಗಿಸಿಕೊಂಡರು. ಅಷ್ಟಾಗಿಯೂ ಆ ಯುದ್ಧವನ್ನು ಗೆಲ್ಲಲು ಗಾಂಧೀಜಿ, ರಾಜೇನ್ ಬಾಬು ಮತ್ತು ಇತರರಿಗೆ ಪೂರ್ತಿ ಒಂದು ವರ್ಷ ತಗುಲಿತು. ಅದು ಭಾರತದಲ್ಲಿ ಸತ್ಯಾಗ್ರಹದ ಮೊಟ್ಟಮೊದಲ ಪ್ರಯೋಗವಾಗಿತ್ತು. ಜನಜಾಗೃತಿಯಿಂದುದ್ಭವಿಸಿದ ಅಪಾರ ಒತ್ತಡಕ್ಕೆ ಮಣಿದು ರೈತಾಪಿಗಳ ಸಮಸ್ಯೆಯನ್ನು ಕುರಿತು ಅಧ್ಯಯನಿಸಲು ಸರ್ಕಾರ ಒಂದು ಆಯೋಗವನ್ನು ನೇಮಿಸಿತು. ಗಾಂಧೀಜಿ ಆ ಆಯೋಗದಲ್ಲಿರಲು ಕೇಳಿಕೊಳ್ಳಲಾಯಿತು. ಆ ಆಯೋಗದ ವರದಿಯ ಪರಿಣಾಮವಾಗಿ, ರೈತರ ಪ್ರಮುಖ ಸಮಸ್ಯೆಗಳಿಗೆ ಪರಿಹಾರ ದೊರೆಯಿತು. ನೀಲಿ ಬೆಳೆಗಾರರಾಗಿದ್ದ ಬ್ರಿಟಿಷರು ಚಂಪಾರಣದಲ್ಲಿ ತಮ್ಮ ನೆಲೆ ಕಳೆದುಕೊಂಡರು. ಈ ಅಂದೋಲನದಿಂದ ಅವರಿಗೆ ದೊಡ್ಡ ಧಕ್ಕೆ ತಗುಲಿತು. ಚಂಪಾರಣ ಹೋರಾಟವು ಬಿಹಾರ ಪ್ರಾಂತದುದ್ದಕ್ಕೂ ರಾಜಕೀಯ ಪ್ರಜ್ಞೆಯನ್ನು ಜಾಗೃತಗೊಳಿಸಿತ್ತು. ಮೇಲಾಗಿ, ಅದು ಇಡೀ ರಾಷ್ಟ್ರದ ಸ್ವಾತಂತ್ರ್ಯ ಗೆಲ್ಲಲು ಪ್ರಪ್ರಥಮ ನಾಗರಿಕ ಅವಿಧೇಯತೆಯ ಪಾಠವನ್ನು ಕಲಿಸಿಕೊಟ್ಟಿತು.

1918 ರಲ್ಲಿ ರಾಜೇನ್ ಬಾಬು ಒಂದು ಇಂಗ್ಲೀಷ್ ಪತ್ರಿಕೆಯನ್ನು ಆರಂಭಿಸಿದರು. 'ಸರ್ಚ್ ಲೈಟ್' ಎಂಬ ಈ ಪತ್ರಿಕೆ ವಾರಕ್ಕೆ ಎರಡಾವರ್ತಿ ಪ್ರಕಟವಾಗುತ್ತ ಕೆಲವೇ ಸಮಯದಲ್ಲಿ ಬಿಹಾರದಾದ್ಯಂತ ಜನಪ್ರಿಯತೆಯನ್ನು ಗಳಿಸಿಕೊಂಡಿತು. ಆ ಪತ್ರಿಕೆ ಇವತ್ತಿಗೂ ಅಸ್ತಿತ್ವದಲ್ಲಿದ್ದು ಈಗ ದೈನಿಕವಾಗಿ ಹೊರಬರುತ್ತಿದೆ. ಎರಡು ವರ್ಷಗಳ ನಂತರ, 1920ರಲ್ಲಿ ಅವರು 'ದೇಶ್' ಎಂಬ ಹಿಂದೀ ಸಾಪ್ತಾಹಿಕವನ್ನು ಆರಂಭಿಸಿದರು. ಎರಡೂ ಪತ್ರಿಕೆಗಳನ್ನು ಜನತೆ ತೆರೆದ ಮನಸ್ಸಿನಿಂದ ಸ್ವಾಗತಿಸಿತು.

ಮಹಾತ್ಮಾ ಗಾಂಧೀ ಚರಿತ್ರಾರ್ಹ ಅಸಹಕಾರ ಆಂದೋಲನ ಆರಂಭಿಸಿದಾಗ ರಾಜೇನ್ ಬಾಬು, ಅವರ ಅತ್ಯಂತ ವಿಶ್ವಾಸನೀಯ ದಣಾಯಕರಾಗಿದ್ದರು. ಬಿಹಾರಿನುದ್ದಕ್ಕೂ ರೈತ ಮತ್ತು ವಿದ್ಯಾರ್ಥಿಗಳ ವಕ್ತಾರರಾಗಿ ಆಂದೋಲನಕ್ಕೆ ನೇತೃತ್ವ ಕೊಟ್ಟರು. ಸಂದರ್ಭಕ್ಕೆ ಸಂವಾದಿಯಾಗಿ ಸ್ಪಂದಿಸುತ್ತಿದ್ದ ರಾಜೇನ್ ಬಾಬು ಅಸಹಕಾರ ಆಂದೋಲನದ ಸಂದರ್ಭದಲ್ಲಾಗಲೀ, ಸ್ವರಾಜ್ ಚಳುವಳಿಯ ಸಮಯದಲ್ಲಾಗಲೀ, ಅಥವಾ ಹರಿಜನೋದ್ಧಾರದ ಕಾರ್ಯಕ್ರಮದಲ್ಲಾಗಲೀ, ತಾವು ಕೈಗೆತ್ತಿಕೊಂಡ ಕೆಲಸದ ಬಗ್ಗೆ ಅನುಪಮ ಭಕ್ತಿ ಮತ್ತು ಪ್ರಾಮಾಣಿಕತೆಯನ್ನು ತೋರುತ್ತಿದ್ದರು. ಅವರ ದೂರದೃಷ್ಟಿ ಮತ್ತು ಸಂಘಟನಾ ಕೌಶಲ್ಯಗಳೂ ಅಷ್ಟೇ ಅನನ್ಯವಾಗಿದ್ದವು. ಹಿಂದೆಂದೂ ಕಂಡರಿಯದ ಭೂಕಂಪಗಳು, ಮಹಾಪೂರಗಳ ಹಾವಳಿಗಳು, ಮುಂತಾದ ನೈಸರ್ಗಿಕ ವಿಕೋಪಗಳಿಂದ ಉದ್ಭವಿಸಿದ ಅಪಾರ ಸಂಕಷ್ಟಗಳ ಸಂದರ್ಭದಲ್ಲಿ ಅವರು ಸಂಘಟಿಸಿದ ಪರಿಹಾರ ಮತ್ತು ಪುನರ್‌ವಸತಿ ಕಾರ್ಯಗಳು ಅವರ ಅದ್ವಿತೀಯ ಕರ್ತವ್ಯ ಶಕ್ತಿಗೆ ಸಂಕೇತಗಳಾಗಿದ್ದವು.

ಕಾರ್ಮಿಕ ಚಳುವಳಿಯಲ್ಲಿ ಅವರಿಗೆ ತುಂಬಾ ಆಸಕ್ತಿಯಿತ್ತು. ಅನೇಕ ಔದ್ಯಮಿಕ ಕೇಂದ್ರಗಳಲ್ಲಿ ಕಾರ್ಮಿಕರನ್ನು ಸಂಘಟಿಸುವುದಲ್ಲದೆ, ದೇಶದಾದ್ಯಂತ ವ್ಯಾಪಕವಾದ ಪ್ರವಾಸ ಕೈಗೊಂಡು ಅಹಿಂಸೆ, ಪ್ರೇಮ ಮತ್ತು ಸಮಾನತೆಯ ತತ್ವಗಳನ್ನು ಬೋಧಿಸುತ್ತ ಜನಜಾಗರಣದ ಗುರಿಯೆಡೆಗೆ ದಾಪುಗಾಲು ಹಾಕಿದರು. ಅಹಿಂಸೆ, ಜಾಗತಿಕ ಭ್ರಾತೃತ್ವ ಮತ್ತು ಪರಸ್ಪರ ಸದ್ಭಾವದ ಸಂದೇಶ ಹೊತ್ತು ಅವರು ವಿದೇಶಗಳಲ್ಲಿಯೂ ಸಾಕಷ್ಟು ತಿರುಗಾಡಿದರು. ಯುದ್ಧ ವಿರೋಧಿ ಆಂದೋಲನಕ್ಕೆ ಶಕ್ತಿ ತುಂಬುವುದೇ ಅವರ ಈ ಎಲ್ಲ ವಿಸ್ತೃತ ಪರಿಭ್ರಮಣದ ಉದ್ದೇಶವಾಗಿತ್ತು.

ಸ್ವಾತಂತ್ರ್ಯ ಹೋರಾಟಗಾರರಾಗಿ ಅನೇಕ ಸಂದರ್ಭಗಳಲ್ಲಿ ಅವರು ಕಾರಾವಾಸಕ್ಕೂ ಗುರಿಯಾಗಿದ್ದರು.

ರಾಷ್ಟ್ರದ ಮಹಾಕಾರಣಕ್ಕೆ ತಮ್ಮನ್ನು ತಾವು ಸಮರ್ಪಿಸಿಕೊಂಡ ಅವರ ನಿಸ್ವಾರ್ಥತೆಯ ಕಾರಣದಿಂದಾಗಿ, ಅವರು ಅಪಾರ ಜನತೆಯ ಕಣ್ಮಣಿಯಾಗಿದ್ದರು. ಅತಿ ಶೀಘ್ರದಲ್ಲಿಯೇ ರಾಷ್ಟ್ರದ ಪ್ರಮುಖ ನೇತಾರ ಮೇರುಗಳಲ್ಲಿ ಒಬ್ಬರಾಗಿ ಪರಿಣಮಿಸಿದರು. ಈ ಎಲ್ಲಾ ಕಾರಣಗಳಿಂದಾಗಿಯೆ, 1930 ರಲ್ಲಿ ಸುಭಾಷ್ಚಂದ್ರ ಬೋಸ್‌ರು ರಾಜೀನಾಮೆಯಿತ್ತಾಗ ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷ ಸ್ಥಾನಕ್ಕೆ ರಾಜೇನ್ ಬಾಬು ಅವರ ಹೆಸರು ಸಹಜವಾಗಿಯೇ ಅವಿರೋಧ ಆಯ್ಕೆಯಾಗಿತ್ತು.

1947, ರಾಜೇನ್ ಬಾಬು ಕೇಂದ್ರದ ಮಧ್ಯಂತರ ಸರಕಾರದಲ್ಲಿ ಆಹಾರ ಮತ್ತು ಕೃಷಿ ಸಚಿವರಾಗಿ ಸಂಪುಟ ಸೇರಿದರು. ಆಗ ಮಧ್ಯಪ್ರದೇಶದ ರಾವುನಲ್ಲಿ ನಡೆದ ಸರ್ವೋದಯ ಸಮ್ಮೇಳನಕ್ಕೆ ಅವರನ್ನು ಆಮಂತ್ರಿಸಲಾಯಿತು. ಉಜ್ಜಯಿನಿ ಜಿಲ್ಲಾ ಕಾಂಗ್ರೆಸ್ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ನಾನು ಇತರ ಅನೇಕ ಗಣ್ಯ ಕಾಂಗ್ರೆಸ್ ನಾಯಕರೊಂದಿಗೆ ಜೊತೆಗೂಡಿ, ಡಾ: ರಾಜೇಂದ್ರ ಪ್ರಸಾದ್ ಅವರನ್ನು ಕಂಡು, ನಮ್ಮ ಹುಟ್ಟೂರಾದ ಬಾರನಗರ ಮತ್ತು ಆಸುಪಾಸಿನ ಗ್ರಾಮಾಂತರ ಪ್ರದೇಶಗಳಿಗೆ ಭೆಟ್ಟಿ ನೀಡಬೇಕೆಂದು ಕೇಳಿಕೊಂಡವು. ಡಾ: ರಾಜೇಂದ್ರ ಪ್ರಸಾದರು ಕೂಡಲೇ ಒಪ್ಪಿಕೊಂಡರು. ಎಲ್ಲರೊಂದಿಗೆ ಸಲುಗೆಯಿಂದ ಬೆರೆಯುತ್ತಾ, ನಮ್ಮೆಲ್ಲರ ಮಾತುಗಳಿಗೆ ಸೂಕ್ತ ಗಮನಕೊಟ್ಟು ಕೇಳುತ್ತಾ, ನಮ್ಮ ಸಮಸ್ಯೆಗಳನ್ನು ಬಹುಮುತುವರ್ಜಿಯಿಂದ ಚರ್ಚಿಸುವ ಪಿತೃ ಸಮಾನರಾಗಿದ್ದ ಹಿರಿಯ ಕರುಣಾಳುವೊಬ್ಬರು ನಮ್ಮ ಮಧ್ಯದಲ್ಲಿದ್ದುದ್ದು ನಮಗೆ ಅತೀವ ಸಂತೋಷವನ್ನುಂಟು ಮಾಡಿತ್ತು. ದಯಾರ್ದ್ರತೆ ಅವರ ಮುಖಕ್ಕೆ ವಿಶೇಷ ಕಳೆಗಟ್ಟುತ್ತಿತ್ತು. ಕುಡಿಯುವ ನೀರು, ಗೃಹ ನಿರ್ಮಾಣ, ಕೃಷಿ, ಗ್ರಾಮೀಣಾಭಿವೃದ್ಧಿ ಮುಂತಾದ ವಿಷಯಗಳ ಕುರಿತು ಅವರು ನೀಡುತ್ತಿದ್ದ ಸೂಕ್ತವಾದ ಸಲಹೆ ಅವರ ಬಗ್ಗೆ ನಮಗಿದ್ದ ಗೌರವವನ್ನು ಹೆಪ್ಪುಗಟ್ಟಿಸುತ್ತಿತ್ತು. ಅವರ ನಿರಾಡಂಬರ ವರ್ತನೆ, ಸರಳ ಸಹಜ ಸಜ್ಜನಿಕೆ, ಇದೆಲ್ಲಕ್ಕೂ ಮಿಗಿಲಾಗಿ, ಪ್ರತಿ ಮಾತಿನಲ್ಲೂ ತೋರುತ್ತಿದ್ದ ಮಾನವೀಯ ಸ್ಪರ್ಶ ಈ ಎಲ್ಲವೂ ಅವರ ಬಗ್ಗೆ ನಮಗಿದ್ದ ಗೌರವಾದರಗಳನ್ನು ನೂರ್ಮಡಿಗೊಳಿಸಿದವು.

1946 ರಿಂದ 49ರ ವರೆಗೆ ಡಾ: ರಾಜೇಂದ್ರ ಪ್ರಸಾದರು ಸಂವಿಧಾನ ಸಭೆಯ ಅಧ್ಯಕ್ಷೀಯ ಸ್ಥಾನವನ್ನು ಅಲಂಕರಿಸಿದ್ದರು. ಅಲ್ಲಿ ನಡೆಯುತ್ತಿದ್ದ ಚರ್ಚೆ, ವಾದ-ವಿವಾದಗಳನ್ನು, ಸದಸ್ಯರ ಪರಸ್ಪರ ತಾಕಲಾಟದ ದೃಷ್ಟಿ ಧ್ರುವಗಳನ್ನು ಸಮನ್ವಯಗೊಳಿಸುವಲ್ಲಿ ಅವರು ತೋರಿದ ಅತುಲ ಚಾತುರ್ಯ ಗಮನಾರ್ಹವಾದದ್ದು. ಅನೇಕ ಸಂದರ್ಭಗಳಲ್ಲಿ ತಮ್ಮ ಸೌಮ್ಯ ಮತ್ತು ಸದ್ವಿವೇಕದ

ಉಪದೇಶದಿಂದ ವಿರೋಧಾಭಿಪ್ರಾಯಗಳ ಮಧ್ಯ ಸಂಧಾನವೇರ್ಪಡಿಸುತ್ತಿದ್ದ ಅವರ ಅಧ್ಯಕ್ಷೀಯ ಚಾಕಚಕ್ಯತೆ ಅವಿಸ್ಮರಣೀಯವಾದದ್ದು.

1952ರಲ್ಲಿ ಡಾ: ರಾಜೇಂದ್ರ ಪ್ರಸಾದರು ಜಗತ್ತಿನ ಬೃಹತ್ ಪ್ರಜಾಸತ್ತಾತ್ಮಕ ರಾಷ್ಟ್ರವೊಂದರ ಅಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾದರು. ಮುಂದೆ 1957ರಲ್ಲಿ ಮತ್ತೆ ಪುನರಾಯ್ಕೆಗೊಂಡರು.

ರಾಜೇನ್ ಬಾಬು ಅವರ ಅಧಿಕಾರಾವಧಿಯಲ್ಲಿ ಭಾರತದ ಪ್ರಥಮ ಪ್ರಜೆಯನ್ನು ಭೆಟ್ಟಿಯಾಗುವ ಅಪರೂಪದ ಅವಕಾಶಗಳು ನನಗೆ ದೊರೆತಿದ್ದವು. ನಾನು ಭೆಟ್ಟಿಯಾದಾಗಲೆಲ್ಲಾ ವಿನಯಶೀಲತೆ, ಪ್ರೀತಿ ಮತ್ತು ಸೌಜನ್ಯತೆಯಿಂದ ನಡೆದುಕೊಳ್ಳುತ್ತಿದ್ದರು. ಗ್ರಾಮಾಂತರ ಅಭಿವೃದ್ಧಿ ಯೋಜನೆಗಳ ಕಾರ್ಯಾಚರಣೆ ಮತ್ತು ಜಾರಿಗೊಳಿಸುವಿಕೆಯ ಕುರಿತು ತುಂಬ ಕಾತರದಿಂದ ಕೇಳುತ್ತಿದ್ದರು. ಈ ಬಗ್ಗೆ ಅವರಿಗಿದ್ದ ಕುತೂಹಲ ಹೇಳಲಸದಳ.

ರಾಷ್ಟ್ರದ ಅತ್ಯುನ್ನತ ಹುದ್ದೆಯನ್ನು 13ಮೇ, 1962 ರಂದು ತ್ಯಜಿಸಿದ ಮೇಲೆ ರಾಜೇನ್ ಬಾಬು ತಮ್ಮ ಸದಾಕತ್ ಆಶ್ರಮಕ್ಕೆ ತೆರಳಿದರು. ಅಲ್ಲಿಯೇ ತಮ್ಮ ಉಳಿದ ಬದುಕನ್ನು ಕಳೆಯಬೇಕೆಂಬುದು ಅವರ ಬಯಕೆಯಾಗಿತ್ತು. ಆದರೆ ಮರು ವರ್ಷವೇ ಅಂದರೆ, 28 ಫೆಬ್ರುವರಿ 1963 ರಂದು ಸದಾಕತ್ ಆಶ್ರಮದಲ್ಲಿಯೇ ಅವರು ಪರಂಧಾಮವನ್ನೈದಿದರು.

1963ರಲ್ಲಿ ರಾಷ್ಟ್ರದ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ 'ಭಾರತ ರತ್ನ' ವನ್ನು ಅವರಿಗೆ ನೀಡಿದ್ದುದು ಅತ್ಯಂತ ಸಮಂಜಸವಾಗಿತ್ತು.

ಮುಂಬರುವ ಜನಾಂಗಕ್ಕಾಗಿ ಸಮುಚಿತ ಹಾದಿ ಸವೆಸಿ, ತಮ್ಮ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋದದ್ದಕ್ಕಾಗಿ ಇಡೀ ರಾಷ್ಟ್ರ ಅವರಿಗೆ ಋಣಿಯಾಗಿದೆ.

## ಭಾಗ-3

# ಅವರ ವಿಚಾರ ಧಾರೆ

(ಡಾ: ರಾಜೇಂದ್ರ ಪ್ರಸಾದರು ಸಂವಿಧಾನ ಸಭೆ/ಸಂಸತ್ತಿನಲ್ಲಿ ಮಾಡಿದ ಕೆಲವು ಆಯ್ದ ಭಾಷಣಗಳ ಅವತರಣಿಕೆಗಳು)

## ಸಂವಿಧಾನ ಸಭೆಯ ಅಧ್ಯಕ್ಷರಾಗಿ ಚುನಾಯಿತರಾದಾಗ *

ಸಹೋದರ, ಸಹೋದರಿಯರೆ, ಈ ಅತ್ಯಂತ ಮಹತ್ವದ ಜವಾಬ್ದಾರಿಯನ್ನು ನನಗೆ ವಹಿಸಿಕೊಡುವ ಮೂಲಕ ತಾವೆಲ್ಲ ನನ್ನ ಹೆಗಲ ಮೇಲಿಟ್ಟಿರುವ ಕಾರ್ಯಭಾರದಿಂದಾಗಿ ನಾನು ಸಂಭ್ರಾಂತನಾಗಿದ್ದೇನೆ ಎಂದು ನುಡಿದುದಕ್ಕೆ ಕ್ಷಮೆಯಿರಲಿ. ನನ್ನನ್ನು ಈ ಅತ್ಯುನ್ನತ ಹುದ್ದೆಗೆ ಆಯ್ಕೆ ಮಾಡುವ ಮೂಲಕ ಒಬ್ಬ ಭಾರತೀಯನಿಗೆ ದೊರೆಯಬಹುದಾದ ಪರಮೋನ್ನತ ಗೌರವಕ್ಕೆ ಭಾಜನನನ್ನಾಗಿ ಮಾಡಿದ್ದೀರಿ. ಜಾತಿ ಮತಗಳಿಂದ ತುಂಬಿರುವ ನಮ್ಮ ದೇಶದಲ್ಲಿ ನನ್ನನ್ನು ನಿಮ್ಮ ಜಾತಿಯಿಂದ ಹೊರ ಹಾಕಿದ್ದೀರಿ ಎಂಬಂತೆ ಭಾಸವಾಗುತ್ತಿದೆ ಎಂದು ಹೇಳ ಬಯಸುತ್ತೇನೆ. ನಿಮ್ಮ ಮಧ್ಯದಲ್ಲಿದ್ದ ಸ್ಥಾನದಿಂದ ನನ್ನನ್ನು ದೂರ ಮಾಡಿ, ನಿಮಗಿಂತಲೂ ಭಿನ್ನವಾದ ಕುರ್ಚಿಯ ಮೇಲೆ ಕೂಡುವಂತೆ ಒತ್ತಾಯಿಸಿದ್ದೀರಿ. ಇದು ಇಲ್ಲಿಗೆ ಮುಗಿಯಲಿಲ್ಲ. ಈ ಸದನದಲ್ಲಿ ನಾನು ಯಾವುದೇ ಒಂದು ನಿರ್ದಿಷ್ಟ ಪಕ್ಷ ಅಥವಾ ಪಂಗಡಕ್ಕೆ ಸಂಬಂಧಿಸಿದಂತೆ ವರ್ತಿಸದ ಹಾಗೆ ನನ್ನಲ್ಲಿ ಪರಮ ನಿರ್ಲಿಪ್ತತೆಯನ್ನು ನೀವು ನಿರೀಕ್ಷಿಸುತ್ತೀರಿ ಎಂಬುದು ನನ್ನ ನಂಬುಗೆ. ನಾನು ಈ ಸದನದಲ್ಲಿ ಮಾಡುವುದೆಲ್ಲವೂ ನಿಮ್ಮೆಲ್ಲರ ಸೇವೆಯ ಸದ್ಭಾವದಿಂದ ಪ್ರೇರಿತವಾಗಿರಬೇಕೆಂದೂ ತಾವು ಅಪೇಕ್ಷಿಸುತ್ತೀರಿ. ನನ್ನನ್ನು ಈ ಸಂದರ್ಭದಲ್ಲಿ ಅಭಿನಂದಿಸಿರುವ ಎಲ್ಲ ಸಹೋದರ ಮತ್ತು ಹಿರಿಯ ಸಹೋದರಿಯರಿಗೆ ಹರ್ಷೋಲ್ಲಾಸವಾಗುವ ರೀತಿಯಲ್ಲಿಯೇ ನನ್ನ ಸ್ಥಾನ ಗೌರವವನ್ನು ಮುನ್ನಡೆಸಿಕೊಂಡು ಹೋಗಲು ಪ್ರಯತ್ನಿಸುತ್ತೇನೆ. ನನ್ನ ದಾರಿಯಲ್ಲಿ ಅನೇಕ ಅಡ್ಡಿ ಅಡಚಣೆಗಳಿವೆ ಎಂಬ ಅರಿವು ನನಗಿದೆ. ಈ ಸಂವಿಧಾನ ಸಭೆಯ ಕಾರ್ಯ ಅತ್ಯಂತ ದುಸ್ತರದ್ದಾಗಿದೆ. ಅದರ ಮುಂದೆ ಅನೇಕ ಸಮಸ್ಯೆಗಳು ತಲೆಯೆತ್ತಲಿವೆ. ಕಷ್ಟಸಾಧ್ಯ ಪರಿಹಾರದ ಹಲವಾರು ಪ್ರಶ್ನೆಗಳು ಎದುರಾಗಲಿವೆ. ಅವೆಲ್ಲವುಗಳನ್ನೂ ಬಗೆಹರಿಸುವುದು ನನ್ನಿಂದ ಅಸಾಧ್ಯವೆಂಬುದೂ ನನಗೆ ಗೊತ್ತಿದೆ. ಆದರೆ ನೀವು ಯಾವ ಪ್ರೀತಿ ಮತ್ತು ಔದಾರ್ಯದಿಂದ ಚುನಾಯಿಸಿದ್ದೀರೋ ಅದೇ ಪ್ರೀತಿ ಮತ್ತು ಔದಾರ್ಯದೊಂದಿಗೆ ಹೆಜ್ಜೆ ಹೆಜ್ಜೆಗೂ ತಾವೆಲ್ಲ ನನ್ನ ಸಹಾಯಕ್ಕೆ ನಿಲ್ಲಬಲ್ಲಿರಿಯೆಂಬ ಸಂಪೂರ್ಣ ವಿಶ್ವಾಸ ನನಗಿದೆ.

ಈ ಸಂವಿಧಾನ ಸಭೆಯು ಅತ್ಯಂತ ಸಂದಿಗ್ಧ ಸಮಯದಲ್ಲಿ ಸಭೆ ಸೇರುತ್ತಿದೆ. ಇತರೆಲ್ಲಾ ಸಂವಿಧಾನ ಸಭೆಗಳೂ ಎಲ್ಲ ಸಮಯ ಮತ್ತು ಸಂದರ್ಭಗಳಲ್ಲೂ ಇಂಥ ಸಮಸ್ಯೆಗಳನ್ನೇ ಎದುರಿಸಿವೆಯೆಂಬುದು ನಮ್ಮೆಲ್ಲರಿಗೂ ಗೊತ್ತಿದೆ. ಅವು ತಂತಮ್ಮ ಆಂತರಿಕ ಭಿನ್ನತೆಯಿಂದಾಗಿಯೇ ಬಹು ತುರುಸಿನಿಂದ ಪರಸ್ಪರರ ವಿರುದ್ಧ ಸೆಣಸಾಡಿವೆ. ಎಷ್ಟೋ ಸಲ ಸಂವಿಧಾನ ಸಭೆಗಳು ಜಗಳ, ತೋಟಿ, ರಕ್ತಪಾತದ ನಡುವೆ ನಡೆದಿವೆಯೆಂಬುದೂ ನಿಮಗೆ ಗೊತ್ತಿದೆ. ಅವುಗಳ ನಡವಳಿಕೆಗಳಲ್ಲಿ ಪರಸ್ಪರ ಬಡಿದಾಟ, ಕಾದಾಟಗಳು ಕಂಡುಬರುತ್ತಿದ್ದವು. ಇಷ್ಟೆಲ್ಲಾ ಅಡಚಣೆಗಳ ಮಧ್ಯೆಯೂ ಆ ಸಭೆಗಳಲ್ಲಿ ತಮ್ಮ ಕೆಲಸಗಳನ್ನು ಪೂರ್ತಿಗೊಳಿಸಿವೆ. ಆ ಸಭೆಗಳ ಸದಸ್ಯರು ಧೈರ್ಯ, ಔದಾರ್ಯ, ಕರುಣೆ ಮತ್ತು ಸಹನಾಮೂರ್ತಿಗಳಾಗಿ ಪರಸ್ಪರರ ಅನಿಸಿಕೆಗಳ ಬಗ್ಗೆ ಗೌರವ ಭಾವದಿಂದ ರಚಿಸಿದ ಸಂವಿಧಾನಗಳನ್ನು ಆಯಾ ದೇಶದ ಜನತೆ ಮುಕ್ತ ಮನಸ್ಸಿನಿಂದ ಸ್ವೀಕರಿಸಿದ್ದಾರೆ, ಅಂಗೀಕರಿಸಿದ್ದಾರೆ. ಇವತ್ತಿಗೂ ಕೂಡ ಆ ದೇಶಗಳ ಜನರು ತಂತಮ್ಮ

* ಸಂವಿಧಾನ ಸಭೆಯ ಚರ್ಚೆಗಳು, ಸಂಪುಟ 1, 11 ಡಿಸೆಂಬರ್ 1946.

ಸಂವಿಧಾನಗಳನ್ನು ಅಮೂಲ್ಯ ಆಸ್ತಿಯೆಂದು ಬಗೆಯುತ್ತಿದ್ದಾರೆ. ಅಂತೆಯೇ ನಮ್ಮ ಸಂವಿಧಾನ ಸಭೆಯೂ ತನ್ನ ದಾರಿಯಲ್ಲಿಯ ಎಲ್ಲಾ ಎಡರು ತೊಡರುಗಳನ್ನು ದಾಟಿ ಯಶಸ್ವಿಗೊಳ್ಳದೇ ಇರಲು ಯಾವುದೇ ಕಾರಣಗಳಿಲ್ಲ. ನಾವು ಪ್ರಾಮಾಣಿಕರಾಗಿದ್ದರೆ, ಪರಸ್ಪರರ ಅಭಿಪ್ರಾಯಗಳನ್ನು ಗೌರವದಿಂದ ಕಾಣುವ ಹೃದಯ ವೈಶಾಲ್ಯವುಳ್ಳವರಾಗಿದ್ದರೆ ಸಾಕು. ಪರಸ್ಪರರ ವಿಚಾರಗಳನ್ನು ಅರಿತು ಅರ್ಥಮಾಡಿಕೊಳ್ಳುವುದಷ್ಟೇ ಅಲ್ಲ, ಪರಸ್ಪರರ ವಾಸ್ತವದ ಸಮಸ್ಯೆ ಸಂಕಟಗಳ ಮೂಲಕ್ಕೆ ಇಳಿದು ಅವುಗಳನ್ನು ಆಮೂಲಾಗ್ರವಾಗಿ ಗ್ರಹಿಸಲು ಅವಶ್ಯವಿರುವ ಒಳನೋಟವನ್ನು ನಾವು ಪಡೆದುಕೊಳ್ಳಬಹುದು. ಆಗ ಯಾರೊಬ್ಬರೂ ತಮ್ಮನ್ನು ನಿರ್ಲಕ್ಷಿಸಲಾಗುತ್ತಿದೆ ಎಂದು ಭಾವಿಸುವುದಾಗಲೀ ತಮ್ಮ ಅಭಿಪ್ರಾಯಗಳಿಗೆ ತಕ್ಕ ಗೌರವ ದೊರೆಯುತ್ತಿಲ್ಲವೆಂದು ದುಮ್ಮಾನಿಸುವುದಾಗಲೀ ಈ ಯಾವುದಕ್ಕೂ ಅವಕಾಶವಿಲ್ಲದಂಥ ರೀತಿಯಲ್ಲಿ ನಾವು ಕಾರ್ಯೋನ್ಮುಖರಾಗಬಹುದು. ಇದು ಸಾಧ್ಯವಾದರೆ, ಇಂಥ ಶಕ್ತಿ ನಮ್ಮಲ್ಲಿ ಒಡಮೂಡಿದ್ದಾದರೆ ಸಾಕು, ನಾವು ನಮಗೆದುರಾಗುವ ಎಲ್ಲಾ ತಾಪತ್ರಯಗಳನ್ನು ಯಶಸ್ವಿಯಾಗಿ ದಾಟಿ, ನಮ್ಮ ಕೆಲಸದಲ್ಲಿ ಸಂಪೂರ್ಣ ಸಾಧನೆಗೈಯ್ಯಬಹುದೆಂಬ ವಿಶ್ವಾಸ ನನಗಿದೆ.

ಈ ಸಂವಿಧಾನ ಸಭೆಯು ಅನೇಕ ಮಿತಿಗಳೊಂದಿಗೆ ಅಸ್ತಿತ್ವಕ್ಕೆ ಬಂದಿದೆ. ಅವುಗಳಲ್ಲಿಯ ಅನೇಕ ಮಿತಿಗಳನ್ನು ನಮ್ಮ ಕಾರ್ಯದುದ್ದಕ್ಕೂ ನಾವು ನೆನಪಿಡಬೇಕಾಗಿದೆ. ಆದರೆ ಈ ಸಭೆಯು ಸರ್ವೋಚ್ಚ ಅಧಿಕಾರ ಹೊಂದಿದ ಒಂದು ನಿಕಾಯವಾಗಿದೆ ಎಂಬುದನ್ನು ನಾವು ನೆನಪಿಡಬೇಕು. ತನಗೆ ಸೂಕ್ತವೆನಿಸಿದ ರೀತಿಯಲ್ಲಿ ತನ್ನ ಕಾರ್ಯಕಲಾಪಗಳನ್ನು ನಡೆಸುವ ಸಂಪೂರ್ಣ ಅಧಿಕಾರ ಅದಕ್ಕಿದೆ. ಹೊರಗಿನ ಯಾವುದೇ ಶಕ್ತಿ ಅದರ ನಡವಳಿಕೆಗಳಲ್ಲಿ ಕೈ ಹಾಕಲಾಗದು. ಅದರ ಜನ್ಮ ಜಾತ ಮಿತಿಗಳನ್ನು ಮುರಿಯಲೂ ಅದು ಸಮರ್ಥವಾಗಿದೆ ಎಂಬುದು ನನ್ನ ಭಾವನೆ. ನಾವು ಈ ಎಲ್ಲಾ ಮಿತಿಗಳಿಂದ ಮುಕ್ತರಾಗಲು ಪ್ರಯತ್ನಿಸುತ್ತಾ, ಈ ದೇಶದ ಎಲ್ಲಾ ಸ್ತ್ರೀ ಪುರುಷರಿಗೆ ಸಮಾನ ರಕ್ಷಣೆ ನೀಡುವ ಸಂವಿಧಾನವೊಂದನ್ನು ರಚಿಸಬೇಕಾಗಿದೆ. ಮತ, ಪ್ರಾಂತ ಮತ್ತು ಯಾವುದೇ ಪ್ರಕಾರದ ಅಭಿಪ್ರಾಯ ಇವೆಲ್ಲವುಗಳ ಆಚೆಗೆ ನಿಂತು ಸರ್ವರ ಹಕ್ಕಿನ ರಕ್ಷಣೆಗೂ ಸಂಪೂರ್ಣ ಅವಕಾಶವಿರುವ ಒಂದು ಸಂವಿಧಾನವನ್ನು ನಾವು ಸೃಷ್ಟಿಸಬೇಕಿದೆ. ಈ ಸದನದಲ್ಲಿ ನಾವು ಈ ಪ್ರಯತ್ನದಲ್ಲಿ ಯಶಸ್ವಿಯಾದರೆ ಬಹುಶಃ ಅದು ಪ್ರಪಂಚದ ಇತಿಹಾಸದಲ್ಲಿಯೇ ಅದ್ವಿತೀಯ ಹಾಗೂ ಅನುಪಮ ಸಾಧನೆಯಾಗಲಿದೆ.

ಈ ಸದನದಲ್ಲಿರುವ ನಾವು ನೆನಪಿಡಬೇಕಾದ ಸಂಗತಿಯೊಂದಿದೆ. ಈ ಸಭೆಯಲ್ಲಿ ಅನೇಕ ಸ್ಥಾನಗಳು ಇನ್ನೂ ಖಾಲಿಯಾಗಿಯೇ ಇವೆ ಎಂಬುದನ್ನು ನಾವು ಒಂದರಗಳಿಗೆಯೂ ಮರೆಯಲಾಗದು. ಮುಸ್ಲಿಂ ಲೀಗ್‌ನ ನಮ್ಮ ಬಂಧುಗಳು ಈಗ ನಮ್ಮೊಂದಿಗಿಲ್ಲ. ಅವರ ಗೈರುಹಾಜರಿ ನಮ್ಮ ಜವಾಬ್ದಾರಿಯನ್ನು ಇನ್ನೂ ಹೆಚ್ಚಿಸಿದೆ. ಅವರು ಇಲ್ಲಿ ಇದ್ದಿದ್ದರೆ ಏನು ಮಾಡಬಹುದಿತ್ತು ಎಂಬುದನ್ನು ನಾವು ಹೆಜ್ಜೆ ಹೆಜ್ಜೆಗೂ ಕಲ್ಪಿಸಿಕೊಳ್ಳಬೇಕಾಗಿದೆ. ಆ ಕುರಿತು ನಮ್ಮ ಚಿಂತನೆ ಕ್ಷಣಕ್ಷಣಕ್ಕೂ ಗಂಭೀರವಾಗಬೇಕಿದೆ. ಈ ಎಲ್ಲಾ ವಿಷಯಗಳನ್ನು ಗಮನದಲ್ಲಿರಿಸಿಕೊಂಡು ನಾವು ಮುಂದಡಿ ಇರಿಸಬೇಕಾಗಿದೆ. ಅವರು ಶೀಘ್ರವೇ ಬಂದು ತಮ್ಮ ಸ್ಥಾನಗಳನ್ನಲಂಕರಿಸುವರೆಂದೂ ತಮ್ಮ ದೇಶಕ್ಕಾಗಿ ಸಂವಿಧಾನವೊಂದನ್ನು ರಚಿಸುವ ಸರ್ವಾರ್ಥದಲ್ಲೂ ಸ್ವಾತಂತ್ರ್ಯವನ್ನು ದಯಪಾಲಿಸುವ, ಸಂವಿಧಾನದ ರಚನೆಯ ಪ್ರಕ್ರಿಯೆಯಲ್ಲಿ

ಪಾಲ್ಗೊಳ್ಳುವರೆಂದೂ ಆಶಿಸೋಣ. ಕೆಲವು ಸಮಯದಲ್ಲಿಯೇ ಅವರು ನಮ್ಮ ಸ್ವಾತಂತ್ರ್ಯದೆಡೆಗಿನ ಮುನ್ನಡೆಯಲ್ಲಿ ನಮ್ಮೊಂದಿಗೆ ಕೂಡಿಕೊಳ್ಳಲಿದ್ದಾರೆಂದು ಭಾವಿಸೋಣ. ಆದರೆ ದುರ್ದೈವವಶಾತ್ ಈ ಸ್ಥಾನಗಳು ತುಂಬಿಕೊಳ್ಳದೆ ಖಾಲಿಯಾಗಿಯೇ ಮುಂದುವರೆದರೆ, ಆಗ ಯಾರಿಂದಲೂ ದೂರು, ತಕರಾರು, ಆಕ್ಷೇಪಣೆ ಬರದಂತಹ, ಸರ್ವಸಮ್ಮತವಾಗಬಹುದಾದಂತಹ ಸಂವಿಧಾನವೊಂದನ್ನು ರೂಪಿಸುವ ಕರ್ತವ್ಯ ನಮ್ಮದಾಗುತ್ತದೆ.

ನಮ್ಮ ಸ್ವಾತಂತ್ರ್ಯಕ್ಕಾಗಿ ನಾವು ದೀರ್ಘ ಕಾಲದಿಂದ ಹೋರಾಡುತ್ತಾ ಬಂದಿದ್ದೇವೆ. ಮೂರು ಶಕ್ತಿಗಳು ಈ ಸಂವಿಧಾನ ಸಭೆಯನ್ನು ಅಸ್ತಿತ್ವಕ್ಕೆ ತಂದಿವೆ: ಮೊಟ್ಟಮೊದಲನೆಯದಾಗಿ, ನಮ್ಮ ದೇಶ ಭಕ್ತರ ತ್ಯಾಗ ಬಲಿದಾನಗಳು. ಅನೇಕ ಸ್ತ್ರೀ ಪುರುಷರು ತಮ್ಮ ಜೀವ ತೆತ್ತಿದ್ದಾರೆ; ಕಲ್ಪನೆಗೂ ಮೀರಿದ ಕಷ್ಟಗಳನ್ನೆದುರಿಸಿದ್ದಾರೆ; ಸರ್ಕಾರದ ಶಿಕ್ಷೆ ಹಿಂಸೆಗಳಿಗೆ ಗುರಿಯಾಗುತ್ತಾ, ದೀರ್ಘ ಹಾಗೂ ನಿರಂತರ ಹೋರಾಟದ ಮೂಲಕ ಸದ್ಯದ ಸ್ಥಿತಿಗೆ ಬಂದು ತಲುಪಿದ್ದಾರೆ. ಎರಡನೆಯದಾಗಿ, ಬ್ರಿಟನ್ನಿನ ಇತಿಹಾಸ; ಅವರ ಸ್ವಾರ್ಥತೆ ಮತ್ತು ಔದಾರ್ಯ. ಮೂರನೆಯದಾಗಿ, ಪ್ರಸಕ್ತದ ಜಾಗತಿಕ ಸ್ಥಿತಿಗತಿಗಳು, ಸದ್ಯದ ಗಂಭೀರ ಪರಿಸ್ಥಿತಿ ಮತ್ತು ಇಂಥ ಸ್ಥಿತಿಯಲ್ಲಿ ಉದ್ಭವಿಸಿರುವ ಜಾಗತಿಕ ಶಕ್ತಿಗಳು. ಇವೆಲ್ಲವೂ ಒಟ್ಟುಗೂಡಿ ನಮ್ಮ ಸಂವಿಧಾನ ಸಭೆಯು ಅಸ್ತಿತ್ವಕ್ಕೆ ಬರಲು ಒತ್ತಾಸೆಯಾಗಿ ನಿಂತಿವೆ. ಸಂವಿಧಾನ ರಚನೆಯ ನಮ್ಮ ಕೆಲಸದಲ್ಲಿ ನಾವು ಮುಂದುವರೆದಂತೆ ಈ ಎಲ್ಲಾ ಶಕ್ತಿಗಳು ಇನ್ನೂ ಕೆಲಸ ಮಾಡುತ್ತಲೇ ಇರುತ್ತವೆ. ನಾವು ಈ ಶಕ್ತಿಗಳ ಸೆಳೆತಕ್ಕೆ ಸಿಕ್ಕು ಈ ಕಡೆಗೋ ಆ ಕಡೆಗೋ ವಾಲುವ ಸಾಧ್ಯತೆಗಳಿಲ್ಲದಿಲ್ಲ. ಆದರೂ ಯಶಸ್ಸು ನಮ್ಮದಾಗುವದೆಂಬ ವಿಶ್ವಾಸ ನನಗಿದೆ. ಈ ಕೆಲಸದಲ್ಲಿ ನಾವು ಪರಸ್ಪರರ ಮನಸ್ಸನ್ನು ಅರಿತು ಒಮ್ಮತದಿಂದ, ಬಿಕ್ಕಟ್ಟಿನಿಂದ ನಮ್ಮ ನಾಡ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಲು, ಉಳಿಸಿಕೊಳ್ಳಲು ನಮಗೆ ಒಂದು ಒಳನೋಟ ಕೊಡಲೆಂದು ನಾನು ದೇವರಲ್ಲಿ ಪ್ರಾರ್ಥಿಸುತ್ತೇನೆ.

ನನಗೆ ಅಭಿನಂದನೆ ಸಲ್ಲಿಸಿದ ಸಹೋದರ ಸಹೋದರಿಯರಿಗೆ ಋಣಿಯಾಗಿದ್ದೇನೆ; ಅವರ ಮಾತುಗಳನ್ನು ಕೇಳಿ ಸಂಭ್ರಾಂತನಾಗಿದ್ದೇನೆ. ನನಗೆ ಒಂದು ರೀತಿಯ ಮುಜುಗರವುಂಟಾಗಿತ್ತು. ಅವರು ಮಾತನಾಡುವಾಗ ನಾನು ಉಪಸ್ಥಿತನಿರಬಾರದಾಗಿತ್ತು ಎಂಬುದು ನನ್ನ ಭಾವನೆ. ತಾವೆಲ್ಲಾ ಆಡಿದ ಸ್ಫೂರ್ತಿದಾಯಕ ಮಾತುಗಳಿಗಾಗಿ ನಾನು ನಿಮ್ಮೆಲ್ಲರಿಗೂ ಇನ್ನೊಮ್ಮೆ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಸದನದ ಕಾರ್ಯಕಲಾಪಗಳುದ್ದಕ್ಕೂ, ದೇವರು ನನಗೆ ದಯಪಾಲಿಸಿರುವ ಎಲ್ಲ ಶಕ್ತಿ ಸಾಮರ್ಥ್ಯ, ಜ್ಞಾನ ಅನುಭವ ತಮ್ಮೆಲ್ಲರಿಗೂ ಮುಕ್ತವಾಗಿ ದೊರಕುವಂತೆ ಎಚ್ಚರ ವಹಿಸುತ್ತೇನೆ ಎಂದು ಈ ಮೂಲಕ ಆಶ್ವಾಸನೆ ನೀಡಬಯಸುತ್ತೇನೆ. ಪ್ರತಿಯಾಗಿ, ನಿಮ್ಮಿಂದ ಸಾಧ್ಯವಿರುವ ಎಲ್ಲಾ ಸಹಾಯವನ್ನು ನೀವು ಮಾಡಬಲ್ಲಿರಿ ಎಂದು ಆಶಿಸುತ್ತೇನೆ.

## ಮಧ್ಯರಾತ್ರಿಯ ಸ್ವಾತಂತ್ರ್ಯ *

ಅನೇಕ ವರ್ಷಗಳ ದೀರ್ಘ ಹೋರಾಟದ ನಂತರ ನಮ್ಮ ಚರಿತ್ರೆಯ ಈ ಗಂಭೀರ ಕ್ಷಣದಲ್ಲಿ ನಾವು ನಮ್ಮ ರಾಷ್ಟ್ರದ ಆಡಳಿತಾಧಿಕಾರವನ್ನು ನಮ್ಮ ಕೈಗೆ ತೆಗೆದುಕೊಳ್ಳುತ್ತಿದ್ದೇವೆ. ಇಂಥ ಸಂದರ್ಭದಲ್ಲಿ, ಮನುಷ್ಯ ಮತ್ತು ರಾಷ್ಟ್ರಗಳ ಭವಿಷ್ಯತ್ತನ್ನು ರೂಪಿಸುವ, ನಿರೂಪಿಸುವ ಆ ಮಹಾ ಪರಾತ್ಪರ ಶಕ್ತಿಗೆ ವಿನಮ್ರವಾಗಿ ನಮಿಸೋಣ; ನಮ್ಮ ಕೃತಜ್ಞತೆಯನ್ನು ಸಮರ್ಪಿಸೋಣ. ಜೊತೆಗೆ ಈ ಕ್ಷಣದ ಕನಸು ನನಸಾಗುವುದಕ್ಕೆ ತಮ್ಮ ಸರ್ವಸ್ವವನ್ನು ತ್ಯಜಿಸಿ, ತಮ್ಮನ್ನೇ ತಾವು ಬಲಿದಾನ ಗೈದ ಸ್ತ್ರೀ ಪುರುಷರನ್ನು ಕೃತಜ್ಞತಾಭಾವದಿಂದ ನೆನಪಿಸಿಕೊಳ್ಳೋಣ. ಧಾರಾಕಾರವಾಗಿ ಬರುತ್ತಿದ್ದ ಗುಂಡಿಗೆ ತಮ್ಮ ಎದೆಯೊಡ್ಡುತ್ತಾ ಅಥವಾ ಹಸನ್ಮುಖಿಗಳಾಗಿ ವಧೆಗಂಬಗಳೆಡೆಗೆ ಧೈರ್ಯ ಧೀಮಂತಿಕೆಯ ಹೆಜ್ಜೆ ಹಾಕುತ್ತಾ, ತಮ್ಮ ಪ್ರಾಣಾರ್ಪಣೆ ಮಾಡಿದ ಸಕಲರನ್ನು ಸ್ಮರಿಸೋಣ. ಇನ್ನೂ ಅನೇಕರು ಅಂದಮಾನದ ಜೈಲುಗಳಲ್ಲಿ ಜೀವನ್ಮರಣದ ನಡುವೆ ಸೆಣಸುತ್ತಾ ಕಾರಾಗೃಹಗಳ ಕಾರ್ಗತ್ತಲೆಯಲ್ಲಿ ಕಾಲ ತಳ್ಳಿದ್ದಾರೆ; ಭಾರತದ ಅಸಂಖ್ಯಾತ ಜೈಲುಗಳಲ್ಲಿ ಜೀವಚ್ಛವಗಳಾಗಿ ದಾರುಣ ಬದುಕು ನಡೆಸಿದ್ದಾರೆ. ಇಂಥ ಅಗಣಿತ ದೇಶಭಕ್ತರೆಲ್ಲರಿಗೂ ನಮ್ಮ ಅಶ್ರುತರ್ಪಣ ಸಲ್ಲಿಸೋಣ. ಇನ್ನೂ ಅನೇಕರು ದೇಶ ಭ್ರಷ್ಟರಾಗಿ ಅನಿರ್ವಚನೀಯ ಅವಘಡ, ಅಪಮಾನಗಳಿಗೆ ಒಳಗಾಗುತ್ತಾ ತಮ್ಮ ಆಸ್ತಿ ಪಾಸ್ತಿಗಳನ್ನು ಕಳೆದುಕೊಳ್ಳುವುದರ ಜೊತೆಗೆ ತಮ್ಮ ಪ್ರೀತಿಯ ಅಕ್ಕರೆಯ ಜನರಿಂದ ದೂರಾಗಿ, ನಾವಿಂದು ಕಾಣುತ್ತಿರುವ ಈ ಸ್ವಾತಂತ್ರ್ಯದ ಮಹಾನ್ ಗುರಿಯೆಡೆಗೆ ವೀರ ಹೆಜ್ಜೆ ಹಾಕಿದ ದೇಶಾಂತರ ವಾಸಿಗಳನ್ನು ನಾವು ನೆನಸಿಕೊಳ್ಳಬೇಕಿದೆ.

ಕಳೆದ ಮೂರು ದಶಕಗಳಿಗೂ ಹೆಚ್ಚು ಕಾಲ ನಮ್ಮ ಸ್ವಾತಂತ್ರ್ಯ ಹೋರಾಟದಲ್ಲಿ ನಮಗೆ ದಿಕ್ಕು ದಿಶೆಗಳನ್ನು ತೋರಿಸುವ ದೀಪಸ್ಥಂಭವಾಗಿ, ಮಾರ್ಗದರ್ಶಕರಾಗಿ, ಮಹಾದಾರ್ಶನಿಕರಾಗಿ ಮುನ್ನಡೆಸಿದ ಮಹಾತ್ಮಾ ಗಾಂಧೀಯವರಿಗೂ ಈ ಸಂದರ್ಭದಲ್ಲಿ ನಮ್ಮ ಗೌರವಪೂರ್ವಕ ನುಡಿಗಾಣಿಕೆಯನ್ನು ಸಲ್ಲಿಸಬೇಕಿದೆ. ಅವರಿಗೆ ನಮ್ಮ ಪ್ರೇಮಾದರ ಪೂರ್ವಕ ನಮನ ಸಲ್ಲಬೇಕು. ನಮ್ಮ ಚರಿತ್ರೆಯುದ್ದಕ್ಕೂ ಎಂಥ ದುರ್ಭರ ಸಂದರ್ಭದಲ್ಲಿಯೂ ಭಾರತವನ್ನು ಜೀವಂತವಾಗಿಟ್ಟು ನಮ್ಮ ಸಂಸ್ಕೃತಿಯ ಅಮರ ಚೇತನವಾಗಿದ್ದಾರೆ; ನಮ್ಮ ಸ್ವಭಾವದ ಚಿಂತನ ಶಕ್ತಿಯ ಸಂಕೇತವಾಗಿದ್ದಾರೆ. ಗಾಂಧೀಜಿ ಹತಾಶೆಯ ಹುದುಲಲ್ಲಿ ಸಿಕ್ಕು ಹಳಹಳಿಸುತ್ತಿದ್ದ ನಮ್ಮನ್ನು ಹೊರಗೆಳೆದು, ಅಪಾರ ಚೈತನ್ಯವನ್ನು ತುಂಬಿ, ಅನ್ಯಾಯದ ವಿರುದ್ಧ ಟೊಂಕ ಕಟ್ಟುವಂತೆ ಹುರಿದುಂಬಿಸಿದವರು; ನಮ್ಮ ಜನ್ಮಸಿದ್ಧ ಹಕ್ಕಾದ ಸ್ವಾತಂತ್ರ್ಯವನ್ನು ಬೇಡುವುದಕ್ಕೆ ಕಲಿಸಿ ಅದನ್ನು ಪಡೆದುಕೊಳ್ಳಲು ಅನುಪಮ ಆಯುಧವೊಂದನ್ನು ಕೈಗಿತ್ತವರು ಅವರು. ಸತ್ಯ, ಅಹಿಂಸೆಯಂಥ ಅಜೇಯ ಅಸ್ತ್ರಗಳ ಮೂಲಕ ಸ್ವರಾಜ್ಯದಂಥ ಅಮೂಲ್ಯ ಆಸ್ತಿಗಳಿಸಿಕೊಟ್ಟರು. ನಮ್ಮ ಈ ಕಾಲದ ಚರಿತ್ರೆಯ ದಾಖಲೀಕರಣದ ಸಂದರ್ಭದಲ್ಲಿ ಅವರು ಬಳಸಿದ ಈ ಅಪೂರ್ವ ಅಸ್ತ್ರಗಳು ವಿಶೇಷ ಗಮನ ಸೆಳೆಯಲಿವೆ. ಕೋಟ್ಯಾಂತರ ಜನರಿಂದ ತುಂಬಿರುವ ಭಾರತದಂಥ ಬೃಹತ್ ರಾಷ್ಟ್ರದ ಸ್ವಾತಂತ್ರ್ಯವನ್ನು ಪಡೆದ ಬಗೆ ಆಶ್ಚರ್ಯ ಹುಟ್ಟಿಸುವಂತಾದ್ದು. ಶಸ್ತ್ರಾಸ್ತ್ರಗಳ ಹಂಗಿಲ್ಲದೆ ಪಡೆಯಲಾದ ಈ ಸ್ವಾತಂತ್ರ್ಯ ಬಹುಶಃ ಮುಂದಿನ ಜನಾಂಗ ನಂಬಲಾಗದ ವಿಧಾನದಲ್ಲಿ ಪಡೆದದ್ದು. ಅವರ ಗುರಿಗಮ್ಯದ ಬಗ್ಗೆ, ಹೋರಾಟದ ವಿಧಿ ವಿಧಾನಗಳ ಬಗ್ಗೆ, ತೀರಾ ಅನಾಸಕ್ತರಾಗಿದ್ದ ಜನರೊಂದಿಗೆ ಅವರು

* ಸಂವಿಧಾನ ಸಭೆಯ ಚರ್ಚೆಗಳು, ಸಂಪುಟ 5, 14ನೇ ಆಗಸ್ಟ್ 1947.

ಕೆಲಸ ಮಾಡಬೇಕಾಗಿತ್ತು. ಆದರೂ ನಮ್ಮನ್ನು ಮುನ್ನಡೆಸುವಲ್ಲಿ ಅವರು ತೋರಿದ ಪರಮ ಕೌಶಲ್ಯ, ನಿಶ್ಚಲ ನಿರ್ಧಾರ, ನಮ್ಮ ಭವಿಷ್ಯತ್ತಿನ ಬಗ್ಗೆ ಇದ್ದ ಅವಿನಾಶಿ ನಂಬುಗೆ ಮತ್ತು ತಮ್ಮ ಅಸ್ತ್ರಗಳ ಬಗ್ಗೆಯಿದ್ದ ವಿಶ್ವಾಸ, ಇದೆಲ್ಲಕ್ಕೂ ಮಿಗಿಲಾಗಿ, ಅವರಿಗೆ ದೇವರಲ್ಲಿದ್ದ ಗಾಢ ಶ್ರದ್ಧೆ, ಇವೇ ಮುಂತಾದ ಕಾರಣಗಳಿಂದಾಗಿ ಅವರು ಹೊತ್ತಿದ್ದ ಮಹಾ ಮಣಿಹದಲ್ಲಿ ಯಶಸ್ವಿಯಾಗಿ ಹೊರಹೊಮ್ಮಿದ್ದರು. ನಾವು ಅವರ ಈ ಮಹತ್ ಶ್ರದ್ಧೆಗೆ ನಿಷ್ಠಾವಂತರಾಗಿ ನಡೆಯಬೇಕಿದೆ. ಗೆಲುವಿನ ಈ ಕ್ಷಣದಲ್ಲಿ, ಜನತೆ ಖಿನ್ನರಾಗಿದ್ದಾಗ ಅವರಲ್ಲಿ ಸ್ಫೂರ್ತಿ ತುಂಬಿ ಬಡಿದೆಬ್ಬಿಸಿದ, ಈ ಅಸ್ತ್ರದ ಮಹತ್ವವನ್ನು ಕಡಿಮೆ ಮಾಡುವುದಾಗಲೀ ಅಥವಾ ಅದನ್ನು ಕೈಬಿಡುವುದಾಗಲೀ ಮಾಡಲಾಗದು. ಸರ್ವ ಸಂದರ್ಭಗಳಲ್ಲಿಯೂ ತನ್ನ ಸಾಮರ್ಥ್ಯವನ್ನು ಸಾಬೀತು ಮಾಡಿರುವ ಈ ಅಸ್ತ್ರದ ಮಹತಿಯನ್ನು ಭಾರತ ಎಂದೂ ಕಡೆಗಣಿಸಲಾರದು ಎಂಬ ವಿಶ್ವಾಸ ನಮಗಿದೆ. ಯುದ್ಧದಿಂದ ತತ್ತರಿಸಿ ಚಿಂದಿಚಿಂದಿಯಾದ ಪ್ರಪಂಚವನ್ನು ಪುನರ್ ರೂಪಿಸುವಲ್ಲಿ, ಅದರ ಭವಿಷ್ಯತ್ತನ್ನು ಪುನರ್ ಸೃಷ್ಟಿಸುವುದರಲ್ಲಿ, ಮಹತ್ವದ ಪಾತ್ರ ವಹಿಸಬೇಕಿದೆ. ಇತರ ಅನೇಕರು ಮಾಡುತ್ತಿರುವಂತೆ, ಅದು ದೂರದಿಂದಲೇ ನಕಲು ಮಾಡುವ ಮೂಲಕ ತನ್ನ ಪಾತ್ರವನ್ನು ನಿರ್ವಹಿಸಲಾರದು; ಅಥವಾ ದಿನಬೆಳಗಾದರೆ ನವ್ಯೋನವ ಸ್ವರೂಪದ ವಿಧ್ವಂಸನಕಾರಿ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಪೈಪೋಟಿಯಲ್ಲಿ ಪಾಲ್ಗೊಳ್ಳುವ ಮೂಲಕ ಅದು ತನ್ನ ಪಾತ್ರವನ್ನು ಸಾಂಗಗೊಳಿಸಲಾರದು. ಇಡೀ ಪ್ರಪಂಚದ ಮುಂದೆ ಭಾರತ ಒಂದು ಪರ್ಯಾಯ ಮಾರ್ಗವನ್ನು ಪ್ರಸ್ತುತ ಪಡಿಸುವ ಅವಕಾಶವೊದಗಿ ಬಂದಿದೆ. ಮತ್ತೆ ಅದು ತನ್ನೆಲ್ಲಾ ಧೈರ್ಯ ಹಾಗೂ ಕೆಚ್ಚಿನಿಂದ ಜಗತ್ತಿನ ಮುಂದೆ ತನ್ನ ಪ್ರಸ್ತಾವನೆಗಳನ್ನು ಸಾದರ ಪಡಿಸುವುದೆಂಬ ಬರವಸೆ ನಮಗಿದೆ. ಯುದ್ಧ, ರಕ್ತಪಾತ, ಸಾವು-ನೋವುಗಳ ವಿನಾಶಕಾರೀ ಚಟುವಟಿಕೆಗಳಿಗೆ ಬದಲಾಗಿ, ಅದು ತನ್ನ ಅಸ್ಖಲಿತ ಪರ್ಯಾಯ ಮಾರ್ಗವನ್ನು ಮಂಡಿಸಬೇಕಿದೆ. ಇಡೀ ಪ್ರಪಂಚಕ್ಕೆ ಅದರ ಅವಶ್ಯಕತೆಯಿದೆ. ಆದ್ದರಿಂದಲೇ ಅದು ತೆರೆದ ಮನಸ್ಸಿನಿಂದ ಸ್ವಾಗತಿಸುವ ಸಾಧ್ಯತೆಯೂ ಇದೆ. ಹಿಂದೊಮ್ಮೆ ಇದ್ದ ಅನಾಗರಿಕ ಸ್ಥಿತಿಯಿಂದ ಮೇಲೆದ್ದು ಉನ್ನತ ಹಂತಕ್ಕೆ ತಲುಪಿರುವ ಮಾನವ ಸಮಾಜ, ತಿರುಗಿ ತನ್ನ ಪೂರ್ವದ ಪ್ರಪಾತಕ್ಕೆ ಧುಮುಕುವ ಅನಿಷ್ಟದ ಆಸೆಯಿಲ್ಲದಿದ್ದಲ್ಲಿ ಅದು ಭಾರತದ ಪರ್ಯಾಯ ಮಾರ್ಗವನ್ನು ಮುಕ್ತ ಮನಸ್ಸಿನಿಂದ ಅಪ್ಪಿಕೊಳ್ಳುವದು, ಒಪ್ಪಿಕೊಳ್ಳುವುದು ಶತ ಸಿದ್ಧ.

ಹಾಗಾಗೀ, ನಾವು ಪ್ರಪಂಚದ ಎಲ್ಲ ರಾಷ್ಟ್ರಗಳ ಮುಂದೆ ನಮ್ಮ ಸರ್ವತ್ರ ಸ್ನೇಹದ ಆಕಾಂಕ್ಷೆಗಳನ್ನು ಸ್ಪಷ್ಟಪಡಿಸಬೇಕಿದೆ; ಎಲ್ಲಾ ನೆರೆಹೊರೆಯ ರಾಷ್ಟ್ರಗಳೊಂದಿಗೆ ಸ್ನೇಹ ಸೌಹಾರ್ದತೆಯಿಂದ ಶಾಂತಿಯುತ ಬಾಳನ್ನು ನಡೆಸುವ ನಮ್ಮ ಐತಿಹಾಸಿಕ ಪರಂಪರೆಯಿಂದ ಒಂದಿಷ್ಟೂ ಕದಲುವುದಿಲ್ಲ; ಯೊರೊಬ್ಬರ ವಿರುದ್ಧವೂ ಸಂಚು ಪಿತೂರಿಗಳನ್ನು ನಡೆಸುವುದಿಲ್ಲ. ಅಂತೆಯೇ ನಮ್ಮ ವಿರುದ್ಧವೂ ಅಂತಹ ಕುಕೃತ್ಯಗಳಲ್ಲಿ ಯಾರೂ ತೊಡಗಲಾರರು ಎಂಬ ವಿಶ್ವಾಸ ನಮಗಿದೆ - ಇವೇ ಮುಂತಾದ ನಮ್ಮ ಅನಿಸಿಕೆಗಳನ್ನು ಇಂದು ಜಗಜ್ಜಾಹೀರುಗೊಳಿಸಬೇಕಿದೆ. ನಮಗಿರುವುದು ಒಂದೇ ಒಂದು ಆಕಾಂಕ್ಷೆ, ಒಂದೇ ಒಂದು ಅಭಿಲಾಷೆ. ಅದೇನೆಂದರೆ, ಪ್ರಪಂಚದ ಪ್ರತಿಯೊಬ್ಬರೂ ಸ್ವತಂತ್ರರಾಗಿ, ಶಾಂತಿಯುತರಾಗಿ ಸಹಬಾಳ್ವೆಯನ್ನು ನಡೆಸಲು ಅವಶ್ಯವಿರುವ ವ್ಯವಸ್ಥೆಯ ನಿರ್ಮಾಣಕ್ಕೆ ನಮ್ಮ ಕಾಣಿಕೆಯನ್ನು ನೀಡುವುದು.

ದೇವರು ಮತ್ತು ನಿಸರ್ಗದ ಸಂಕಲ್ಪದಿಂದ ಏಕತ್ರಗೊಂಡು ಉದ್ಭವಿಸಿರುವ ನಮ್ಮ ರಾಷ್ಟ್ರ ಇಂದು ಒಡೆದು ಹೋಳಾಗಿದೆ. ನಮ್ಮ ಬಂಧು ಬಾಂಧವರಿಂದ ಅಷ್ಟೇಯೇಕೆ, ಕೆಲ ಸಮಯದವರೆಗೆ ಸಂಬಂಧ ಬೆಳೆಸಿಕೊಂಡ ಅಪರಿಚಿತರಿಂದ ದೂರಾಗುವುದೆಂದರೆ, ತೀರಾ ನೋವಿನ ಸಂಗತಿ. ಪರಸ್ಪರರನ್ನು ಪ್ರೀತಿಸುವ ವ್ಯಕ್ತಿಗಳು ಅನಿವಾರ್ಯವಾಗಿ ದೂರಾದಾಗ ಉಂಟಾಗುವ ವಿರಹ ವೇದನೆ ನಿಜವಾಗಲೂ ಒಂದು ನೋವಿನ ವಿಷಯ ಎಂಬುದನ್ನು ನಾನು ಪ್ರಮಾಣಿಕವಾಗಿ ಒಪ್ಪದಿದ್ದರೆ ನನ್ನನ್ನು ನಾನೇ ಮೋಸ ಮಾಡಿಕೊಂಡಂತೆಯೇ ಸರಿ. ನಿಮ್ಮೆಲ್ಲರ ಪರವಾಗಿ ಮತ್ತು ನನ್ನ ಪರವಾಗಿಯೂ ನಾನು ಪಾಕಿಸ್ತಾನಕ್ಕೆ ಶುಭಾಶಯ ತಿಳಿಸಬಯಸುತ್ತೇನೆ. ನಿನ್ನೆ ಮೊನ್ನೆಯವರೆಗೆ ನಮ್ಮ ಅವಿಭಾಜ್ಯ ಅಂಗವಾಗಿದ್ದು ಈಗ ಒಂದು ಪ್ರತ್ಯೇಕ ರಾಷ್ಟ್ರವಾಗಿ ಆವಿಷ್ಕರಿಸಿರುವ ಪಾಕಿಸ್ತಾನ, ಅದರ ಸರ್ಕಾರ ಮತ್ತು ಜನತೆಗೆ ಎಲ್ಲ ಯಶಸ್ಸು ಕೋರಿ ನಮ್ಮ ಸದಭಿಲಾಷೆಯ ಸಂದೇಶ ಕಳಿಸಬಯಸುತ್ತೇನೆ. ನಮ್ಮಂತೆಯೇ ಅನುಭವಿಸುವ, ಅನುಭೂತಿಸುವ ಆದರೆ ಸರಹದ್ದಿನ ಆಚೆ ಭಾಗದಲ್ಲಿರುವವರಿಗೆ ಪ್ರೋತ್ಸಾಹದ ನಾಲ್ಕು ನುಡಿ ಆಡೋಣ. ಅವರು ಭಯ ಭೀತರಾಗಬಾರದು. ಬದಲಾಗಿ, ತಮ್ಮ ಧರ್ಮ, ಸಂಸ್ಕೃತಿ ಮತ್ತು ಧೈರ್ಯ ಸಹಿಷ್ಣುತೆಯಂಥ ಉದಾತ್ತ ಗುಣಗಳನ್ನು ಕೃಷಿ ಮಾಡುತ್ತ ತಮ್ಮ ದೈನಂದಿನ ಬಾಳ್ವೆಯಲ್ಲೂ ಶಾಂತಿಯುತವಾಗಿ ಮಗ್ನರಾಗಬೇಕು. ಅವರ ಭಯಕ್ಕೆ ಯಾವುದೇ ಕಾರಣವಿಲ್ಲ. ಅವರ ಅರಕ್ಷಿತತೆಯ ಭಾವನೆ ತಳಬುಡವಿಲ್ಲದ್ದು. ನ್ಯಾಯ, ನೀತಿಯ ಬಗ್ಗೆ ಇಲ್ಲದ ತಳಮಳಕ್ಕೊಳಗಾಗಿ ಅವರು ಸಂಶಯಕ್ಕೆ ಗುರಿಯಾಗಬಾರದು. ಸಾರ್ವಜನಿಕವಾಗಿ ಉದ್ಘೋಷಿಸಲಾದ ಆಶ್ವಾಸನೆಗಳನ್ನು ಅವರು ಸ್ವೀಕರಿಸಬೇಕು ಮತ್ತು ಆ ರಾಷ್ಟ್ರದ ರಾಜಕಾರಣದಲ್ಲಿ ಸರಿಯಾದ ಸ್ಥಾನಮಾನ ಪಡೆದುಕೊಳ್ಳಲು ಅವರು ಪ್ರಯತ್ನಿಸಬೇಕು. ಅವರು ತಂತಮ್ಮ ಸ್ಥಾನಮಾನಗಳಿಗೆ ನಿಷ್ಠರಾಗಿರಬೇಕು.

ಭಾರತದಲ್ಲಿರುವ ಎಲ್ಲ ಅಲ್ಪಸಂಖ್ಯಾತರೂ ನ್ಯಾಯಯುತವಾದ ಸ್ಥಾನಮಾನಗಳನ್ನು ಪಡೆಯುವರೆಂಬ ಆಶ್ವಾಸನೆಯನ್ನು ನಾವು ನೀಡುತ್ತೇವೆ. ಅವರ ವಿರುದ್ಧ ಯಾವುದೇ ತಾರತಮ್ಯಕ್ಕೆ ಇಲ್ಲಿ ಎಡೆ ಇರುವುದಿಲ್ಲ. ಅವರ ಧರ್ಮ, ಸಂಸ್ಕೃತಿ, ಭಾಷೆ ಎಲ್ಲವೂ ಇಲ್ಲಿ ಸುರಕ್ಷಿತವಾಗಿದ್ದು, ಎಲ್ಲರಿಗೂ ಸಮಾನ ನಾಗರೀಕ ಹಕ್ಕು ಮತ್ತು ಅವಕಾಶಗಳನ್ನು ಕಲ್ಪಿಸಿಕೊಡಲಾಗುವುದು. ಪ್ರತಿಯಾಗಿ, ಅವರು ಯಾವ ದೇಶದಲ್ಲಿರುವರೋ ಆ ದೇಶಕ್ಕೆ, ಅದರ ಸಂವಿಧಾನಕ್ಕೆ ನಿಷ್ಠರಾಗಿರಬೇಕೆಂದು ನಿರೀಕ್ಷಿಸಲಾಗುತ್ತದೆ. ಬಡತನವನ್ನು ಕೊನೆಗಾಣಿಸಿ, ದಾರಿದ್ರ್ಯ ಹೇಳ ಹೆಸರಿಲ್ಲದಂತಾಗಿ, ಅದರ ಸಂಗಾತಿಗಳಾದ ಹಸಿವು ರೋಗ ರುಜಿನಗಳನ್ನು ನಿರ್ನಾಮಿಸಲು ಪ್ರಯತ್ನಿಸಲಾಗುವುದೆಂಬ ಆಶ್ವಾಸನೆಯನ್ನು ಎಲ್ಲರಿಗೂ ನೀಡಬಯಸುತ್ತೇವೆ. ಉಚ್ಚ-ನೀಚ ಭಾವನೆಯನ್ನು ಬುಡಮಟ್ಟ ಕೀಳುವ, ಶೋಷಣೆಯನ್ನು ಬಡಿದೋಡಿಸುವ, ಆ ಮೂಲಕ ಒಂದು ಉತ್ತಮ ಬದುಕಿನ ಉಪಾಧಿಗಳನ್ನು ಸೃಷ್ಟಿಸಲು ಪ್ರಯತ್ನಿಸಲಾಗುವುದು ಎಂಬ ಆಶ್ವಾಸನೆಯನ್ನು ಸಕಲರ ಗಮನಕ್ಕೆ ತರಬಯಸುತ್ತೇವೆ.

ನಾವು ಮಹತ್ತರವಾದೊಂದು ಕೆಲಸಕ್ಕೆ ಹೆಗಲು ಕೊಡುತ್ತಿದ್ದೇವೆ. ಈ ಮಹತ್‌ಕಾರ್ಯದಲ್ಲಿ ಎಲ್ಲಾ ಜನತೆಯ ಸಹಕಾರ ಮತ್ತು ಸೇವೆ ನಮಗೆ ಲಭಿಸುವುವೆಂಬ ವಿಶ್ವಾಸ ನಮಗಿದೆ. ಎಲ್ಲ ಸಮುದಾಯಗಳ ಸಹಾನುಭೂತಿ ಹಾಗೂ ಬೆಂಬಲ ಸದಾ ನಮ್ಮೊಂದಿಗಿರುತ್ತದೆ ಎಂಬ ಆಶಯ ನಮ್ಮದಾಗಿದೆ. ಇಂಥ ಸಹಕಾರ, ಸಹಾನುಭೂತಿ ಹಾಗೂ ಬೆಂಬಲಕ್ಕೆ ಅರ್ಹರಾಗಿರಲು ನಮಗೆ ಸಾಧ್ಯವಿರುವ ಅತ್ಯುತ್ತಮ ಪ್ರಯತ್ನಗಳನ್ನು ನಾವು ಮಾಡೋಣ.

## ನವಜಾತ ರಾಷ್ಟ್ರಕ್ಕೆ ಒಂದು ಕರೆ*

ನಾವು ನಮ್ಮ ರಾಷ್ಟ್ರದ ಆಡಳಿತಾಧಿಕಾರವನ್ನು ಕೈಗೆತ್ತಿಕೊಳ್ಳುತ್ತಿರುವ ನಮ್ಮ ಚರಿತ್ರೆಯ ಈ ಮಹತ್ತರ ಕ್ಷಣದಲ್ಲಿ ಅನೇಕ ಜನರನ್ನು ಕೃತಜ್ಞತಾಭಾವದಿಂದ ನೆನೆಸಿಕೊಳ್ಳೋಣ. ನಾವಿಂದು ತಲುಪಿರುವ ಸ್ವಾತಂತ್ರ್ಯವನ್ನು ಸಾಧಿಸಲು ಶ್ರಮಿಸಿದ, ಅನೇಕ ಕಷ್ಟಕಾರ್ಪಣ್ಯಗಳನ್ನು ಎದುರಿಸಿದ, ತಮ್ಮನ್ನು ತಾವು ಸಮರ್ಪಿಸಿಕೊಂಡ ಎಲ್ಲಾ ಜನರ ಸೇವೆಯನ್ನು ಸ್ಮರಿಸೋಣ. ಚರಿತ್ರೆಯ ಈ ಸಂದರ್ಭದಲ್ಲಿ ನಮ್ಮ ಆಧುನಿಕ ಭಾರತದ ಇತಿಹಾಸದ ನಿರ್ಮಾಪಕನಿಗೆ ನಮ್ಮ ಗೌರವವನ್ನು ಸಲ್ಲಿಸೋಣ. ನಮ್ಮೆಲ್ಲಾ ಕಷ್ಟ ಸಂಕಷ್ಟಗಳ ಸಂದರ್ಭದಲ್ಲಿ ನಮಗೆ ಸ್ಫೂರ್ತಿ ತುಂಬಿ ಮಾರ್ಗದರ್ಶನ ಮಾಡಿದವರು ಮಹಾತ್ಮಾ ಗಾಂಧೀಜಿ. ಈಗ ವಯೋವೃದ್ಧರಾಗಿದ್ದರೂ ಅಪೂರ್ಣವಾಗಿರುವ ಅನೇಕ ಕೆಲಸಗಳನ್ನು ತಮ್ಮದೇ ಆದ ರೀತಿಯಲ್ಲಿ ಮಾಡಿ ಮುಗಿಸಲು ಇನ್ನೂ ಕಾರ್ಯನಿರತರಾಗಿದ್ದಾರೆ!

ನಮ್ಮ ಸಾಧನೆಯು ನಮ್ಮದೇ ಆದ ಕಷ್ಟತಮವಾದ ಶ್ರಮ ಮತ್ತು ತ್ಯಾಗ, ಬಲಿದಾನಗಳಿಂದ ಸಾಧ್ಯವಾಗಿದೆ ಎಂಬುದನ್ನು ಮರೆಯಲಾಗದು. ಆದರೆ ಅಷ್ಟೇ ಪ್ರಮಾಣದಲ್ಲಿ ಜಾಗತಿಕ ಶಕ್ತಿ ಸನ್ನಿವೇಶಗಳ ಪರಿಣಾಮವಾಗಿಯೂ ಅದು ಸಾಧ್ಯವಾಗಿದೆಯೆಂಬುದು ನೆನಪಿಡತಕ್ಕದ್ದು. ಕಡೆಯದಾಗಿ, ಆದರೆ ಕನಿಷ್ಠವಾಗಿಯಲ್ಲ, ಬ್ರಿಟಿಷ್ ಜನಾಂಗದ ಚಾರಿತ್ರಿಕ ಪರಂಪರೆ ಮತ್ತು ಪ್ರಜಾತಾಂತ್ರಿಕ ಆದರ್ಶಗಳ ಪರಾಕಾಷ್ಠೆಯ ಪರಿಣಾಮವಾಗಿ, ಬ್ರಿಟಿಷ್ ನಾಯಕರ ದೂರದೃಷ್ಟಿ, ಮುತ್ಸದ್ದಿತನ ಮತ್ತು ಕೊಟ್ಟ ವಚನವನ್ನು ಪಾಲಿಸುವ ನಿಷ್ಠತೆ ಮುಂತಾದುವುಗಳ ಕಾರಣದಿಂದಾಗಿಯೂ ನಾವು ನಮ್ಮ ಸ್ವಾತಂತ್ರ್ಯ ಸಾಧನೆಯ ಮಾರ್ಗದಲ್ಲಿ ಯಶಸ್ವೀ ಹೆಜ್ಜೆಯಿಡಲು ಸಾಧ್ಯವಾಗಿದೆ. ಬ್ರಿಟಿಷ್ ನಾಯಕರು ಹಿಂದೊಮ್ಮೆ ಕೊಟ್ಟ ವಚನ ಇಂದು ನೈಜಗೊಳ್ಳುತ್ತಿದೆ. ನಮ್ಮ ಮಧ್ಯೆ ಇಂದು ಬ್ರಿಟಿಷ್ ಜನಾಂಗದ ಪ್ರತಿನಿಧಿಯಾಗಿರುವ ಬರ್ಮಾದ ವೈಕೌಂಟ್, ಮೌಂಟ್ ಬ್ಯಾಟನ್ ಹಾಗೂ ಅವರ ಧರ್ಮ ಪತ್ನಿ ಉಪಸ್ಥಿತರಿದ್ದದ್ದು ನಮಗೆ ಸಂತೋಷವನ್ನುಂಟುಮಾಡಿದೆ. ನಮ್ಮ ಸ್ವಾತಂತ್ರ್ಯ ಹೋರಾಟ, ಅಧಿಕಾರ ಹಸ್ತಾಂತರದ ಪ್ರಕ್ರಿಯೆಯ ಕೊನೆಯ ಅವಧಿಯಲ್ಲಿ ಮೌಂಟ್ ಬ್ಯಾಟನ್ನರು ತುಂಬ ಶ್ರಮ ವಹಿಸಿದ್ದಾರೆ; ನಮ್ಮ ಸ್ವಾತಂತ್ರ್ಯದ ಕನಸು ನನಸಾಗುವಲ್ಲಿ ಅತ್ಯಂತ ಮಹತ್ವದ ಪಾತ್ರ ನಿರ್ವಹಿಸಿದ್ದಾರೆ. ಭಾರತದ ಮೇಲಿನ ಬ್ರಿಟಿಷ್ ಅಧಿಪತ್ಯದ ಅವಧಿ ಇಂದು ಕೊನೆಗೊಳ್ಳುತ್ತಿದೆ. ಇನ್ನು ಮುಂದೆ ಬ್ರಿಟನ್ನಿನೊಂದಿಗಿನ ನಮ್ಮ ಸಂಬಂಧ ಪರಸ್ಪರ ಸಮಾನತೆ, ಸದ್ಭಾವ ಮತ್ತು ಪರಸ್ಪರ ಹಿಡಿತದ ನೆಲೆಯ ಮೇಲೆ ನಿಂತಿರುತ್ತದೆ.

ಇದೊಂದು ಹರ್ಷೋಲ್ಲಾಸದ ದಿನವೆಂಬುದು ನಿಸ್ಸಂಶಯ. ಆದರೆ ಒಂದೇ ಒಂದು ಸಂಗತಿ ನಮ್ಮ ಈ ಸಂಪೂರ್ಣ ಸಂತೋಷಕ್ಕೆ ಚ್ಯುತಿಯುಂಟುಮಾಡುತ್ತಿದೆ. ದೇವರ ಮತ್ತು ನಿಸರ್ಗದ ಸಂಕಲ್ಪದಿಂದ ಒಂದಾಗಿರಬೇಕಾದ ಭಾರತ, ಸಹಸ್ರಾರು ವರ್ಷಗಳ ಸಂಸ್ಕೃತಿ ಸಂಪ್ರದಾಯ ಮತ್ತು ಇತಿಹಾಸದಿಂದ ಒಂದಾಗಿದ್ದ ಭಾರತ, ಇಂದು ಒಡೆದು ಛಿದ್ರವಾಗಿದೆ. ಸರಹದ್ದಿನ ಈಚೆಗಿರಲು ಬಯಸುವ ಅನೇಕರು ಇಂದು ಆಚೆ ಬದಿಗಿದ್ದಾರೆ. ನಾವಿಂದು ಅವರಿಗೆ ಶುಭಾಶಯ ಕೋರುತ್ತೇವೆ. ಭಯ ಭೀತಿಗೆ ಬಲಿಯಾಗಿ ಹತಾಶರಾಗಬಾರದೆಂದು ಕೇಳಿಕೊಳ್ಳುತ್ತೇವೆ. ಶ್ರದ್ಧೆಯಿಂದ, ಧೈರ್ಯದಿಂದ ನಮ್ಮ ನೆರೆಹೊರೆಯವರ ಜೊತೆಗೆ ಶಾಂತಿಯುತ ಸಹಬಾಳ್ವೆ

* ಸಂವಿಧಾನ ಸಭೆಯ ಚರ್ಚೆಗಳು, ಸಂಪುಟ 5, 15 ಆಗಸ್ಟ್ 1947.

ನಡೆಸಬೇಕೆಂದು ಕೇಳಿಕೊಳ್ಳುತ್ತೇವೆ. ನಿಷ್ಠಾವಂತ ಪ್ರಜೆಗಳಾಗಾಗಿ ಬಾಳುತ್ತಾ ತಮ್ಮ ಕರ್ತವ್ಯಗಳನ್ನು ನಿಭಾಯಿಸಬೇಕೆಂದೂ ಆ ಮೂಲಕ, ತಮಗೆ ಸಮುಚಿತವಾದ ಸ್ಥಾನಮಾನಗಳನ್ನು ಪಡೆದುಕೊಳ್ಳಬೇಕೆಂದು ಭಿನ್ನವಿಸುತ್ತೇವೆ. ಇಂದು ಅಲ್ಲಿ ಸ್ಥಾಪನೆಗೊಳ್ಳಲಿರುವ ಹೊಸ ರಾಷ್ಟ್ರಕ್ಕೆ ನಮ್ಮ ಶುಭಾಶಯಗಳನ್ನು ಕಳಿಸುತ್ತೇವೆ. ಅದು ತನ್ನೆಲ್ಲಾ ಪ್ರಜೆಗಳ ಸುಖ ಸಂತೋಷ ಮತ್ತು ಸಮೃದ್ಧಿಗಾಗಿ ಮಾಡುವ ಆಡಳಿತಾತ್ಮಕ ಪ್ರಯತ್ನಗಳಲ್ಲಿ ಯಶಸ್ವಿಯಾಗಲೆಂದು ಹಾರೈಸುತ್ತೇವೆ. ಅಲ್ಲಿಯ ಪ್ರತಿಯೊಬ್ಬರನ್ನೂ ಯಾವುದೇ ಬೇಧಭಾವಕ್ಕೊಳಗಾಗದಂತೆ, ತಾರತಮ್ಯಕ್ಕೆ ಗುರಿಯಾಗದಂತೆ, ನ್ಯಾಯಯುತವಾದ ರೀತಿಯಲ್ಲಿ ನೋಡಿಕೊಳ್ಳಲಾಗುತ್ತದೆ ಎಂಬ ವಿಶ್ವಾಸ ನಮಗಿದೆ. ಭಾರತದ ವಿಭಜನೆಗೆ ಒತ್ತಾಯಿಸಿ, ಅದನ್ನು ತುಂಡರಿಸುವುದಕ್ಕೆ ಕಾರಣೀಭೂತರಾದವರು, ಭಾರತ ಸತ್ವತಃ 'ಒಂದು ರಾಷ್ಟ್ರ', ಅದು ಎಂದೆಂದೂ ಅವಿಭಾಜ್ಯ ಎಂಬ ಸಂಗತಿಯನ್ನು ಮನಗಾಣುವರೆಂಬ ಆಶಾಭಾವನೆ ನಮ್ಮದಾಗಿದೆ. ಆ ದಿನ ಅತಿ ಶೀಘ್ರ ಬರಲೆಂದು ಪ್ರಾರ್ಥಿಸೋಣ. ಆದರೆ ಅಂಥ ಬದಲಾವಣೆ ಬರಬೇಕಾದದ್ದು ಬಲ ಪ್ರಯೋಗದಿಂದಲ್ಲ. ಬದಲಾಗಿ, ಹೃದಯ ವೈಶಾಲ್ಯ ಮತ್ತು ಪರಸ್ಪರ ಸಹಕಾರದ ಭಾವನೆಯಿಂದ ಎಂಬುದನ್ನು ನಾವು ಮನಗಾಣಬೇಕು. ಆ ದಿನದ ಕನಸು ನನಸಾಗಲು, ನಮ್ಮನ್ನು ಬಿಟ್ಟು ಪರಭಾರೆಯಾದವರು ಮತ್ತೆ ನಮ್ಮೆಡೆಗೆ ಆಕರ್ಷಿತರಾಗುವಂತೆ ನಾವು ನಮ್ಮ ವ್ಯವಹಾರ, ನಡವಳಿಕೆಗಳನ್ನು ಪುನರ್‌ರೂಪಿಸಿಕೊಳ್ಳಬೇಕು. ನನ್ನ ಈ ಅಭಿಲಾಷೆ ಇಂದು ಒಂದು ಕನಸಾಗಿ ಕಾಣುತ್ತಿರಬಹುದು. ಆದರೆ ಭಾರತದ ವಿಭಜನೆಯನ್ನು ಬಯಸಿದ್ದವರ ಕನಸಿಗಿಂತಲೂ ಅಸಾಧ್ಯವಾದ ಕನಸೇನೂ ಅಲ್ಲ. ಮತ್ತು ಅತಿ ಶೀಘ್ರದಲ್ಲಿಯೇ ಇದು ನನಸಾಗಲಿದೆ ಎಂದು ಆಶಿಸುವ ಧೈರ್ಯ ತೋರಬಯಸುತ್ತೇನೆ.

ಈ ದಿನವು, ಒಂದು ಹರ್ಷೋಲ್ಲಾಸದ ದಿನಕ್ಕಿಂತಲೂ ಹೆಚ್ಚಾಗಿ, ನಮ್ಮ ಕನಸಿನ ಭಾರತವನ್ನು ಕಟ್ಟುವುದಕ್ಕೆ ನಾವೆಲ್ಲರೂ ನಮ್ಮನ್ನು ನಾವು ಸಮರ್ಪಿಸಿಕೊಳ್ಳುವ ದಿನವಾಗಿದೆ. ನಾವು ನಮ್ಮ ದೃಷ್ಟಿಯನ್ನು ಗತದಿಂದ ಭವಿಷ್ಯತ್ತಿನೆಡೆಗೆ ತಿರುಗಿಸಬೇಕಾಗಿದೆ. ನಮಗೆ ಯಾವುದೇ ರಾಷ್ಟ್ರ ಅಥವಾ ದೇಶದ ಜೊತೆ ಜಗಳವಿಲ್ಲ. ಅಂತೆಯೇ, ಯಾರೂ ನಮ್ಮೊಂದಿಗೆ ಕಾಲು ಕೆದರಿ ಜಗಳ ತೆಗೆಯದಿರಲೆಂದು ಆಶಿಸೋಣ. ಚಾರಿತ್ರಿಕವಾಗಿ, ಪರಂಪರಾನುಗತವಾಗಿ ನಮ್ಮದು ಒಂದು ಶಾಂತಿಪ್ರಿಯ ರಾಷ್ಟ್ರ. ಭಾರತವು ಇಡೀ ಪ್ರಪಂಚದೊಡನೆ ಶಾಂತಿಯುತವಾಗಿ ಬಾಳಬಯಸುತ್ತದೆ. ಭಾರತವೂ ತನ್ನ ಗಡಿಯಾಚೆಗೆ ಸಾಮ್ರಾಜ್ಯಗಳನ್ನು ಸಂಸ್ಥಾಪಿಸಿದ್ದುಂಟು! ಆದರೆ ಈ ಸಾಮ್ರಾಜ್ಯಗಳು ಇತರ ಸಾಮ್ರಾಜ್ಯಗಳಿಗಿಂತ ಭಿನ್ನ ಸ್ವರೂಪದವು. ಭಾರತವು ಅನೇಕ ರಾಷ್ಟ್ರಗಳ ಮೇಲೆ ಗೆಲುವು ಸಾಧಿಸಿದ್ದಿದೆ, ಆದರೆ ಅದೆಲ್ಲಾ ಅಧಿಕಾರ ವಿಸ್ತರಣೆಯ ದುರ್ದಾಳಿಗಳಾಗಿರದೆ, ಸದ್ಭಾವದ ಯಶೋಯಾತ್ರೆಗಳಾಗಿದ್ದವು. ಭಾರತ ಯಾವುದೇ ವ್ಯಕ್ತಿ ಅಥವಾ ರಾಷ್ಟ್ರಗಳನ್ನು ಗೆದ್ದು ಅವುಗಳಿಗೆ 'ಬೇಡಿ' ತೊಡಿಸಿ, ತನ್ನ ಅಡಿಯಾಳಾಗಿ ಮಾಡಿಕೊಂಡಿಲ್ಲ. ಅದು ಯಾರ ಮೇಲೂ ಕಬ್ಬಿಣದ್ದಾಗಲೀ, ಬಂಗಾರದ್ದಾಗಲೀ ಸರಪಳಿಗಳನ್ನು ಹೇರಲಿಚ್ಚಿಸಲಿಲ್ಲ. ಆದರೆ ಅದು ಇತರ ದೇಶ, ಜನರನ್ನು ತನ್ನ ಸಂಸ್ಕೃತಿ, ನಾಗರೀಕತೆ, ಧರ್ಮ ಮತ್ತು ಜ್ಞಾನದ ತೋಳತೆಕ್ಕೆಯಲ್ಲಿ ತೆಗೆದುಕೊಂಡು ಎದೆಗಪ್ಪಿಕೊಂಡಿದೆ. ನಾವು ಅಂಥ ಮಹಾನ್ ಪರಂಪರೆಯ ದಾರಿಯಲ್ಲಿಯೇ ಮುನ್ನಡೆಯುತ್ತಾ ನಮ್ಮ ಕಾಣಿಕೆಯನ್ನು ಸಲ್ಲಿಸೋಣ. ಇಂದು ಯುದ್ಧದಿಂದ ಜರ್ಜರಿತವಾದ ಪ್ರಪಂಚದಲ್ಲಿ ಶಾಂತಿ ಸ್ವಾತಂತ್ರ್ಯವನ್ನು ಪುನಃ ಕಟ್ಟಿಕೊಡಲು ನಮ್ಮ ಪರಂಪರೆಯ ಸದ್ಭಾವದ ಪತಾಕೆ ಹಿಡಿದು ಯಶಸ್ಸಿನೆಡೆಗೆ

ಮುನ್ನಡೆಯೋಣ. ಭಾರತದಲ್ಲಿ ಅನುಪಮ ಫಲಿತಾಂಶ ನೀಡಿರುವ 'ಅಹಿಂಸೆಯ ಶಸ್ತ್ರ'ವನ್ನು ಇಡೀ ಪ್ರಪಂಚದ ಕೈಗೆ ನೀಡೋಣ. ಈ ಸಂದರ್ಭದಲ್ಲಿ ಭಾರತ ಮಹತ್ತರ ಜವಾಬ್ದಾರಿಯ ಪಾತ್ರವನ್ನು ನಿರ್ವಹಿಸಬೇಕಾಗಿದೆ. ಅಕಾಲನ ಅವ್ಯಾಹತ ಹೊಡೆತಕ್ಕೆ ಸಿಕ್ಕೂ ಸದಾ ಜೀವಂತಿಕೆಯಿಂದ ಪುಟಿಯುವಂತೆ ಮಾಡಿರುವ ಅದರ ಬದುಕು ಮತ್ತು ಸಂಸ್ಕೃತಿಯಲ್ಲಿ ವಿಶೇಷವಾದ ಶಕ್ತಿಯಿದೆ. ಈ ದಿನ ಅದು ಅಪಾರ ಸಾಧ್ಯತೆಗಳನ್ನು ಗರ್ಭೀಕರಿಸಿಕೊಂಡು ಮತ್ತೆ ಅವಿಷ್ಕರಿಸಿದೆ. ನಾವು ನಮ್ಮ ಆದರ್ಶಗಳಿಗೆ ನಿಷ್ಠರಾಗಿದ್ದರೆ ಸಾಕು, ಅದು ಮತ್ತೆ ತನ್ನ ಯಶಸ್ಸಿನ ಧಾರಿಯಲ್ಲಿ ದಾಪುಗಾಲು ಹಾಕುವುದು.

ಈ ದೇಶದಲ್ಲಿ ಪ್ರತಿಯೊಬ್ಬ ವ್ಯಕ್ತಿ ಸ್ವತಂತ್ರವಾಗಿ ಬಾಳುತ್ತಾ ತನ್ನ ಶಕ್ತಿ ಸಾಮರ್ಥ್ಯದ ಗರಿಷ್ಠ ಮಟ್ಟಕ್ಕೆ ಬೆಳೆದು ನಿಲ್ಲಲು ಅವಶ್ಯವಿರುವ ಸಾಮಾನು ಸರಂಜಾಮುಗಳನ್ನು ಯುಕ್ತವಾಗಿ ಒದಗಿಬರುವಂತಹ ಪರಿಸ್ಥಿತಿಯನ್ನು ಸೃಷ್ಟಿಸಲು ನಾವಿಂದು ನಿರ್ಧರಿಸೋಣ. ಬಡತನ, ದಾರಿದ್ರ್ಯ, ಅಜ್ಞಾನ, ಅನಾರೋಗ್ಯ ಹೇಳಹೆಸರಿಲ್ಲದಂತಾಗಬೇಕು; ಉಚ್ಚ-ನೀಚರೆಂಬ ಭೇದಭಾವವಳಿಯಬೇಕು; ಬಡವ-ಬಲ್ಲಿದರೆಂಬ ತಾರತಮ್ಯ ತೊಲಗಬೇಕು; ಮತಧರ್ಮದ ಮುಕ್ತ ಮಂಡನೆಗೆ, ಬೋಧನೆಗೆ, ಆಚರಣೆಗೆ ಅಸೀಮ ಅವಕಾಶವಿರಬೇಕು. ಧರ್ಮವೆಂಬುದು ವಿನಾಶಕಾರೀ ವಿಧ್ವಂಸನಕಾರಿ ಶಕ್ತಿಯಾಗಿ, ಜನತೆಯನ್ನು ವಿಭಜಿಸುವ ಮತ್ತು ಪ್ರತ್ಯೇಕಿಸುವ ಸಾಧನವಾಗದೆ, ಅದು ಮನುಷ್ಯ ಮನುಷ್ಯರನ್ನು ಬೆಸೆಯುವ, ಭಿನ್ನತೆಯಳಿದು ಅಭಿನ್ನವಾಗಿಸುವ ಮಹತ್‌ಶಕ್ತಿಯಾಗಬೇಕು. ಅಸ್ಪೃಶ್ಯತೆ ಒಂದು ಕರಾಳ ಕನಸೆಂದು ಮರೆಯುವಂತಾಗಬೇಕು. ಮನುಷ್ಯ ಮನುಷ್ಯರ ನಡುವಿನ ಶೋಷಣೆ ನಿರ್ನಾಮವಾಗಬೇಕು. ಭಾರತದ ಹಿಂದುಳಿದ ಆದಿಮ ಜಾತಿಗಳು ಇತರರೊಂದಿಗೆ ಹೆಗಲೆಣೆಯಾಗಿ ಮುನ್ನಡೆಯಲು ಅವರಿಗೆ ಅವಶ್ಯವಿರುವ ವಿಶೇಷ ಸೌಲಭ್ಯ ಸೌಕರ್ಯಗಳ ವ್ಯವಸ್ಥೆಯಾಗಬೇಕು. ಅಷ್ಟೇ ಅಲ್ಲ, ಈ ನೆಲದ ಕೋಟ್ಯಾಂತರ ಜನರಿಗೆ ಸಾಕಾಗುವಷ್ಟು ಸಮೃದ್ಧ ಅನ್ನ ಅರಿವೆ ದೊರೆಯುವಂತಾಗಬೇಕು; ಜೊತೆಗೆ, ಈ ನಾಡಿನಲ್ಲಿ ಹಾಲಿನ ಹೊಳೆ ಹರಿಯುವಂತಾಗಬೇಕು. ಪ್ರತಿಯೊಬ್ಬ ಸ್ತ್ರೀ ಪುರುಷ ತಮ್ಮೊಳಗಿನ ಪ್ರಚ್ಛನ್ನಶಕ್ತಿ ಸಾಕಾರಗೊಳಿಸಿಕೊಳ್ಳುತ್ತಾ ಹೊಲ ಗದ್ದೆಗಳಲ್ಲಿ, ಫ್ಯಾಕ್ಟರಿ, ಉದ್ಯಮಗಳಲ್ಲಿ ನಗುನಗುತ್ತಾ ಕಾರ್ಯತತ್ಪರರಾಗುವಂತಹ ವ್ಯವಸ್ಥೆ ಸೃಷ್ಟಿಯಾಗಬೇಕು. ದೇಶದ ಮೂಲೆ ಕೊಪ್ಪಲಿನ ಪ್ರತಿಯೊಂದು ಗುಡಿಸಲಿನಿಂದಲೂ ಗೃಹ ಕೈಗಾರಿಕೆಯ ಮಧುರ ನಾದದ ಝೇಂಕಾರ ಕೇಳಿ ಬರಬೇಕು. ಗ್ರಾಮೀಣ ಮಹಿಳೆಯರು ತಮ್ಮ ಕೈ ಕಸುಬುಗಳಲ್ಲಿ ತಲ್ಲೀನರಾಗಿ ಸುಶ್ರಾವ್ಯ ಸಂಗೀತ ಹೊರಹೊಮ್ಮಿಸುತ್ತಿದ್ದಾಗ ಅವರ ಮನೆಮನಗಳ ಮೇಲೆ, ಪ್ರೀತಿಯುಕ್ಕಿಸುವ ಅವರ ಮುಖಗಳ ಮೇಲೆ, ಸಂತೋಷದ ಸೂರ್ಯ ತನ್ನ ಹೊಳೆವ ಬೆಳಕನ್ನು ಚೆಲ್ಲುವಂತಾಗಬೇಕು. ಸುಂದರ ಮಾರ್ದವ ಬೆಳದಿಂಗಳ ಶಶಿ ಅವರ ಹರ್ಷೋನ್ಮಾದವನ್ನು ಸಾಸಿರ್ಮಡಿಗೊಳಿಸಬೇಕು. ಇಂಥ ಅತುಲ ಸಾಧ್ಯತೆಗಳ ನಾಡಕಟ್ಟುವ ಕಾರ್ಯ ನಮ್ಮದಾಗಬೇಕು.

ಈ ಎಲ್ಲಾ ಅಭಿಲಾಷೆಗೆ ಆಕಾರ ಕೊಡಬೇಕಾದರೆ, ನಮಗೆ ಉದಾತ್ತವಾದ ಆದರ್ಶವಿರಬೇಕು. ಅವುಗಳನ್ನು ನೈಜಗೊಳಿಸಲು ನಾವು ಸರ್ವತ್ಯಾಗಕ್ಕೂ ಸಿದ್ಧರಾಗಬೇಕು. ನಮ್ಮೆಲ್ಲಾ ದೇಹಶಕ್ತಿ ಧೀಶಕ್ತಿಯನ್ನು ಬಳಸಲೂ ಸಿದ್ಧರಾಗಬೇಕು. ನಮಗೆ ಸಾಧ್ಯವಿರುವ ಸಂಘಟನಾ ಶಕ್ತಿ ಮತ್ತು ಅಚಲ ನಿರ್ಧಾರ ನಮ್ಮ ಈ ಕಾರ್ಯದಲ್ಲಿ ಸುಭಗ ಕೈದುಗಳಾಗಿ ಪರಿಣಮಿಸಬೇಕು.

ನಮ್ಮಲ್ಲಿ ವಿಭಿನ್ನ ಆದರ್ಶಗಳ, ವಿಚಾರಧಾರೆಗಳ ಅನೇಕ ಪಕ್ಷಗಳಿವೆ; ಗುಂಪುಗಳಿವೆ. ಅವರೆಲ್ಲರೂ ಇಡೀ ದೇಶವನ್ನು ತಮ್ಮ ವಿಚಾರಧಾರೆಗಳಿಗನುಗುಣವಾಗಿ ಪರಿವರ್ತಿಸಲು ಪ್ರಯತ್ನಿಸುತ್ತಿದ್ದಾರೆ. ತಮ್ಮ ದೃಷ್ಟಿಕೋನಕ್ಕೆ ಸರಿಹೊಂದುವಂತೆ ಸಂವಿಧಾನವನ್ನು ಪುನರ್‌ರೂಪಿಸಲು, ತಮ್ಮ ಅನುಕೂಲಕ್ಕೆ ಅಳವಡುವಂತೆ ಆಡಳಿತ ವ್ಯವಸ್ಥೆಯನ್ನು ಬದಲಾಯಿಸಲು, ಬಯಸುತ್ತಿದ್ದಾರೆ. ಹಾಗೆ ಮಾಡಲು ಅವರಿಗೆ ಹಕ್ಕೇನೋ ಇದೆ. ಆದರೆ ಅದಕ್ಕಿಂತ ಮುಂಚೆ ಅವರು ಈ ರಾಷ್ಟ್ರಕ್ಕೆ ನಿಷ್ಠರಾಗಿರಬೇಕೆಂದು ಕೇಳುವ ಹಕ್ಕು ಈ ರಾಷ್ಟ್ರದ ಜನತೆಗಿದೆ. ಇಂದು ನಮಗೆ ಬೇಕಾಗಿರುವುದು ಒಂದು ಮಹಾನ್ ರಚನಾತ್ಮಕ ಪ್ರಯತ್ನ ಎಂಬುದನ್ನು ನಾವೆಲ್ಲರೂ ಮನಗಾಣಬೇಕಿದೆ. ನಮ್ಮ ಇಂದಿನ ತುರ್ತು ಅವಶ್ಯಕತೆಯೆಂದರೆ, ಜಗಳವಲ್ಲ; ಬದಲಾಗಿ, ಕಠಿಣ ಪರಿಶ್ರಮದಿಂದೊಡಗೂಡಿದ ಮೂರ್ತ ಕಾರ್ಯ. ನಮ್ಮ ಇಂದಿನ ಜರೂರಿಯೆಂದರೆ, ಒಣ ಚರ್ಚೆಯ ವಾದವಿವಾದವಲ್ಲ. ಇಂಥ ಸಂದರ್ಭದಲ್ಲಿ ಪ್ರತಿಯೊಬ್ಬರೂ ತಮಗೆ ಸಾಧ್ಯವಿರುವ ಕಾಣಿಕೆಯನ್ನು ಸಲ್ಲಿಸಲು ಸನ್ನದ್ಧರಾಗಿರಬೇಕೆಂಬುದು ನಮ್ಮ ಅಭಿಲಾಷೆ. ರೈತಾಪಿ ಜನತೆ ತಮ್ಮ ಸರ್ವಶಕ್ತಿಯನ್ನೂ ಬಳಸಿ, ಹೆಚ್ಚಿನ ಆಹಾರ ಬೆಳೆಯಬೇಕು. ಪ್ರತಿಯೊಬ್ಬ ಕಾರ್ಮಿಕ ತನ್ನ ಶಕ್ತಿಮೀರಿ ಶ್ರಮಿಸುತ್ತಾ ಔದ್ಯಮಿಕ ಉತ್ಪಾದನೆಯ ಚಾಕಚಕ್ಯತೆಯನ್ನು ಮೈಗೂಡಿಸಿಕೊಳ್ಳಬೇಕು; ಸಾರ್ವತ್ರಿಕ ಶ್ರೇಯೋಭಿವೃದ್ಧಿಗಾಗಿ ತನ್ನ ಸಂಪನ್ಮೂಲಗಳನ್ನು ವಿನಿಯೋಗಿಸಬೇಕೆಂದು ನಾವು ಬಯಸುತ್ತೇವೆ. ಪ್ರತಿಯೊಬ್ಬರಿಗೂ ಆರೋಗ್ಯಪೂರ್ಣವಾದ ಉತ್ತಮ ಬದುಕಿನ ಸಾಧ್ಯತೆಗಳನ್ನು ಒದಗಿಸುವ ಆಶ್ವಾಸನೆಗಳನ್ನು ನಾವು ನೀಡಬೇಕಿದೆ. ಪ್ರತಿಯೊಬ್ಬ ವ್ಯಕ್ತಿಯ ಸುಧಾರಣೆಗೆ, ಅಭಿವೃದ್ಧಿಗೆ ಅಷ್ಟೇ ಯಾಕೆ, ಆತ್ಮಸಾಕ್ಷಾತ್ಕಾರಕ್ಕೆ ಅವಶ್ಯವಿರುವ ಅವಕಾಶಗಳನ್ನೂ ನಾವು ಖಾತ್ರಿಪಡಿಸಬೇಕಿದೆ.

ಜನತೆಯ ಮುಂದಿರುವ ಈ ಘನ ಕಾರ್ಯ ಕೈಗೂಡಬೇಕಾದರೆ ಅವರು ಈ ಮಹತ್‌ಕಾರ್ಯಕ್ಕೆ ತಮ್ಮನ್ನು ಸಮರ್ಪಿಸಿಕೊಳ್ಳು ವುದಷ್ಟೇ ಅಲ್ಲ, ಇಲ್ಲಿಯವರೆಗೆ ಆಳುವವರಾಗಿದ್ದವರು, ನಮ್ಮ ಸ್ತ್ರೀ ಪುರುಷರ ಬದುಕಿನ ನಿಯಂತ್ರಕರಾಗಿದ್ದವರು ಇನ್ನು ಮುಂದೆ ಅವರ ಸೇವಕರ ಪಾತ್ರ ನಿರ್ವಹಿಸಬೇಕು. ನಮ್ಮ ಸೇನೆ ದೂರದೂರದ ನಾಡುಗಳನ್ನು ಸೆಣಸಿ ತನ್ನ ಶೌರ್ಯ ಸಾಹಸಕ್ಕೆ ಅಮರ ಕೀರ್ತಿ ಪಡೆದುಕೊಂಡಿದೆ. ನಮ್ಮ ಸೈನಿಕರು, ನಮ್ಮ ನೌಕಾದಳ ಮತ್ತು ವಾಯುಸೇನೆ ಈ ಮೂರೂ ಬಲಗಳು ಇಂದಿನ ಬದಲಾದ ಸ್ಥಿತಿಯಲ್ಲಿ ತಮ್ಮ ಕರ್ತವ್ಯದ ವೈಶಿಷ್ಟ್ಯವನ್ನು ಮನಗಾಣಬೇಕಿದೆ. ಒಟ್ಟಾಗಿಯೇ ರಾಷ್ಟ್ರೀಯ ಸೇನಾಬಲವಾಗಿರುವ ಅವರ ಮೇಲೆ ನಾವು ಪಡೆದುಕೊಂಡಿರುವ ಸ್ವಾತಂತ್ರ್ಯವನ್ನು ರಕ್ಷಿಸುವ ಜವಾಬ್ದಾರಿಯ ಜೊತೆಗೆ ಹೊಸ ಬದುಕಿನ ನಿರ್ಮಾಣದ ದಾರಿಯಲ್ಲಿ ರಚನಾತ್ಮಕ ಸಹಾಯದ ಹಸ್ತ ಚಾಚಬೇಕಾದ ಹೊಣೆಯಿದೆ. ನಮ್ಮ ದೇಶದ ಪ್ರತಿಯೊಬ್ಬನಿಗೂ ಸಶಸ್ತ್ರ ಸೇನಾ ಬಲ ಸೇರುವ ಮುಕ್ತ ಅವಕಾಶವಿದೆ. ಅಷ್ಟೇ ಅಲ್ಲ, ಅಲ್ಲಿ ಅವರವರ ಶಕ್ತಿಸಾಮರ್ಥ್ಯಗಳಿಗನುಗುಣವಾಗಿ ಉನ್ನತೋನ್ನತ ಸ್ಥಾನಗಳನ್ನಲಂಕರಿಸುವ, ಆ ಮೂಲಕ ರಕ್ಷಣಾ ಬಲದ ಸಂಪೂರ್ಣ ಜವಾಬ್ದಾರಿ ಹೊರುವ ವಿಪುಲ ಅವಕಾಶಗಳಿವೆ. ಸರಕಾರದ ವಿವಿಧ ಇಲಾಖೆಗಳಲ್ಲಿ ದುಡಿಯುತ್ತಿರುವ ನಮ್ಮ ಸಾರ್ವಜನಿಕ ನೌಕರರು ತಮ್ಮ ಆಳುವ ಪಾತ್ರವನ್ನು ತ್ಯಜಿಸಿ, ಜನತೆಯ ನೈಜ ಸೇವಕರಾಗಬೇಕಿದೆ. ಎಲ್ಲಾ ಸ್ವತಂತ್ರ ರಾಷ್ಟ್ರಗಳ ಸಾರ್ವಜನಿಕ ಸೇವಕರಂತೆ ಇವರೂ ತಮ್ಮ ನಡೆ ನುಡಿಯನ್ನು ಜನಪರವಾಗಿ ಬದಲಿಸಿಕೊಳ್ಳಬೇಕು.

ಪ್ರತಿಯಾಗಿ, ಜನತೆ ಮತ್ತು ಸರ್ಕಾರ ಸಾರ್ವಜನಿಕ ಸೇವಕರಿಗೆ ಉತ್ತಮ ಸೇವಾವಕಾಶಗಳನ್ನು ಸೃಷ್ಟಿಸಿಕೊಡಬೇಕು. ಅವರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ತಮ್ಮ ಸುತ್ತಲಿನ ಜನತೆಯ ಬದುಕಿಗೆ ಸಂವಾದಿಯಾಗಿ ಬಾಳುತ್ತಾ, ದಕ್ಷ ಸೇವಕರಾಗಿ ಕಾರ್ಯನಿರ್ವಹಿಸಲು ಉತ್ತಮ ಸನ್ನಿವೇಶವನ್ನು ಸೃಷ್ಟಿಸಿಕೊಡಬೇಕು.

ಭಾರತ ಒಕ್ಕೂಟದಲ್ಲಿ ಒಂದಾಗಲು ನಿರ್ಧರಿಸಿ ಮುಂದೆ ಬಂದಿರುವ ಭಾರತೀಯ ಪ್ರಾಂತಗಳನ್ನು ನಾವು ಸ್ವಾಗತಿಸುತ್ತೇವೆ ಮತ್ತು ಆ ಎಲ್ಲಾ ಪ್ರಾಂತಗಳ ಜನತೆಗೆ ನಮ್ಮ ಸ್ನೇಹದ ಹಸ್ತ ಚಾಚುತ್ತೇವೆ. ಈ ಎಲ್ಲಾ ಪ್ರಾಂತಗಳ ರಾಜಕುವರರು ಹಾಗೂ ಆಳರಸರಿಗೆ ನಾವು ಹೇಳಬಯಸುವುದೇನೆಂದರೆ, ಅವರ ವಿರುದ್ಧ ನಾವು ಯಾವುದೇ ಪಿತೂರಿ ನಡೆಸುತ್ತಿಲ್ಲ. ಅವರು ಇಂಗ್ಲೆಂಡಿನ ರಾಜನ ಉದಾಹರಣೆಯನ್ನನುಸರಿಸಿ, ಸಂವಿಧಾನಿಕ ಆಳರಸರು ಆಗಬಲ್ಲರೆಂಬ ವಿಶ್ವಾಸ ನಮಗಿದೆ. ಅವರು ಇಂಗ್ಲೆಂಡಿನ ರಾಜ್ಯವ್ಯವಸ್ಥೆಯ ಮಾದರಿಯನ್ನು ಅನುಸರಿಸುವುದು ಉಚಿತ. ಯೂರೋಪಿನ ಇತರೆಡೆಗಳಲ್ಲಿ ರಾಜ ವ್ಯವಸ್ಥೆ ಕುಸಿದು ಬಿದ್ದ ಮೇಲೆಯೂ ಬ್ರಿಟಿಷ್ ರಾಜವ್ಯವಸ್ಥ ಕ್ರಮವಾಗಿ ಎರಡು ಮಹಾ ಯುದ್ಧಗಳ ಹೊಡೆತ ತಿಂದೂ ಬದುಕಿ ಉಳಿದಿದೆ.

ಬ್ರಿಟಿಷ್ ವಸಾಹತುಗಳಲ್ಲಿ ವಾಸಿಸುತ್ತಿರುವ ವಿದೇಶೀ ಭಾರತೀಯರಿಗೆ, ಜಗತ್ತಿನ ಇನ್ನಿತರ ಭಾಗಗಳಲ್ಲಿ ವಾಸ್ತವ್ಯ ಹೂಡಿರುವ ಅನಿವಾಸಿ ಭಾರತೀಯರಿಗೆ ನಾವು ಸದಾಭಿಲಾಷೆಯ ಶುಭಕಾಮನೆಗಳನ್ನು ಕಳಿಸಬಯಸುತ್ತೇವೆ ಮತ್ತು ಅವರ ಕಲ್ಯಾಣದ ಬಗ್ಗೆ ಯಾವತ್ತೂ ನಮ್ಮ ಆಸಕ್ತಿ ಸ್ಥಾಯಿಯಾಗಿದೆಯೆಂದು ಹೇಳಬಯಸುತ್ತೇವೆ. ಅಲ್ಪಸಂಖ್ಯಾತರಿಗೆ ನಾವು ಹೇಳಲಿಚ್ಛಿಸುವುದೇನೆಂದರೆ, ಯಾವುದೇ ಸಂದರ್ಭದಲ್ಲಿಯೂ ಅವರ ಹಕ್ಕುಗಳನ್ನು ಗೌರವಿಸಿ ರಕ್ಷಿಸಲಾಗುವುದು. ಯಾವುದೇ ರೀತಿಯ ಅನ್ಯಾಯ ಅವರಿಗಾಗದಂತೆ ನೋಡಿಕೊಳ್ಳಲಾಗುವದು.

ಸದ್ಯ ನಮ್ಮ ಮುಂದಿರುವ ಅತ್ಯಂತ ಗುರುತರ ಕಾರ್ಯವೆಂದರೆ, ನಮ್ಮ ಸಂವಿಧಾನವನ್ನು ಆದಷ್ಟು ಶೀಘ್ರ ಪೂರ್ಣಗೊಳಿಸುವುದು. ಆ ಸಂವಿಧಾನದಡಿಯಲ್ಲಿ ಪ್ರತಿಯೊಬ್ಬನಿಗೂ ಅನಿರ್ಬಂಧಿತ ಸ್ವಾತಂತ್ರ್ಯ ಲಭಿಸುವಂತೆ ಮಾಡುವುದಲ್ಲದೆ, ಅದು ಅರ್ಥಪೂರ್ಣಗೊಳ್ಳಲು ಅವಶ್ಯವಿರುವ ಎಲ್ಲ ಅವಕಾಶಗಳನ್ನೂ ಕಲ್ಪಿಸಿಕೊಡಲಾಗುವುದು. ಅದರ ಫಲ ಪ್ರತಿಯೊಬ್ಬನಿಗೂ ದೊರೆಯುವಂತಹ ನಿರಾತಂಕ ವ್ಯವಸ್ಥೆಯನ್ನು ನಿರ್ಮಿಸಲಾಗವುದು. ಈ ಕೆಲಸವನ್ನು ನಾವು ಸಾಧ್ಯವಿದ್ದ ಮಟ್ಟಿಗೆ ತುಂಬ ಜಾಗ್ರತೆಯಿಂದ ಮಾಡಿ ಮುಗಿಸಬೇಕಾಗಿದೆ. ಯಾಕೆಂದರೆ, ನಾವೇ ರಚಿಸಿಕೊಂಡ ನಮ್ಮ ಸಂವಿಧಾನದ ಆಶ್ರಯದಲ್ಲಿ ನಾವು ಬದುಕು ಪ್ರಾರಂಭಿಸಬೇಕಿದೆ; ನಮ್ಮ ದುಡಿಮೆಗೆ ನಾಂದಿ ಹಾಡಬೇಕಿದೆ. ಅಂಥ ಸಂವಿಧಾನದ ಬಗ್ಗೆ ನಾವೆಲ್ಲರೂ ಸ್ವಾಭಿಮಾನದಿಂದ ಬೀಗುವಂತಾಗಬೇಕು. ನಮ್ಮ ಜನತೆಯ ಸರ್ವೋದಯಕ್ಕಾಗಿ, ಇಡೀ ಮಾನವ ಕುಲದ ಚಿರಂತನ ಒಳಿತಿಗಾಗಿ ಆ ಸಂವಿಧಾನವನ್ನು ಸಂರಕ್ಷಿಸುವ ಕೆಲಸ ಒಂದು ಪ್ರತಿಷ್ಠೆಯ ವಿಷಯವಾಗಬೇಕು. ಇಂಥ ಸಂವಿಧಾನವೊಂದನ್ನು ರೂಪಿಸಲು ನಾವು ಸಹಜವಾಗಿಯೇ ಜಗತ್ತಿನ ಇತರ ರಾಷ್ಟ್ರಗಳ ಜ್ಞಾನಾನುಭವಗಳನ್ನು ಪಡೆದುಕೊಳ್ಳಬೇಕಾಗುತ್ತದೆ. ಅಂತೆಯೇ, ನಮ್ಮ ಪರಂಪರೆ ಪರಿವೇಷಗಳಿಂದಲೂ ಸಾಕಷ್ಟು ಪಡೆದುಕೊಳ್ಳಬೇಕಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಕೆಲವೊಮ್ಮೆ ಇತ್ತೀಚಿನ ಚರಿತ್ರೆ ಎಳೆದ ಗೆರೆಗಳನ್ನು ಧಿಕ್ಕರಿಸಬೇಕಾಗುತ್ತದೆ. ಪ್ರಾಂತಗಳ ಗಡಿ ಸರಹದ್ದುಗಳನ್ನು ಪುನರಪಿ ನಿರ್ಧರಿಸಬೇಕಾಗುತ್ತದೆ. ಜೊತೆಗೆ ಅಧಿಕಾರದ ವ್ಯಾಪ್ತಿ ಮತ್ತು ಕಾರ್ಯದ ಸ್ವರೂಪಗಳನ್ನು

ಪುನರ್ ಹಂಚಿಕೆಗೆ ಒಳಪಡಿಸಬೇಕಾಗುತ್ತದೆ. ಜನತೆಯು ತನ್ನ ಸಂಕಲ್ಪ ಅಭಿವ್ಯಕ್ತಿಸಲು ಸಾಧ್ಯವಾಗುವಂತಹ ಸಂವಿಧಾನವೊಂದನ್ನು ರಚಿಸುವುದೇ ನಮ್ಮ ಆದರ್ಶವಾಗಿದೆ. ಪ್ರತಿಯೊಬ್ಬ ವ್ಯಕ್ತಿಗೂ ಸಮಾನ ಸ್ವಾತಂತ್ರ್ಯವನ್ನು ಕಲ್ಪಿಸಿಕೊಡುವುದರೊಟ್ಟಿಗೆ, 'ವ್ಯಕ್ತಿ ಸ್ವಾತಂತ್ರ್ಯ' ಸಾಮುದಾಯಿಕ ಶ್ರೇಯೋಭಿವೃದ್ಧಿಗೆ ಅಧೀನವಾಗಿರುವಂತೆ ವಿಧಿಸುವ ಸಂವಿಧಾನ ನಮಗೆ ಬೇಕಾಗಿದೆ.

ಇಲ್ಲಿಯವರೆಗೆ ನಾವು ಸ್ವಾತಂತ್ರ್ಯ ಪಡೆಯುವುದಕ್ಕೆ ಪಣತೊಟ್ಟಿದ್ದೆವು ಮತ್ತು ಅದರ ಸಾಧನೆಗಾಗಿ ಎಂಥ ಸಂಕಟಗಳಿಗೂ ಸಿದ್ಧರಾಗಿದ್ದೆವು. ಯಾವುದೇ ಸ್ವರೂಪದ ತ್ಯಾಗ ಬಲಿದಾನಗಳಿಗೂ ನಾವು ಹಿಂದೇಟು ಹಾಕುತ್ತಿರಲಿಲ್ಲ. ಈಗ ಮತ್ತೊಂದು ಪ್ರಕಾರದ ಪಣತೊಡುವ ಕಾಲ ಬಂದಿದೆ. ತ್ಯಾಗ ಬಲಿದಾನಗಳ ಕಾಲ ಹಿಂದೆ ಸರಿಯಿತೆಂದೂ, ಅವುಗಳ ಫಲವುಣ್ಣುವ 'ಸುಖ ಸಮೃದ್ಧಿಯ ಕಾಲ' ಈಗ ಬಂದಿದೆಯೆಂದೂ ಯಾರೂ ಭಾವಿಸಬಾರದು. ನಮ್ಮ ನಿಸ್ವಾರ್ಥ ಸೇವೆಗೆ ಅವಶ್ಯವಿರುವ ಸ್ಫೂರ್ತಿ, ಸಾಮರ್ಥ್ಯ ಇಂದಿಗಿಂತಲೂ ಇನ್ನು ಮುಂದೆ, ಹೆಚ್ಚಾಗಿ ಅಲ್ಲದಿದ್ದರೂ ಹಿಂದಿನಷ್ಟಾದರೂ, ಅವಶ್ಯವಿದೆಯೆಂಬುದನ್ನು ನಾವೆಲ್ಲರೂ ಮನಸಾ ಅರಿಯಬೇಕು. ಆದ್ದರಿಂದ ನಮ್ಮ ಮುಂದಿರುವ ಮಹತ್ತರ ಕಾರಣಕ್ಕೆ ನಮ್ಮನ್ನು ನಾವು ಮತ್ತೊಮ್ಮೆ ಅರ್ಪಿಸಿಕೊಳ್ಳಬೇಕಾಗಿದೆ. ನಮ್ಮ ಕಾರ್ಯಘನತರವಾದದ್ದಾಗಿದೆ. ಸಮಯವೂ ಅಷ್ಟೇ ಅನುಕೂಲಕರವಾಗಿದೆ. ಅದನ್ನು ಮಾಡಿ ಮುಗಿಸಲು ಅವಶ್ಯವಿರುವ ತಾಕತ್ತು, ಹಿಕ್ಮತ್ತು ಮತ್ತು ಹಿಮ್ಮತ್ತು ಯಥೇಚ್ಛವಾಗಿ ನಮ್ಮಲ್ಲಿ ಒಡಮೂಡಲೆಂದು ಪ್ರಾರ್ಥಿಸೋಣ.

## ಮಹಾತ್ಮಾ ಗಾಂಧೀಜಿಯ ಭಾವಚಿತ್ರದ ಅನಾವರಣ*

ಮಾನ್ಯ ಸದಸ್ಯರೇ, ಈ ಸದನದ ಎಲ್ಲ ಸದಸ್ಯರ ಪರವಾಗಿ ನಾನು ಶ್ರೀ ಪಟ್ಟಾನಿಯವರಿಗೆ ನಮ್ಮ ಕೃತಜ್ಞತಾ ಭಾವನೆಯನ್ನು ವ್ಯಕ್ತ ಮಾಡುತ್ತಿದ್ದೇನೆ. ಅವರು ಈ ಸದನಕ್ಕೆ ಕೊಟ್ಟ ಕಾಣಿಕೆಗಾಗಿ ನಾವು ಋಣಿಯಾಗಿದ್ದೇವೆ. ಸರ್ ಪ್ರಭಾಶಂಕರ್ ಪಟ್ಟಾನಿಯವರು ಈ ಸುಂದರವಾದ ಭಾವಚಿತ್ರವನ್ನು ಇಷ್ಟು ವರ್ಷಗಳವರೆಗೆ ಸಂರಕ್ಷಿಸಿ ಇಟ್ಟುಕೊಂಡು ಭಾರತ ಸ್ವಾತಂತ್ರ್ಯದ ಈ ಶುಭ ಸಂದರ್ಭದಲ್ಲಿ ಅದನ್ನು ರಾಷ್ಟ್ರಕ್ಕೆ ಕೊಡುಗೆಯಾಗಿ ನೀಡಿದ್ದು ಬಹು ಸಂತೋಷದ ವಿಷಯ. ಇದು ಅಷ್ಟೇ ಸ್ಫೂರ್ತಿದಾಯಕ ಸಂಗತಿಯೂ ಹೌದು. ಈ ಭಾವಚಿತ್ರವನ್ನು ಈ ಸದನದಲ್ಲಿ ಅನಾವರಣ ಮಾಡುವ ಸಂತೋಷದ ಕ್ಷಣದಲ್ಲಿ ನಾವೆಲ್ಲರೂ ಪಾಲ್ಗೊಳ್ಳುತ್ತಿರುವುದು ಬಹು ಹರ್ಷದಾಯಕವಾದ ಘಟನೆಯಾಗಿದೆ. ಮಹಾತ್ಮಾ ಗಾಂಧೀಜಿಯ ಜೊತೆಗೆ ಅನೇಕ ವರ್ಷಗಳವರೆಗೆ ಒಡನಾಡುವ ಅವಕಾಶ ನನಗೆ ದೊರೆತಿತ್ತು. ಆ ಕಾರಣಕ್ಕಾಗಿಯೇ ನಾನು ಗಾಂಧೀಜಿಯ ಸಾಧನೆಯ ಹಿರಿಮೆ ಗರಿಮೆಯ ಕುರಿತು ಒಂದೆರಡು ಮಾತನಾಡಿದರೆ ವಿನಯಾತೀತವಾದೀತು. ಇಡೀ ದೇಶ ತನ್ನನ್ನು ಸಂಕಟದಿಂದ ಹೊರಗೆತ್ತಬಲ್ಲ ಒಬ್ಬ ದಾತಾನ ಬರುವಿಕೆಗಾಗಿ ಕಾಯುತ್ತಿದ್ದಾಗ, ಗಾಂಧೀಜಿ ನಮ್ಮಲ್ಲಿಗೆ ಬಂದರು. ಆಗ ಅನೇಕ ಪ್ರಯತ್ನಗಳ ನಂತರ, ವಿಫಲತೆಯಿಂದ ಹೊರ ಹೊಮ್ಮುವ ಹತಾಶ ಭಾವನೆಯ ಅನುಭವ ನಮ್ಮಲ್ಲಿ ಮನೆ ಮಾಡಿಕೊಂಡಿತ್ತು. ಈ ಮುಂಚೆಯೇ ನಮ್ಮ ದೇಶ ತನ್ನ ಸ್ವಾತಂತ್ರ್ಯಕ್ಕಾಗಿ ಹಲವಾರು ಪ್ರಯತ್ನಗಳನ್ನು ಮಾಡಿಯಾಗಿತ್ತು. ಅದರ ಮುನ್ನಡೆಗೆ ಅವಶ್ಯಕವಿದ್ದ ಶಕ್ತಿ ಸಾಮರ್ಥ್ಯವನ್ನು ಸಂಚಯಿಸಿಕೊಡಬಲ್ಲ ಯಾವುದೋ ಒಂದು ವ್ಯಕ್ತಿ, ಶಕ್ತಿಗಾಗಿ ಅದು ಕಾತರದಿಂದ ಕಾಯುತ್ತಿತ್ತು. ಇದಕ್ಕೂ ಮಿಗಿಲಾಗಿ, ಸ್ವಾತಂತ್ರ್ಯವನ್ನು ಪಡೆದುಕೊಳ್ಳಲು ಸೂಕ್ತವಾದ ಶಸ್ತ್ರಾಸ್ತ್ರಗಳಿಗಾಗಿ ಅದು ಪರಿತಪಿಸುತ್ತಿತ್ತು. ಮಹಾತ್ಮಾ ಗಾಂಧೀ ಜನತೆಯಲ್ಲಿ ಸ್ಫೂರ್ತಿ ತುಂಬಿ, ಅವರಲ್ಲಿ ಸುಪ್ತ ಸ್ಥಿತಿಯಲ್ಲಿದ್ದ ಸ್ವಾತಂತ್ರ್ಯದ ಆಕಾಂಕ್ಷೆಯನ್ನು ಬಡಿದೆಬ್ಬಿಸಿದರು. ಜೊತೆಗೆ ಜನತೆಯ ಕೈಗೆ ಒಂದು ವಿನೂತನ ಅಸ್ತ್ರ ಕೊಟ್ಟರು. ನಾವು ಅವರ ನಿರೀಕ್ಷೆಯ ಮಟ್ಟಕ್ಕೆ ಏರಲು ಸಾಧ್ಯವಾಗದಿದ್ದರೂ ಕೊನೆಯ ಪಕ್ಷ ಅವರ ಮಾರ್ಗದರ್ಶನದಲ್ಲಿ ಸ್ವಾತಂತ್ರ್ಯ ಪಡೆಯಲು ಶಕ್ತರಾದೆವು. ಅನೇಕ ದಿನಗಳಿಂದ ನಮ್ಮ ಬಯಕೆ, ಹೆಬ್ಬಯಕೆಯಾಗಿದ್ದ ಸ್ವಾತಂತ್ರ್ಯವನ್ನು ಪಡೆಯುವಲ್ಲಿ ಅವರ ಸ್ಫೂರ್ತಿ ಮೂರ್ತ ರೂಪದಲ್ಲಿ ಕಾರ್ಯವೆಸಗಿತು.

ಕೇವಲ ರಾಜಕಾರಣದ ಕ್ಷೇತ್ರದಲ್ಲಷ್ಟೇ ಅಲ್ಲ, ಬದುಕಿನ ಇನ್ನಿತರ ಎಲ್ಲಾ ಕ್ಷೇತ್ರಗಳಲ್ಲಿ ಮಹಾತ್ಮಾ ಗಾಂಧೀಜಿಯ ಪ್ರಭೆ, ಪ್ರಭಾವ ಕಾಣಸಿಗುವುದು. ಅವರು ಮುಟ್ಟಿದ್ದೆಲ್ಲವೂ ಪ್ರಜ್ವಲವಾಗಿ ಬೆಳಗಿತು. ಗ್ರಾಮಾಂತರದ ಕೊಳಚೆಗೇರಿ, ಮಹಾನಗರದ ಕೊಳೆಗೇರಿ, ಕೋಟ್ಯಾಧೀಶನ ಬೃಹತ್ ಅರಮನೆ, ಮಹಾರಾಜನ ಅಂತಃಪುರ - ನಾವೆಲ್ಲಿಯೇ ಹೋಗಲಿ, ಗಾಂಧೀಜಿಯ ಪ್ರಭಾವಕ್ಕೊಳಗಾಗದ ಸ್ಥಳ ಕಾಣುವುದು ದುರ್ಲಭ. ಎಲ್ಲೆಲ್ಲೂ ಅವರ ಪ್ರಭಾವ ತಾನೇ ತಾನಾಗಿ ಪಸರಿಸಿಕೊಂಡಿರುವುದು ಕಂಡುಬರುತ್ತದೆ. ನಮ್ಮ ಬದುಕಿನ ಮೇಲಾದ ಗಾಂಧೀಜಿಯ ಪ್ರಭಾವ ಯಾವ ಮಟ್ಟದ್ದೆಂದರೆ, ಬಹುಶಃ ನಾವು ಅದನ್ನು ಸಂಪೂರ್ಣವಾಗಿ ಗ್ರಹಿಸಲು ಸಾಧ್ಯವಾಗಿಲ್ಲ. ಮಹಾತ್ಮರ ಮಹಾನತೆಯಿರುವುದೇ ಇದರಲ್ಲಿ. ಕಾಲ ಗತಿಸಿದಂತೆಲ್ಲ, ಯುಗ ಯುಗಗಳು ಕಳೆದಂತೆಲ್ಲ,

* ಸಂವಿಧಾನ ಸಭೆಯ ಚರ್ಚೆಗಳು, ಸಂಪುಟ 5 - 28 ಆಗಸ್ಟ್ 1947.

ನಮ್ಮ ಬದುಕಿನ ಮೇಲಷ್ಟೇ ಅಲ್ಲ, ಇಡೀ ಪ್ರಪಂಚದ ಇತಿಹಾಸದ ಮೇಲೆ ಅವರು ಬೀರಿದ ಪ್ರಭಾವ ಹೆಚ್ಚು ಹೆಚ್ಚಾಗಿ ಜನತೆಯ ಗಮನಕ್ಕೆ ಬರುತ್ತದೆ. ಇಂಥಾ ವ್ಯಕ್ತಿಗಳು ದಿನಕ್ಕೊಬ್ಬರು ಹುಟ್ಟುವುದಿಲ್ಲ. ಅಥವಾ ಇಂಥಾ ಮಹಾತ್ಮರ ಜನ್ಮ ಅಷ್ಟು ಸರಳವಾಗಿ ಘಟಿಸುವುದಿಲ್ಲ. ಅವರು ಯುಗಕ್ಕೊಮ್ಮೆ ಅವತರಿಸಿ, ಜಗತ್ತಿನ ಇತಿಹಾಸದ ದಾರಿ ದಿಶೆಯನ್ನು ಬದಲಿಸಬಲ್ಲರು; ಅದರ ಪ್ರವಾಹವನ್ನು ನಿಯಂತ್ರಿಸಬಲ್ಲರು. ಇಂಥಾ ಅಪರೂಪದ ಅವತಾರಗಳಲ್ಲಿ ಮಹಾತ್ಮಾ ಗಾಂಧೀಜಿಯವರೂ ಒಬ್ಬರು. ಅವರೊಂದಿಗಿನ ಒಡನಾಟ, ಅವರ ಕೈಕೆಳಗೆ ಕೆಲಸ ಮಾಡುವ ಅವಕಾಶ-ಇವೆಲ್ಲವೂ ನಮ್ಮ ಸುದೈವವೆಂದೇ ಹೇಳಬೇಕು. ಗಾಂಧೀಜಿ ತಮ್ಮ ಬದುಕಿನ ಅವಧಿಯಲ್ಲಿ ಮನುಕುಲದ ಚರಿತ್ರೆಯ ಪ್ರವಾಹವನ್ನು ನಿರ್ದಿಷ್ಟ ದಿಕ್ಕಿನಲ್ಲಿ ನಡೆಸಿದ್ದಾರೆ. ತಾವು ಆರಂಭಿಸಿದ ಕಾರ್ಯ ತಮ್ಮ ಜೀವಿತಾವಧಿಯಲ್ಲಿಯೇ ಫಲಕೊಟ್ಟಿದ್ದನ್ನು ಕಂಡಿದ್ದಾರೆ; ಮತ್ತು ಅದು ಇನ್ನೂ ಹೆಚ್ಚಿನ ಅಮೂಲ್ಯ ಫಲ ನೀಡುತ್ತಿರುವುದನ್ನು ಕಾಣುತ್ತಿದ್ದಾರೆ. ಅವರು ನಮ್ಮ ಬದುಕಿನಲ್ಲಿ ಮಾಡಿದ ಪವಾಡಗಳು ಅಸಂಖ್ಯಾತವಾಗಿವೆ. ಇಂಥಾ ಒಂದು ಚಿಕ್ಕ ಭಾಷಣದಲ್ಲಿ ಅವುಗಳ ವಿವರ ನೀಡುವದು ಸಾಧ್ಯವಿಲ್ಲ. ಅವರು ಸಾಧಾರಣ ವ್ಯಕ್ತಿಗಳನ್ನು ಸಾಧಕನನ್ನಾಗಿ ಪರಿವರ್ತಿಸುತ್ತಿದ್ದ ಬಗೆ, ಸಾಮಾನ್ಯ ಪ್ರತಿಭಾವಂತ ವ್ಯಕ್ತಿಗಳನ್ನು ಮಹಾನ್ ಸಾಮರ್ಥ್ಯದ ಪುರುಷರನ್ನಾಗಿ ಪರಿವರ್ತಿಸುತ್ತಿದ ವಿಧಾನ, ಸಾಮಾನ್ಯರನ್ನು ಸುಸಂಸ್ಕೃತರನ್ನಾಗಿ, ಮಹಾ ಸಾಧಕರನ್ನಾಗಿ ಸೃಜಿಸುತ್ತಿದ್ದ ಪದ್ಧತಿ - ಇವೆಲ್ಲವೂ ನಮಗೆ ಗೊತ್ತಿರುವಂಥವೆ. ಅಷ್ಟೇ ಅಲ್ಲ, ರಾಷ್ಟ್ರದ ಉದ್ದಗಲಕ್ಕೂ ಇಂಥ ವಿಶೇಷ ವ್ಯಕ್ತಿಗಳನ್ನು ಸೃಷ್ಟಿಸುವುದರ ಜೊತೆಗೆ ಅವರಲ್ಲಿ ಸ್ವಾತಂತ್ರ್ಯದ ಮಹತ್ವಾಕಾಂಕ್ಷೆ ಅಂಕುರಿಸುವಂತೆ ಮಾಡಿದ್ದರು. ಮೇಲಾಗಿ, ತಮ್ಮದೇ ಆದ ಕಾರ್ಯವಿಧಾನದ ಮೂಲಕ ಆ ಮಹತ್ವಾಕಾಂಕ್ಷೆ ಈಡೇರುವಂತೆಯೂ ಮಾಡಿದರು. ನಾವಿಂದು ಇಂಥ ವಿಶೇಷ ವ್ಯಕ್ತಿಗೆ ನಮ್ಮ ಗೌರವ ಸಲ್ಲಿಸಲು ಅಣಿಯಾಗಿದ್ದೇವೆ. ನಮಗೆ ಕಾಣಿಕೆಯಾಗಿ ಬಂದ ಈ ವರ್ಣ ಚಿತ್ರ ಈ ಸದನದಲ್ಲಿ ಸ್ಥಾಯೀಗೊಂಡು ಪ್ರಪಂಚದ ಇತಿಹಾಸದಲ್ಲಿ ಅತ್ಯಂತ ಸಂಧಿಗ್ಧ ಸಮಯದಲ್ಲಿ ತನ್ನ ಮಹತ್ತರ ಪಾತ್ರವನ್ನು ನಿರ್ವಹಿಸಿದ ವ್ಯಕ್ತಿಯ ಬಗ್ಗೆ, ಇಲ್ಲಿಯ ಬೆಂಚುಗಳ ಮೇಲೆ ಕೂಡುವ ಪ್ರತಿಯೊಬ್ಬ ಸದಸ್ಯನಿಗೂ ಸದಾ ನೆನಪಿಸುತ್ತದೆ. ಪ್ರತಿಯೊಬ್ಬ ಸದಸ್ಯನಿಗೂ ಈ ದೇಶದ ಬಗ್ಗೆ ಇರುವ ಕರ್ತವ್ಯವನ್ನು ಅದು ನೆನಪಿಸಿಕೊಡುತ್ತದೆ. ನಾವು ನಮ್ಮ ಪೂರ್ವಜರಿಂದ ಪಡೆದ ಮಹತ್ತರ ಬಳುವಳಿಯ ಬಗ್ಗೆ ಸದಾ ಜಾಗೃತರಾಗಿರುವಂತೆ, ನಾವು ಸ್ವಾತಂತ್ರ್ಯವನ್ನು ಪಡೆದ ವಿಧಾನ ಸದಾ ಸ್ಮೃತಿಯಲ್ಲಿರುವಂತೆ ಮಾಡುತ್ತದೆ; ಮತ್ತು ಆ ಸ್ವಾತಂತ್ರ್ಯವನ್ನು ಸರ್ವರ ಏಳಿಗೆಗಾಗಿ ಬಳಸುವಂತೆ ಪ್ರಚೋದಿಸುತ್ತದೆ. ನಮ್ಮ ಸನಾತನ ಸಂಸ್ಕೃತಿಯ ಪ್ರತಿನಿಧಿಯಾಗಿದ್ದ ಮಹಾತ್ಮಾಜಿಯ ಈ ಭಾವಚಿತ್ರ ನಾವು, ಅವರು ತೋರಿದ ಗುರಿ ಮುಟ್ಟಲು ಸಹಾಯಮಾಡುವುದೆಂದು ಆಶಿಸೋಣ ಮತ್ತು ಈ ಗುರಿಯೆಡೆಗೆ ನಮ್ಮನ್ನು ಮುನ್ನಡೆಸಿದ ಮಹಾತ್ಮರಿಗೆ ಸಲ್ಲುವ ಸಮುಚಿತ ರೀತಿಯಲ್ಲಿ ಬಾಳಿ ಬದುಕಲು ಪ್ರಯತ್ನಿಸೋಣ.

## ಕರಡು ಸಂವಿಧಾನ ಕುರಿತ ಚರ್ಚೆ-
## ಅನುಸರಿಸಬೇಕಾದ ವಿಧಾನ

ನಮ್ಮ ಈ ಚರ್ಚೆಯ ಎರಡನೇ ವಿಷಯವನ್ನು ಕೈಗೆತ್ತಿಕೊಳ್ಳುವ ಮುಂಚೆ ಕರಡು ಸಂವಿಧಾನದ ಕುರಿತು ನಾವು ನಡೆಸಲಿರುವ ಚರ್ಚೆಯ ವಿಧಿ ವಿಧಾನಗಳ ಬಗ್ಗೆ ನಾನು ಈ ಸದನಕ್ಕೆ ಒಂದಿಷ್ಟು ವಿವರಣೆ ನೀಡಬಯಸುತ್ತೇನೆ. ಈ ಸದನವು ನೇಮಿಸಿದ್ದ ಕರಡು ರಚನಾ ಸಮಿತಿಯ ಸದಸ್ಯರು ಸಂವಿಧಾನದ ಕರಡನ್ನು ಸಿದ್ಧಪಡಿಸಿ ಆಗಲೇ ಈ ಸದನದ ಸದಸ್ಯರ ಕೈಗಿತ್ತಿದ್ದಾರೆ ಎನ್ನುವುದು ಎಲ್ಲರಿಗೂ ಗೊತ್ತಿರುವ ಸಂಗತಿ. ಸುಮಾರು ಎಂಟು ತಿಂಗಳ ಹಿಂದೆಯೇ ಕರಡು ಸಂವಿಧಾನದ ಪ್ರತಿಗಳನ್ನು ಎಲ್ಲ ಸದಸ್ಯರಿಗೂ ತಲುಪಿಸಲಾಗಿದೆ. ಸದಸ್ಯರು ತಂತಮ್ಮ ಸಲಹೆ ಸೂಚನೆಗಳೇನಾದರೂ ಇದ್ದಲ್ಲಿ ನೀಡಬೇಕೆಂದು, ಅಥವಾ ತಿದ್ದುಪಡಿಗಳೇನಾದರೂ ಮಾಡಬೇಕೆಂದು ಬಯಸಿದ್ದಲ್ಲಿ ಈ ಕುರಿತು ಸೂಚನೆ ನೀಡಬೇಕೆಂದು ಕೇಳಿಕೊಳ್ಳಲಾಗಿದೆ. ಅದಕ್ಕೆ ಪ್ರತಿಯಾಗಿ ಅನೇಕ ತಿದ್ದುಪಡಿಗಳನ್ನು ಸೂಚಿಸಲಾಗಿದೆ. ಸದಸ್ಯರಿಂದಷ್ಟೇ ಅಲ್ಲ, ಸಾರ್ವಜನಿಕರು, ಸಾರ್ವಜನಿಕ ನಿಕಾಯಗಳು, ಪ್ರಾಂತೀಯ ಸರ್ಕಾರಗಳು ಮುಂತಾದ ಅನೇಕರಿಂದ ಈ ಸೂಚನೆಗಳು ಬಂದಿವೆ. ಕರಡು ರಚನಾ ಸಮಿತಿಯು ಈ ಎಲ್ಲಾ ಸಲಹೆಗಳನ್ನು, ತಿದ್ದುಪಡಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಅವುಗಳ ಬೆಳಕಿನಲ್ಲಿ ಅನೇಕ ವಿಧಿಗಳನ್ನು ಪುನರ್ ರೂಪಿಸಿದೆ. ಆದ್ದರಿಂದ ಈಗ ನಮ್ಮಲ್ಲಿ ಮೂಲ ಕರಡು ಸಂವಿಧಾನದ ಜೊತೆಗೆ ತಿದ್ದುಪಡಿ ಮಾಡಿದ ಕರಡು ಸಂವಿಧಾನದ ಪ್ರತಿಯೂ ಇದೆ. ಇವುಗಳನ್ನು ಸದಸ್ಯರ ಕೈಗೆ ಕೊಡಲಾಗಿದೆ. ಈಗ ನಾನು ಸೂಚಿಸುವುದೇನೆಂದರೆ, ಪ್ರತಿಯೊಂದು ವಿಧಿಯನ್ನೂ ನಾವೀಗ ಪ್ರತ್ಯೇಕವಾಗಿ ತೆಗೆದುಕೊಂಡು ಅದನ್ನು ಪರಿಶೀಲಿಸಬೇಕು. ಇದಕ್ಕೂ ಮೊದಲು ಈ ಕುರಿತು ನಾವೊಂದು ಗೊತ್ತುವಳಿಯನ್ನು ಪಾಸು ಮಾಡಬೇಕು. ಈಗಾಗಲೇ ನೀಡಿದ ಸೂಚನೆಯನ್ವಯ ಮಾಡಲಾದ ತಿದ್ದುಪಡಿಗಳನ್ನು ಸಕಾಲದಲ್ಲಿ ತಲುಪಿದ ತಿದ್ದುಪಡಿಗಳೆಂದು ಪರಿಭಾವಿಸತಕ್ಕದ್ದು. ಹೀಗಾಗಿ ಈ ತಿದ್ದುಪಡಿಗಳಿಗೆ ಈಗಾಗಲೇ ಸೂಚನೆ ನೀಡಿದ ಸದಸ್ಯರು ಮತ್ತೊಮ್ಮೆ ಆ ಕುರಿತು ಸೂಚನೆ ನೀಡುವ ಅವಶ್ಯಕತೆಯಿಲ್ಲ. ಇನ್ನೂ ಹೆಚ್ಚಿನ ತಿದ್ದುಪಡಿಗಳನ್ನು ಸೂಚಿಸಬಯಸುವ ಸದಸ್ಯರಿಗೆ ನಾನು ಇನ್ನೆರಡು ದಿನಗಳ ಕಾಲವನ್ನು ಕೊಡಬಯಸುತ್ತೇನೆ. ಆಮೇಲೆ ತೀರಾ ಅವಶ್ಯಕ ಎನಿಸದ ಹೊರತು ಯಾವುದೇ ತಿದ್ದುಪಡಿಯ ಪ್ರಸ್ತಾವನೆಗಳನ್ನು ಸ್ವೀಕರಿಸಬಾರದೆಂದು ನನ್ನ ಸಲಹೆ. ಹೀಗಿದ್ದೂ ತುಂಬ ಮಹತ್ವದ ತಿದ್ದುಪಡಿಗಳೇನಾದರೂ ಇದ್ದಲ್ಲಿ ಅವುಗಳನ್ನು ಸ್ವೀಕರಿಸಲೇಬೇಕಾಗುತ್ತದೆ. ಇದಲ್ಲದೆ, ಬೇರೆ ಕಾರಣಗಳಿಗಾಗಿ ಈ ಸದನವು ಪರಿಶೀಲಿಸಲೇಬೇಕೆಂದು ಭಾವಿಸುವ ತಿದ್ದುಪಡಿಗಳನ್ನು ನಾವು ಪರಿಗಣಿಸಬೇಕಾಗುತ್ತದೆ. ಅಂಥ ತಿದ್ದುಪಡಿಗಳ ಚರ್ಚೆಯನ್ನು ನಾನು ನಿರಾಕರಿಸಲಾರೆ. ಅಂಥವುಗಳಿಗೂ ಅವಕಾಶ ಮಾಡಿಕೊಡಲಾಗುವುದು. ಆದರೆ ಸಾಮಾನ್ಯವಾಗಿ ನಮಗೆ ಈಗಾಗಲೇ ತಲುಪಿರುವ ತಿದ್ದುಪಡಿಗಳ ಸೂಚನೆಗಳಿಗೆ ಮಾತ್ರ ಎಲ್ಲ ಸದಸ್ಯರೂ ಸೀಮಿತರಾಗಿರಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇಂಥ ತಿದ್ದುಪಡಿಗಳ ಸಂಖ್ಯೆ ಸುಮಾರು ಒಂದು ಸಾವಿರ ಇರಬಹುದೆಂದು ನನ್ನ ಅನಿಸಿಕೆ. ಈ ರೀತಿಯಾಗಿ ಹೋದರೆ ಮಾತ್ರ ನಾವು ನಮ್ಮ ಕಾರ್ಯದಕ್ಷತೆಗೆ ಯಾವ ಚ್ಯುತಿಯೂ ಉಂಟಾಗದಂತೆ ಸಮಯವನ್ನು ಉಳಿಸಬಹುದು; ಜೊತೆಗೆ ಯಾವುದೇ ವಿಧಿಯ ಕರಡನ್ನು ಕುರಿತು ನಿರಾತಂಕವಾಗಿ, ಮುಕ್ತವಾಗಿ ಚರ್ಚೆಯನ್ನೂ

ಮಾಡಬಹುದು. ಈ ಸದನವು ವಿಧಿಸುವ ಇತಿಮಿತಿಗಳ ಪರಿಧಿಯೊಳಗೆ ನಾನು ಹೇಳಬಯಸಿದ್ದು ಇಷ್ಟೇ. ಸದಸ್ಯರಿಗೆ ಈಗಾಗಲೇ ಕೊಡಲಾದ ದೀರ್ಘ ಅವಧಿ ಮತ್ತು ಈ ಅವಧಿಯಲ್ಲಿ ಬಂದ ಸುಮಾರು ಒಂದು ಸಾವಿರದಷ್ಟು ತಿದ್ದುಪಡಿಗಳ ಸೂಚನೆ-ಇವುಗಳ ದೃಷ್ಟಿಯಿಂದ ನೋಡಿದರೆ, ನನ್ನ ನಿಲುವು ಸಮಂಜಸವಾದದ್ದೆಂದು ನನ್ನ ಭಾವನೆ. ಇಷ್ಟಾಗಿಯೂ ಯಾವುದಾದರೂ ತಿದ್ದುಪಡಿಯನ್ನು ನಿರ್ಲಕ್ಷಿಸಲಾಗಿದ್ದರೆ, ಯಾವುದಾದರೂ ಸದಸ್ಯರು ಅಂಥ ತಿದ್ದುಪಡಿಯ ಪರಿಶೀಲನೆ ಅವಶ್ಯವೆಂದು ಭಾವಿಸುವುದಾದರೆ, ಅದನ್ನು ನಾವು ಗಮನಕ್ಕೆ ತೆಗೆದುಕೊಳ್ಳಬಹುದು. ಆದರೆ ಸಾಮಾನ್ಯವಾಗಿ ಇನ್ನು ಮುಂದೆ ಯಾವುದೇ ತಿದ್ದುಪಡಿಯನ್ನು ನಾನು ಅಂಗೀಕರಿಸಲಾರೆ. ನಾನೀಗ ಸಾದರಪಡಿಸುವುದೇನೆಂದರೆ, ಡಾ|| ಅಂಬೇಡ್ಕರರು ಸೂಚಿಸಲಿರುವ ನಿಲುವಳಿಯನ್ನು ಎರಡು ದಿನಗಳವರೆಗೆ ನಾವು ಚರ್ಚಿಸಬೇಕು. ಅಂದರೆ, ಇವತ್ತು ಮತ್ತು ನಾಳೆ. ಮುಂಜಾನೆ ಮತ್ತು ಮಧ್ಯಾಹ್ನದ ನಂತರ ನಾವು ಚರ್ಚೆಯನ್ನು ಮುಂದುವರಿಸಬೇಕು. ಶನಿವಾರ ಮತ್ತು ರವಿವಾರ ಸದಸ್ಯರು ತಿದ್ದುಪಡಿಗಳ ಸೂಚನೆ ನೀಡಬಹುದು. ನಮಗೆ ಈಗಾಗಲೆ ಸೂಚನೆ ಬಂದಿರುವ ಮತ್ತು ಶನಿವಾರ ಐದು ಗಂಟೆಯವರೆಗೆ ಬರಲಿರುವ ಎಲ್ಲ ತಿದ್ದುಪಡಿಗಳನ್ನು ಕ್ರೋಢೀಕರಿಸಿ ಮುದ್ರಿಸಿ, ಸೋಮವಾರ ಸದಸ್ಯರ ಕೈಗೆ ನೀಡಲಾಗುವುದು. ಆಮೇಲೆ ಮಂಗಳವಾರದಿಂದ ತಿದ್ದುಪಡಿಗಳ ಕುರಿತು ಚರ್ಚೆ ನಡೆಸಲಾಗುವುದು. ಇದು ತಿದ್ದುಪಡಿಗಳ ಸೂಚನೆ, ಅವುಗಳ ಕುರಿತು ಚರ್ಚೆ, ಇತ್ಯಾದಿಗಳ ಒಟ್ಟು ಕಾರ್ಯಕ್ರಮದ ಬಗ್ಗೆ ನಾನು ನನ್ನ ಮನಸ್ಸಿನಲ್ಲಿ ಹಾಕಿಕೊಂಡ ರೂಪುರೇಷೆಯಾಗಿದೆ.

ಎಲ್ಲ ಸದಸ್ಯರಿಗೆ ನಾನು ಹೇಳಬಯಸುವ ಇನ್ನೊಂದು ವಿಷಯವಿದೆ: ಈಗ್ಗಾಗಲೇ ಸೂಚನೆ ನೀಡಲಾದ ನಿಲುವಳಿಯೊಂದಿದೆ ಮತ್ತು ಈಗಾಗಲೆ ಸೂಚನೆ ನೀಡಲಾದ ಒಂದು ತಿದ್ದುಪಡಿಯೂ ಇದೆ. ಅದ್ಯಾವುದೆಂದರೆ, 'ಈ ಸದನವು ಸಂವಿಧಾನದ ಬಗ್ಗೆ ನಡೆಸುವ ಚರ್ಚೆಯನ್ನು ಸಂಪೂರ್ಣವಾಗಿ ಮುಂದೂಡಬೇಕು, ಮತ್ತು ವಯಸ್ಕ ಮತದಾನದ ಆಧಾರದ ಮೇಲೆ ಕೋಮು ಅತೀತ ಚುನಾವಣೆಯ ಮೂಲಕ ಆಯ್ಕೆಯಾಗುವ ಹೊಸ ಸದನವು ಸಂವಿಧಾನ ರಚನೆಯ ಪ್ರಶ್ನೆಯನ್ನು ಕೈಗೆತ್ತಿಕೊಳ್ಳತಕ್ಕದ್ದು.' ಈ ಸದನವು ಕಳೆದ ಎರಡು ವರ್ಷಗಳ ದೀರ್ಘ ಅವಧಿಯಲ್ಲಿ ಸತತ ಪರಿಶ್ರಮದ ಮೂಲಕ ಸಿದ್ಧಪಡಿಸಿದ ಈ ಸಂವಿಧಾನವನ್ನು ಬಿಸಾಕಲು ಬಯಸುತ್ತದೆಯೇ? ಎಂಬುದು ನನಗೆ ಗೊತ್ತಿಲ್ಲ. ಆರಂಭದ ವರ್ಷಗಳಲ್ಲಿ ಸಂವಿಧಾನದ ತಿದ್ದುಪಡಿಗೆ ಸರಳ ವಿಧಾನಗಳನ್ನು ಸೂಚಿಸುವ ಒಂದು ವಿಧಿಯು ಕರಡು ಸಂವಿಧಾನದಲ್ಲಿದೆಯೆಂಬ ಒಂದೇ ಕಾರಣಕ್ಕಾಗಿಯೇ ಇಡೀ ಸಂವಿಧಾನವನ್ನೇ ತಿರಸ್ಕರಿಸಲು ಈ ಸದನ ಬಯುಸುತ್ತದೆಯೇ? ನನಗೆ ಗೊತ್ತಿಲ್ಲ. ಸಂವಿಧಾನದಲ್ಲಿ ಅರೆಕೊರೆಗಳೇನಾದರೂ ಇದ್ದಲ್ಲಿ ಅಥವಾ ತಿದ್ದುಪಡಿ ಬಯಸುವ ಚ್ಯುತಿ ನ್ಯೂನತೆಗಳೇನಾದರೂ ಇದ್ದಲ್ಲಿ ಅವುಗಳನ್ನು ಸರಿಪಡಿಸಲು ಅವಕಾಶವಿದ್ದೇ ಇದೆ. ಆದ್ದರಿಂದ ವಯಸ್ಕ ಮತದಾನದ ಮೂಲಕ ಹೊಸ ಸದನ ಅಸ್ತಿತ್ವಕ್ಕೆ ಬರುವವರೆಗೆ ಇಡೀ ಸಂವಿಧಾನದ ಪರಿಶೀಲನೆಯನ್ನೇ ತಡೆಹಿಡಿಯುವ ಅವಶ್ಯಕತೆಯಿಲ್ಲ. ಈ ದಾರಿಯಲ್ಲಿ ನಾವು ಎದುರಿಸಬೇಕಾದ ಮೊಟ್ಟಮೊದಲ ಸಮಸ್ಯೆಯೆಂದರೆ, ವಯಸ್ಕ ಮತದಾನದ ಪದ್ಧತಿಯಡಿಯಲ್ಲಿ ಮತದಾರರ ಪಟ್ಟಿಯನ್ನು ತಯಾರಿಸುವುದು. ಅದಕ್ಕೆ ಬೇಕಾಗಿರುವ ಕಾನೂನು ಸದ್ಯ ಅಸ್ತಿತ್ವದಲ್ಲಿಲ್ಲ. ವಯಸ್ಕ ಮತದಾನ ಪದ್ಧತಿಯ ಬಗ್ಗೆ ಈ ಕರಡು ಸಂವಿಧಾನದಲ್ಲಿ ನಾವು ಜಿಜ್ಞಾಸೆ ನಡೆಸಿದ್ದೇವೆ. ಈ ಸಂವಿಧಾನ

ಅಂಗೀಕೃತವಾದಾಗ ಅದು ಜಾರಿಗೆ ಬರುತ್ತದೆ. ಆದ್ದರಿಂದ ವಯಸ್ಕರ ಮತದಾನ ಪದ್ಧತಿಯನ್ನು ಬಯಸಿ, ಅದನ್ನು ರೂಪಿಸಲು ಇನ್ನೊಂದು ಸಂವಿಧಾನ ಸಭೆಯನ್ನು ತಾವು ರಚಿಸಬಯಸಿದರೆ, ಆ ಸಂವಿಧಾನ ಸಭೆಯು ತಿದ್ದುಪಡಿಗಳನ್ನು ಅಮಲುಗೊಳಿಸಲು ಇಚ್ಛಿಸುವುದಾದರೆ, ನಾವು ಇನ್ನೊಂದು ಕಾಯ್ದೆಯನ್ನು ಪಾಸು ಮಾಡಬೇಕಾಗುತ್ತದೆ. ಆದರೆ ಇಂಥ ಕಾಯ್ದೆಯನ್ನು ಪಾಸು ಮಾಡುವ ಹಕ್ಕು ಯಾವ ಸದನಕ್ಕಿರುತ್ತದೆ? ತತ್ಕಾರಣವಾಗಿ ನಾವು ಸಾಕಷ್ಟು ಪರಿಶ್ರಮವಹಿಸಿ ತಯಾರಿಸಿರುವ, ಕರಡು ಸಮಿತಿ ಮತ್ತು ಈ ಸದನದ ಸದಸ್ಯರು ಎಷ್ಟೋ ಗಮನಕೊಟ್ಟು ರೂಪಿಸಿರುವ, ಈ ಕರಡನ್ನು ತೆಗೆದುಕೊಂಡೇ ಮುಂದುವರಿಯಬೇಕೆಂಬುದು ನನ್ನ ಅಭಿಲಾಷೆ.

ಇದು ನಾನು ಅನುಸರಿಸಬೇಕೆಂದಿರುವ ಕಾರ್ಯಕ್ರಮದ ಮೂಲ, ಚೂಲ. ಇದಕ್ಕೆ ಹೊರತಾಗಿ, ಸದಸ್ಯರು ಸೂಚಿಸಬಯಸುವ ಸಲಹೆಗಳೇನಾದರೂ ಇದ್ದರೆ, ನಾನು ಅವುಗಳನ್ನು ಸಂತೋಷದಿಂದ ಸ್ವಾಗತಿಸುತ್ತೇನೆ. ನಾನು ಇಲ್ಲಿ ಕಾಣಿಸ ಬಯಸುವ ಇನ್ನೊಂದು ಸಂಗತಿಯಿದೆ. ಅದೇನೆಂದರೆ, ನಾನು ಯಾವುದೇ ಚರ್ಚೆಯನ್ನು ಮೊಟಕುಗೊಳಿಸಬಯಸುವುದಿಲ್ಲ. ಸಂವಿಧಾನದ ಪ್ರತಿಯೊಂದು ವಿಧಿ ಮತ್ತು ಅದರ ಎಲ್ಲಾ ಆಯಾಮಗಳಿಗೆ ಸಂಬಂಧಿಸಿದ ಪ್ರಶ್ನೆಯನ್ನು ಕುರಿತು ಸವಿಸ್ತಾರವಾಗಿ ಜಿಜ್ಞಾಸೆ ನಡೆಸಲು ಎಲ್ಲ ಸದಸ್ಯರಿಗೂ ಸಾಕಷ್ಟು ಅವಕಾಶ ಕೊಡಬಯಸುತ್ತೇನೆ. ಯಾಕೆಂದರೆ, ಅದು ನಮ್ಮೆಲ್ಲರ ಸಂವಿಧಾನವಾಗಲಿದೆ. ಆದರೆ, ಅದೇ ವೇಳೆಗೆ, ಚರ್ಚಿಸಿದ ವಿಷಯಗಳನ್ನೇ ಮತ್ತೆ ಮತ್ತೆ ಚರ್ಚಿಸುತ್ತಾ ಚರ್ವಿತ ಚರ್ವಣದಲ್ಲಿಯೇ ಕಾಲಹರಣ ಮಾಡಲಾಗದು. ಒಬ್ಬ ಸದಸ್ಯರು ಈಗಾಗಲೇ ಮಂಡಿಸಿದ ವಾದವನ್ನೇ ಮತ್ತೆ ಯಾರೂ ಪುನರಪಿ ಮಂಡಿಸಬಾರದು. ಆದ್ದರಿಂದ, ಈಗಾಗಲೇ ತೀರ್ಮಾನ ತೆಗೆದುಕೊಳ್ಳಲಾದ ಅನೇಕ ವಿಷಯಗಳನ್ನು ಮತ್ತೆ ಚರ್ಚೆಗೆ ಎತ್ತಿಕೊಳ್ಳಲಾಗುವುದಿಲ್ಲ. ದೀರ್ಘ ಚರ್ಚೆಗಳ ನಂತರವೇ ನಮ್ಮ ಸಂವಿಧಾನದ ಸೂತ್ರಗಳನ್ನು ನಿರ್ಧರಿಸಲಾಗಿದೆ; ಅಂಥ ಸೂತ್ರಗಳನ್ನಾಧರಿಸಿಯೇ ತೆಗೆದುಕೊಳ್ಳಲಾದ ತೀರ್ಮಾನಗಳೇ ಈ ಕರಡು ಸಂವಿಧಾನದ ಬಹು ಭಾಗವನ್ನು ವ್ಯಾಪಿಸಿವೆಯೆಂಬುದು ಸದಸ್ಯರಿಗೆ ಗೊತ್ತಿದೆ. ಯಾವೊಬ್ಬ ಸದಸ್ಯರೂ ಅಂಥ ತೀರ್ಮಾನಗಳನ್ನು ಅಷ್ಟು ಹಗುರವಾಗಿ ತಿರಸ್ಕರಿಸಿ ಮತ್ತೆ ಹೊಸ ತೀರ್ಮಾನಗಳನ್ನು ತೆಗೆದುಕೊಳ್ಳಬಯಸುತ್ತಾರೆ ಎಂದು ನನಗನಿಸುವುದಿಲ್ಲ. ಪುನರ್‌ಪರಿಶೀಲನೆ ಅವಶ್ಯಕವೆಂದು ಅನಿಸಬಹುದಾದ ಕೆಲವು ಪ್ರಸಂಗಗಳು ಇರಬಹುದು. ಆದರೆ, ಸಾಮಾನ್ಯವಾಗಿ ನಾವು ಈಗಾಗಲೇ ತೆಗೆದುಕೊಂಡ ತೀರ್ಮಾನಗಳನ್ನು ಅನುಸರಿಸಿಯೇ ಮುಂದುವರಿಯುತ್ತೇವೆ. ಯಾವುದರ ಬಗ್ಗೆ ಈಗಾಗಲೆ ತೀರ್ಮಾನ ತೆಗೆದುಕೊಳ್ಳಲಾಗಿಲ್ಲವೋ ಆ ಕುರಿತು ಸದನವು ತನ್ನ ಪ್ರಥಮ ನಿರ್ಣಯಗಳನ್ನು ತೆಗೆದುಕೊಳ್ಳಬಹುದು. ಇನ್ನೂ ತೀರ್ಮಾನ ತೆಗೆದುಕೊಂಡಿರದ ಕೆಲವು ನಿರ್ದಿಷ್ಟ ಸಮಸ್ಯೆಗಳಿವೆ. ಈ ಸದನವು ಕೆಲವು ಸಮಿತಿಗಳನ್ನು ನೇಮಿಸಿತ್ತು. ಆ ಸಮಿತಿಗಳು ನೀಡಿದ ವರದಿಗಳನ್ನು ಇನ್ನೂ ಪರಿಶೀಲಿಸಲಾಗಿಲ್ಲ. ಆದರೆ ಕರಡು ಸಮಿತಿಯು ಎರಡು ಪರ್ಯಾಯ ಕರಡುಗಳನ್ನು ಸಾದರಪಡಿಸಿದೆ. ಒಂದರಲ್ಲಿ ತನ್ನದೇ ಅಭಿಪ್ರಾಯಗಳನ್ನು ಸಾದರಪಡಿಸುತ್ತಾ ಆ ಸಮಿತಿಗಳ ಬಗ್ಗೆ ತನಗಿರುವ ಭಿನ್ನಾಭಿಪ್ರಾಯಗಳನ್ನು ಮಂಡಿಸಿದೆ; ಇನ್ನೊಂದರಲ್ಲಿ, ಆ ಸಮಿತಿಗಳು ಸೂಚಿಸಿದ ಶಿಫಾರಸುಗಳನ್ನು ಮತ್ತು ವಿಭಿನ್ನ ತೀರ್ಮಾನಗಳನ್ನು ಒಳಗೊಂಡ ನಿಲುವನ್ನು ಪ್ರಸ್ತುತಪಡಿಸಿದೆ. ಆದ್ದರಿಂದ ಈ ವಿಷಯಗಳ ಕುರಿತು ನಿರ್ದಿಷ್ಟ ಚರ್ಚೆಗೆ ಬಂದಾಗ ನಾವು ಆಯಾ ಸಂಗತಿಗಳ ಗುಣಾವಗುಣಗಳನ್ನಾಧರಿಸಿ ಪುರಸ್ಕರಿಸಬಹುದು ಅಥವಾ ತಿರಸ್ಕರಿಸಬಹುದು. ಕರಡು ಸಮಿತಿಯ

ಅಭಿಪ್ರಾಯಗಳು ಸರಿಯಿದ್ದಲ್ಲಿ ಅವುಗಳನ್ನು ಸ್ವೀಕರಿಸಬಹುದು. ಅಥವಾ ಸದನ ಸಮಿತಿಯ ನಿಲುವು ಸಮಂಜಸವೆಂದು ಕಂಡುಬಂದಲ್ಲಿ ಅದನ್ನು ಅಂಗೀಕರಿಸಬಹುದು. ಒಟ್ಟಿನಲ್ಲಿ ಈ ಸದನಕ್ಕೆ ಒಂದು ಕರಡನ್ನು ಸಿದ್ಧಪಡಿಸಿಕೊಡಲಾಗುವುದು. ಈ ಪ್ರಶ್ನೆಗಳ ಇತ್ಯರ್ಥಕ್ಕಾಗಿಯೇ ಸದನ ಕಾಯಬೇಕಿಲ್ಲ. ಈ ಇಡೀ ವಿಷಯವನ್ನು ಈ ದೃಷ್ಟಿಯಿಂದ ನೋಡಿದರೆ, ಅಲ್ಲಿ ಸಾಕಷ್ಟು ಚರ್ಚೆಗೆ ಅವಕಾಶವಿಲ್ಲ. ಯಾಕೆಂದರೆ, ಎಲ್ಲಾ ತಿದ್ದುಪಡಿಗಳು ಹೆಚ್ಚೂ ಕಡಿಮೆ ಕರಡು ಸ್ವರೂಪದ್ದಾಗಿವೆ. ಕರಡು ಸಮಿತಿಯು, ಈ ಕುರಿತು ಬಂದ ಅನೇಕ ಸೂಚನೆ ಮತ್ತು ತಿದ್ದುಪಡಿಗಳನ್ನು ಅಂಗೀಕರಿಸಿದೆ. ಹೀಗಾಗಿ, ಇಲ್ಲಿ ಹೆಚ್ಚಿಗೆ ಚರ್ಚಿಸುವಂಥಾದ್ದೇನೂ ಇಲ್ಲ. ನಾವು ಈಗಾಗಲೇ ಅನೇಕ ತತ್ವಗಳ ಕುರಿತು ನಿರ್ದಿಷ್ಟ ನಿರ್ಣಯಗಳಿಗೆ ಬಂದಿದ್ದೇವೆ. ವ್ಯವಹಾರ ದಕ್ಷತೆಯಿಂದ ಎಲ್ಲವನ್ನೂ ಸುಸೂತ್ರವಾಗಿ ನಿರ್ವಹಿಸಿದರೆ, ಇಡೀ ಸಂವಿಧಾನದ ಚರ್ಚೆಯನ್ನು ನಾವು ದ್ವಿತೀಯ ವಾರ್ಷಿಕೋತ್ಸವದ ಹೊತ್ತಿಗಾಗಲೇ ಪೂರ್ಣಗೊಳಿಸಲು ಸಾಧ್ಯವಿದೆಯೆಂದು ನನ್ನ ಅನಿಸಿಕೆ. ಅಂದರೆ, ಮುಂಬರುವ ಡಿಸೆಂಬರ್ 9 ರಷ್ಟೊತ್ತಿಗಾಗಲೇ ನಮ್ಮ ಕಾರ್ಯ ಪೂರ್ಣಗೊಳ್ಳುತ್ತದೆ.

ಇಷ್ಟು ಮಾಡುವಲ್ಲಿ ನಾವು ಯಶಸ್ವಿಯಾದರೆ, ಆಮೇಲೆ ಕೆಲವು ದಿನಗಳವರೆಗೆ ನಾವು ನಮ್ಮ ಕಲಾಪವನ್ನು ಮುಂದೂಡಬಹುದು. ಈ ಸದನವು ಅಂಗೀಕರಿಸುವ ಎಲ್ಲ ತಿದ್ದುಪಡಿಗಳನ್ನೂ ಕರಡು ಸಮಿತಿ ಕೂಲಂಕಷವಾಗಿ ಪರಿಶೀಲಿಸಿ, ಅವೆಲ್ಲವುಗಳನ್ನೂ ಆಯಾ ಅಧ್ಯಾಯಗಳಲ್ಲಿ ಸೂಕ್ತವಾಗಿ ಹೊಂದಿಸಿ ಎಲ್ಲವನ್ನೂ ಸಾಂಗೋಪಾಂಗವಾಗಿ ಮುಗಿಸಲು ಕನಿಷ್ಠ 10-15 ದಿನಗಳು ಬೇಕಾಗಬಹುದು. ಆಮೇಲೆ ನಾವು ಎರಡನೇ ಸಲ ಸಭೆ ಸೇರಿ ಆಗ ಅಂತಿಮವಾಗಿ ಹೊರ ಹೊಮ್ಮಿದ ಸಂವಿಧಾನವನ್ನು ಅಂಗೀಕರಿಸಬಹುದು. ಈ ಎರಡನೇ ಸುತ್ತಿನ ಚರ್ಚೆಯ ಸಂದರ್ಭದಲ್ಲಿ ನಾವು ಯಾವುದೇ ಸಮಸ್ಯೆಯ ಗುಣಾವಗುಣಗಳ ಕುರಿತು ಪ್ರಶ್ನೆಯೆತ್ತುವಂತಿಲ್ಲ. ನಿಯಮಗಳ ಪ್ರಕಾರ ಅದಕ್ಕೆ ಯಾವುದೇ ಅವಕಾಶವಿರುವುದಿಲ್ಲ. ಆಗ ನಾವು ಮಾಡಬೇಕಾದುದ್ದೇನೆಂದರೆ, ಸದನದ ಮುಂದೆ ಮಂಡಿಸಿರುವ ಕರಡಿನಲ್ಲಿ ಸದನವು ಈ ಮುಂಚೆ ಸೂಚಿಸಿರುವ ತಿದ್ದುಪಡಿಗಳನ್ನು ಸೂಕ್ತವಾಗಿ ಒಳಗೊಳ್ಳಲಾಗಿದೆಯೋ ಇಲ್ಲವೋ ಎನ್ನುವದನ್ನು ಪರೀಕ್ಷಿಸುವುದು, ಅಷ್ಟೇ.

ಇದು ಸದನದ ಮುಂದೆ ನಾನು ಸಾದರಪಡಿಸಬಯಸಿದ್ದ ಪ್ರಸ್ತಾವನೆ. ಇದಕ್ಕೆ ಸದನದ ಸಕಲ ಸದಸ್ಯರ ಒಪ್ಪಿಗೆ ಇದೆಯೆಂದು ನನ್ನ ಭಾವನೆ.

## ಸಂವಿಧಾನ ಸಭೆ ಮತ್ತು ಸಂವಿಧಾನ*

ಇಂಥ ಬೃಹದ್ ಮಹತ್ತಿನ ಕಾರ್ಯಭಾರವೊಂದನ್ನು ಸಾಂಗಗೊಳಿಸಿದ್ದಕ್ಕಾಗಿ ನಾನು ಸಭೆಯನ್ನು ಅಭಿನಂದಿಸಬಯಸುತ್ತೇನೆ. ಈ ಸಂವಿಧಾನ ಸಭೆಯು ರಚಿಸಿದ ಸಂವಿಧಾನದ ಗುಣಾವಗುಣಗಳನ್ನು ಪರಾಮರ್ಶಿಸುವುದಾಗಲೀ ಸಭೆಯು ಕೈಗೆತ್ತಿಕೊಂಡು ಪೂರ್ತಿಗೊಳಿಸಿರುವ ಕೆಲಸದ ಮೌಲ್ಯ ವಿವೇಚನೆ ಮಾಡುವುದಾಗಲೀ ನನ್ನ ಉದ್ದೇಶವಲ್ಲ. ನಾನು ಆ ಕೆಲಸವನ್ನು ಇತರರಿಗೆ, ವಿಶೇಷವಾಗಿ, ಮುಂದಿನ ಪೀಳಿಗೆಗೆ ಬಿಟ್ಟುಕೊಡುವುದೇ ವಾಸಿ ಎಂದು ಭಾವಿಸಿದ್ದೇನೆ. ಸಂವಿಧಾನವನ್ನು ರಚಿಸಲು ನಾವು ಅನುಸರಿಸಿದ ವಿಧಾನ ಮತ್ತು ಈ ಸಂವಿದಾನದ ಮುಖ್ಯಲಕ್ಷಣಗಳನ್ನು ಕುರಿತು ಒಂದೆರಡು ಮಾತನಾಡಲು ಪ್ರಯತ್ನಿಸುತ್ತೇನೆ.

ಈ ಕೆಲಸವನ್ನು ಮಾಡುವ ಮುಂಚೆ ನಾವು ಮೂರು ವರ್ಷಗಳ ಹಿಂದೆ ಆರಂಭಿಸಿದ ಕಾರ್ಯದ ಮಹತ್ತು ಬೃಹತ್ತನ್ನು ಸೂಚಿಸುವ ಕೆಲವು ಅಂಶಗಳನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ. ನಮ್ಮ ಸಂವಿಧಾನ ಸಭೆಯು ತನ್ನ ಗಮನದಲ್ಲಿರಿಸಿಕೊಳ್ಳಬೇಕಾದ ಜನಸಂಖ್ಯಾ ಬಾಹುಳ್ಯವನ್ನು ನಾವು ಪರಿಗಣಿಸಿದ್ದಾದರೆ, ಅದು ರಶಿಯಾ ಒಂದನ್ನುಳಿದು ಇಡೀ ಯೂರೋಪ್ ಖಂಡದ ಜನಸಂಖ್ಯೆಗಿಂತಲೂ ಹೆಚ್ಚಾಗಿದೆ! ಅಂದರೆ, ಒಟ್ಟು ಯೂರೋಪಿನ ಜನಸಂಖ್ಯೆ 317 ಮಿಲಿಯನ್ ಆಗಿದ್ದರೆ, ಭಾರತದ ಜನಸಂಖ್ಯೆ 319 ಮಿಲಿಯನ್ ಆಗಿದೆ. ಯೂರೋಪಿನ ರಾಷ್ಟ್ರಗಳು ಎಂದೂ ಐಕ್ಯಗೊಳ್ಳಲು ಸಾಧ್ಯವಾಗಿಲ್ಲ; ಅಥವಾ ಒಂದು ವಿಶಾಲ ಒಕ್ಕೂಟವನ್ನು ರಚಿಸಿಕೊಳ್ಳಲು ಅವರಿಗೆ ಸಾಧ್ಯವಾಗಿಲ್ಲ. ಇನ್ನು ಒಂದೇ ಸರ್ಕಾರದ ಛತ್ರದಡಿ ಬರುವದಂತೂ ದೂರದ ಮಾತು. ಇಲ್ಲಿ ನಾವಾದರೋ ಇಷ್ಟು ದೊಡ್ಡ ಸಂಖ್ಯೆಯ ಜನಬಾಹುಳ್ಯ ಮತ್ತು ರಾಷ್ಟ್ರದ ಬೃಹತ್ ಗಾತ್ರದ ಹೊರತಾಗಿಯೂ ಇಡೀ ರಾಷ್ಟ್ರವನ್ನು ಆವರಿಸಿಕೊಳ್ಳಬಲ್ಲ ಒಂದು ಸಂವಿಧಾನವನ್ನು ರಚಿಸುವುದರಲ್ಲಿ ಯಶಸ್ವಿಯಾಗಿದ್ದೇವೆ. ದೇಶದ ಬೃಹತ್ ಗಾತ್ರವೊಂದೇ ನಮ್ಮ ಸಮಸ್ಯೆಯಾಗಿರಲಿಲ್ಲ. ಅದರ ಜೊತೆಗೆ ನಾವು ಎದುರಿಸಿದ ಸಮಸ್ಯೆಗಳ ಒಳಗೇ ಅನೇಕ ತೊಂದರೆಗಳು ಅಂತರ್‌ಗತವಾಗಿದ್ದವು. ನಮ್ಮ ದೇಶದಲ್ಲೇ ಹಲವಾರು ಸಮುದಾಯಗಳು ವಾಸಿಸುತ್ತಿವೆ. ದೇಶದ ವಿವಿಧ ಭಾಗಗಳಲ್ಲಿ ಅನೇಕ ಭಾಷೆಗಳು ಬಳಕೆಯಲ್ಲಿವೆ. ಇದಲ್ಲದೆ ರಾಷ್ಟ್ರದ ವಿಭಿನ್ನ ಭಾಗಗಳ ಜನತೆಯನ್ನು ಪ್ರತ್ಯೇಕಿಸುವ ಅನೇಕ- ವ್ಯತ್ಯಾಸಗಳೂ ಕಾಣಸಿಗುತ್ತವೆ. ಶೈಕ್ಷಣಿಕವಾಗಿ, ಆರ್ಥಿಕವಾಗಿ ಮುಂದುವರೆದಿರುವ ಪ್ರದೇಶಗಳ ಜನತೆಯ ಕಲ್ಯಾಣಕ್ಕೆ ಎಂತೋ ಅಂತೆಯೇ, ಹಿಂದುಳಿದ ಜನಾಂಗಗಳಾದ ಪರಿಶಿಷ್ಟರು, ಬುಡಕಟ್ಟಿನ ಜನರು ಮತ್ತು ಗುಡ್ಡಗಾಡಿನ ಪ್ರದೇಶದ ಜನರು ಈ ಎಲ್ಲರಿಗೂ ಸಮಾನ ಏಳ್ಗೆಯ ಅವಕಾಶವನ್ನು ಕಲ್ಪಿಸಿಕೊಡಬಲ್ಲ ಸಂವಿಧಾನವೊಂದನ್ನು ರಚಿಸುವ ಭಾರ ನಮ್ಮ ಹೆಗಲ ಮೇಲಿತ್ತು. ಮೇಲಾಗಿ, ಧೀರ್ಘಕಾಲದಿಂದಲೂ ರಾಷ್ಟ್ರದ ಮುನ್ನಡೆಗೆ ಕಾಲ್ತೊಡಕಾಗಿರುವ ಕೋಮು ಸಮಸ್ಯೆ ಕಗ್ಗಂಟೂ ನಮ್ಮ ಮುಂದಿತ್ತು. ಮಹಾತ್ಮಾ ಗಾಂಧೀಜಿ ಭಾಗವಹಿಸಿದ್ದ ಎರಡನೇ ದುಂಡು ಮೇಜಿನ ಪರಿಷತ್ತು ವಿಫಲವಾಗುವುದಕ್ಕೆ ಮುಖ್ಯ ಕಾರಣವೆಂದರೆ, ಕೋಮು ಸಮಸ್ಯೆ ಬಗೆಹರಿಯದೇ ಇದ್ದುದ್ದು. ಇನ್ನು ಅನಂತರದ ರಾಷ್ಟ್ರದ ಇತಿಹಾಸ ತೀರಾ ಇತ್ತೀಚಿನದಾಗಿರುದಿರುವುದರಿಂದ ಆ ಬಗ್ಗೆ ನಾನು ಯಾವುದೇ ವಿವರವಾದ ವರ್ಣನೆ ಮಾಡುವ ಅವಶ್ಯಕತೆಯಿಲ್ಲ. ಆದರೆ ಕೋಮು ಸಮಸ್ಯೆಯ ಕಗ್ಗಂಟಿನ ಪರಿಣಾಮವಾಗಿಯೇ ದೇಶ ಒಡೆದು ಛಿದ್ರವಾಯಿತು. ತತ್ಕಾರಣವಾಗಿ ಪೂರ್ವೋತ್ತರ ಮತ್ತು ಪಶ್ಚಿಮೋತ್ತರಗಳಲ್ಲಿ ನಾವು ಎರಡು ದೊಡ್ಡ ಭಾಗಗಳನ್ನು ಕಳೆದುಕೊಳ್ಳಬೇಕಾಯಿತು.

---

* ಸಂವಿಧಾನ ಸಭೆಯ ಚರ್ಚೆಗಳು, ಸಂಪುಟ 11,26 ರ ನವೆಂಬರ್ 1949.

ಇನ್ನೊಂದು ತುಂಬಾ ಗಂಭೀರವಾದ ಮಹತ್ವದ ಸಮಸ್ಯೆಯೆಂದರೆ, ಭಾರತೀಯ ರಾಜ್ಯಗಳದ್ದು. ಬ್ರಿಟಿಷರು ಭಾರತಕ್ಕೆ ಬಂದಾಗ ಅವರು ಇಡೀ ರಾಷ್ಟ್ರವನ್ನು ಒಂದೇ ಹೊಡೆತಕ್ಕೆ ಗೆದ್ದುಕೊಳ್ಳಲಿಲ್ಲ; ಕಾಲಾನುಕ್ರಮದಲ್ಲಿ ಒಂದೊಂದೇ ಭಾಗ ತಮ್ಮ ತೆಕ್ಕೆಗೆ ತೆಗೆದುಕೊಳ್ಳುತ್ತಾ ಹೋದರು. ಅವರ ಹಸ್ತಗತವಾಗಿ ನೇರವಾಗಿ ಅವರ ನಿಯಂತ್ರಣಕ್ಕೊಳಪಟ್ಟ ಭಾಗಗಳು ಬ್ರಿಟಿಷ್ ಭಾರತವೆಂದು ಕರೆಯಲ್ಪಟ್ಟವು. ಆದರೆ ಭಾರತದ ಗಮನಾರ್ಹ ಭಾಗಗಳು ಭಾರತೀಯ ಆಳರಸರ ನಿಯಂತ್ರಣದಲ್ಲಿಯೇ ಉಳಿದುಕೊಂಡಿದ್ದವು. ಈ ಎಲ್ಲಾ ಭೂ ಪ್ರದೇಶಗಳನ್ನು ನೇರವಾಗಿ ತಮ್ಮ ನಿಯಂತ್ರಣಕ್ಕೊಳಪಡಿಸುವುದು ಅವಶ್ಯಕವೆಂದಾಗಲೀ ಅಥವಾ ಲಾಭದಾಯಕವೆಂದಾಗಲೀ ಬ್ರಿಟಿಷರು ಭಾವಿಸಿರಲಿಲ್ಲ. ಆದ್ದರಿಂದ ಅವರು ಭಾರತದ ಆಳರಸರೇ ತಂತಮ್ಮ ಪ್ರಾಂತಗಳಲ್ಲಿ ಆಡಳಿತವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶವನ್ನು ಕೊಟ್ಟರು. ಆದರೆ ಈ ಎಲ್ಲಾ ಪ್ರಾಂತಗಳು ಬ್ರಿಟಿಷ್ ಸಾಮ್ರಾಜ್ಯಕ್ಕೆ ಅಧೀನವಾಗಿದ್ದವು; ಈ ಆಳರಸರು ಬ್ರಿಟಿಷರೊಂದಿಗೆ ಅನೇಕ ಒಪ್ಪಂದಗಳನ್ನು ಕೌಲುಗಳನ್ನು ಮಾಡಿಕೊಂಡಿದ್ದರು. ದೇಶದ 1/3ನೇ ಭಾಗದಷ್ಟು ಭೂಪ್ರದೇಶ ಮತ್ತು 1/4 ಭಾಗದಷ್ಟು ಜನಸಂಖ್ಯೆಯು ಸುಮಾರು 600 ರಾಜ್ಯಗಳಡಿಯಲ್ಲಿ ಹಂಚಿಹೋಗಿದ್ದವು. ಈ ರಾಜ್ಯಗಳ ಗಾತ್ರಗಳು ತುಂಬಾ ವಿಭಿನ್ನವಾಗಿದ್ದವು. ಚಿಕ್ಕಪುಟ್ಟ ಸಂಸ್ಥಾನಗಳಿಂದ ಹಿಡಿದು ಮೈಸೂರು, ಹೈದ್ರಾಬಾದ, ಕಾಶ್ಮೀರದಂಥ ವಿಶಾಲವೂ ವ್ಯಾಪಕವೂ ಆದ ಪ್ರಾಂತಗಳ ರೂಪದಲ್ಲಿ ಅಸ್ತಿತ್ವದಲ್ಲಿದ್ದವು. ಬ್ರಿಟಿಷರು ನಮ್ಮ ದೇಶಬಿಟ್ಟು ತೊಲಗಲು ನಿರ್ಧರಿಸಿದಾಗ ತಮ್ಮ ಅಧಿಕಾರವನ್ನೇನೋ ನಮಗೆ ಹಸ್ತಾಂತರಿಸಿದರು. ಆದರೆ ಜೊತೆಗೆ ತಾವು ಈ ಹಿಂದೆ ನೂರಾರು ಸಂಸ್ಥಾನಿಕ ಆಳರಸರೊಂದಿಗೆ ಮಾಡಿಕೊಂಡಿದ್ದ ಒಪ್ಪಂದಗಳೂ ಕೊನೆಗೊಂಡವೆಂದು ಘೋಷಿಸಿದರು. ಈವರೆಗೆ ದೇಶೀರಾಜರುಗಳ ಮೇಲಿದ್ದ ತನ್ನ ಪರಮಾಧಿಕರ ಮತ್ತು ಅಧಿನಾಯಕತ್ವ ಕೊನೆಗೊಂಡವೆಂದು ಸಾರಿದರು. ಆಗ, ಭಾರತೀಯ ಸರ್ಕಾರವು ಈ ವಿಭಿನ್ನ ಸಂಪ್ರದಾಯದ ಆಳರಸರೊಂದಿಗೆ ಸೆಣಸಬೇಕಾಯಿತು. ಕೆಲವು ಪ್ರಾಂತಗಳಲ್ಲಿ ಜನಪ್ರತಿನಿಧಿಗಳ ಶಾಸನ ಸಭೆಗಳಿದ್ದರೆ, ಇನ್ನೂ ಕೆಲವು ಪ್ರಾಂತಗಳಲ್ಲಿ ಅಂಥ ಯಾವುದೇ ಸಭೆಗಳು ಅಸ್ತಿತ್ವದಲ್ಲಿರಲಿಲ್ಲ. ಇಂಥ ಪ್ರಾಂತಗಳಲ್ಲಿ ಸಂಸ್ಥಾನದ ಅರಸರೇ ಸಂಪೂರ್ಣವಾಗಿ ಸರ್ವಾಧಿಕಾರಿಗಳಾಗಿದ್ದರು. ದೇಶೀ ಅರಸರೊಂದಿಗೆ ತಾವು ಮಾಡಿಕೊಂಡಿದ್ದ ಒಪ್ಪಂದಗಳು ಅನೂರ್ಜಿತವಾದವೆಂದೂ ಇನ್ನು ಮುಂದೆ ಈ ಎಲ್ಲಾ ಆಳರಸರು ಸ್ವತಂತ್ರರೆಂದೂ ಘೋಷಿಸಿದ್ದೇ ತಡ, ಈ ಎಲ್ಲಾ ಅರಸರು ಇಡಿಯಾಗಿ ಅಥವಾ ಬಿಡಿಯಾಗಿ ಸರ್ವತಂತ್ರ ಸ್ವತಂತ್ರರಾದರು. ಹೀಗಾಗಿ, ಭಾರತದ ಒಳಗಡೆಯೇ ಅನೇಕ ಸ್ವತಂತ್ರ್ಯ ದ್ವೀಪಗಳು ನಿರ್ಮಾಣವಾದಂತಾಯಿತು. ಈ ಸಂಸ್ಥಾನಿಕ ರಾಜರು ಸ್ವತಂತ್ರ ಪ್ರಾಂತಗಳ ಸರ್ವಾಧಿಕಾರಿಗಳಾಗಿ ಪರಿಣಮಿಸಿದ್ದರಿಂದ ಅವರು ಯಾವುದೇ ವಿದೇಶೀ ಶಕ್ತಿಯೊಂದಿಗೆ ಮಾತುಕತೆ ನಡೆಸುವ, ಅಥವಾ ಹೊಸ ಒಪ್ಪಂದಗಳನ್ನು ಮಾಡಿಕೊಳ್ಳುವ ಅಧಿಕಾರ ಪಡೆದುಕೊಂಡಿದ್ದರು. ಇವುಗಳಲ್ಲಿ ಅನೇಕ ಪ್ರಾಂತಗಳು ಭಾರತ ಸರ್ಕಾರದ ವಿರುದ್ಧ ಹೋಗದಂತೆ ಭೌಗೋಳಿಕ ಮತ್ತು ಇತರ ಮಿತಿಗಳಿದ್ದವು ಎಂಬುದು ನಿಸ್ಸಂಶಯ. ಆದರೆ ಸಂವಿಧಾನಿಕವಾಗಿ ಅದು ಸಾಧ್ಯವಾಗಿತ್ತು. ಆದ್ದರಿಂದ ಸಂವಿಧಾನ ಸಭೆಯು ಆರಂಭದಲ್ಲಿಯೇ ಈ ಎಲ್ಲಾ ಸಂಸ್ಥಾನಿಕ ಪ್ರಭುಗಳೊಂದಿಗೆ ಮಾತುಕತೆ ನಡೆಸಿ, ಅವರೆಲ್ಲ ಸಂವಿಧಾನ ಸಭೆಗೆ ತಂತಮ್ಮ ಪ್ರತಿನಿಧಿಗಳನ್ನು ಕಳಿಸುವಂತೆ ಒಡಂಬಡಿಸುವುದು ತೀರಾ ದುಸ್ತರದ ಕೆಲಸವಾಗಿತ್ತು. ಅವರಲ್ಲಿ ಕೆಲವರು ಆರಂಭದಲ್ಲಿಯೇ

ನಮ್ಮನ್ನು ಕೂಡಿಕೊಂಡರೆ, ಇನ್ನೂ ಕೆಲವರು ಆಮೇಲೆ ಸಾವಕಾಶವಾಗಿ ನಮ್ಮ ಜೊತೆಗೂಡಿದರು. ಹೀಗಾಗಿ, ಆ ದಿನಗಳಲ್ಲಿ ಪರದೆಯ ಹಿಂದೆ ಗೌಪ್ಯವಾದದ್ದು ನಿಗೂಢವಾದದ್ದು ಏನಾದರೊಂದು ನಡೆದಿತ್ತೆಂದು ನಾವು ಈಗ ಪರದೆಯ ಹಿಂದೆ ಇಣುಕಿ ನೋಡುವ ಅವಶ್ಯಕತೆಯಿಲ್ಲ. 1947ರ ಆಗಸ್ಟ್ 15ರ ಹೊತ್ತಿಗೆ, ಅಂದರೆ, ಸ್ವತಂತ್ರ ಭಾರತದ ಕಾಯ್ದೆ ಅಸ್ತಿತ್ವಕ್ಕೆ ಬರುವಷ್ಟರಲ್ಲಿಯೇ ಹೆಚ್ಚೂ ಕಡಿಮೆ ಎರಡು ಗಮನಾರ್ಹ ಪ್ರಾಂತಗಳನ್ನು ಬಿಟ್ಟು ಉಳಿದ ಎಲ್ಲ ಪ್ರಾಂತಗಳು ಭಾರತದ ತೆಕ್ಕೆಗೆ ಬಂದಿದ್ದವು. ಉತ್ತರದಲ್ಲಿ ಕಾಶ್ಮೀರ, ದಕ್ಷಿಣದಲ್ಲಿ ಹೈದ್ರಾಬಾದ್ ಇವೇ ಆ ಎರಡು ಪ್ರಾಂತಗಳಾಗಿದ್ದವು. ಭಾರತದ ಒಕ್ಕೂಟಕ್ಕೆ ಸೇರದ ರಾಜ್ಯಗಳೊಂದಿಗೆ ಯಥಾಸ್ಥಿತಿ ಮುಂದುವರಿಸಿಕೊಂಡು ಹೋಗುವ ಒಪ್ಪಂದಗಳನ್ನು ಮಾಡಿಕೊಳ್ಳಲಾಯಿತು. ಕ್ರಮೇಣ ಕಾಲಕಳೆದಂತೆ ಸಣ್ಣ ಪ್ರಾಂತಗಳು ಸ್ವತಂತ್ರವಾಗಿ ಉಳಿಯುವುದು ಯಾವುದೇ ರೀತಿಯಲ್ಲಿ ಸಾಧ್ಯವಿಲ್ಲವೆಂಬುದು ಅವುಗಳ ಅರಸರಿಗೆ ಮನದಟ್ಟಾಯಿತು. ಅಂತೆಯೇ ಅವರು ಭಾರತದ ವಿಶಾಲ ಒಕ್ಕೂಟದೊಂದಿಗೆ ಸೇರಿಕೊಳ್ಳಲು ಆರಂಭಿಸಿದರು. ಕೆಲವೇ ಕಾಲದಲ್ಲಿ ಎಲ್ಲ ಸಣ್ಣ ರಾಜ್ಯಗಳು ಒಕ್ಕೂಟದ ಪರಿಧಿಯೊಳಗೆ ಬರುವುದಲ್ಲದೆ, ಕೆಲವು ದೊಡ್ಡ ಪ್ರಾಂತಗಳೂ ಬೃಹತ್ ಭಾರತದೊಂದಿಗೆ ಸೇರಿಕೊಂಡವು. ಅನೇಕ ರಾಜ್ಯಗಳು ತಮ್ಮೊಳಗೇ ಕೆಲವು ಒಕ್ಕೂಟಗಳನ್ನು ಮಾಡಿಕೊಂಡಿದ್ದವು. ಆದರೆ ಈ ಆಂತರಿಕ ಒಕ್ಕೂಟಗಳು ಬೃಹತ್ ಭಾರತದ ಒಕ್ಕೂಟಕ್ಕೆ ಅಧೀನವಾಗಿದ್ದವು. ಈ ಸಮಗ್ರೀಕರಣದ ಪ್ರಕ್ರಿಯೆಯ ಯಶಸ್ಸಿನ ಕೀರ್ತಿ ಆಯಾ ಪ್ರಾಂತಗಳ ಆಳರಸರು ಹಾಗೂ ಅಲ್ಲಿಯ ಜನಸಾಮಾನ್ಯರುಗಳಿಗೆ ಎಷ್ಟು ಸಲ್ಲುತ್ತದೆಯೋ ಅಷ್ಟೇ ಕೀರ್ತಿ ಸರ್ದಾರ್ ವಲ್ಲಭ ಭಾಯೀ ಪಟೇಲರ ದೂರದೃಷ್ಟಿ ಮತ್ತು ಸಮರ್ಥ ಮಾರ್ಗದರ್ಶನದಲ್ಲಿ ಮುಂದಡಿಯಿಟ್ಟ ರಾಜ್ಯ ಸಚಿವಾಲಯಕ್ಕೂ ಸಲ್ಲುತ್ತದೆ. ಈಗ, ಅಂದರೆ, ನಾವು ಸಂವಿಧಾನವನ್ನು ಪಾಸು ಮಾಡಲು ಸಾಧ್ಯವಾಗಿರುವ ಈ ಹೊತ್ತಿಗಾಗಲೇ ಎಲ್ಲಾ ರಾಜ್ಯಗಳು ಹೆಚ್ಚೂ ಕಡಿಮೆ ಬ್ರಿಟಿಷ್ ಭಾರತದ ಪ್ರಾಂತಗಳ ಸ್ಥಾನಮಾನವನ್ನು ಪಡೆದುಕೊಂಡಿವೆ. ಈ ದೃಷ್ಟಿಯಿಂದ ಭಾರತೀಯ ರಾಜ್ಯಗಳನ್ನೊಳಗೊಂಡು ಎಲ್ಲ ಪ್ರಾಂತಗಳನ್ನು ಸದ್ಯದ ಸಂವಿಧಾನದಡಿಯಲ್ಲಿ 'ರಾಜ್ಯ'ಗಳೆಂದೂ ನಿರೂಪಿಸಲು ಸಾಧ್ಯವಾಗಿದೆ. ಇದೀಗ ಸರ್ದಾರ್ ವಲ್ಲಭಭಾಯಿ ಪಟೇಲರು ಪ್ರಕಟಿಸಿದಂತೆ ಎಲ್ಲವೂ ತುಂಬಾ ಸ್ಪಷ್ಟವಾಗಿದೆ. ಈ ಮೊದಲು ರಾಜ್ಯಗಳೆಂದು ಕರೆಯಲ್ಪಡುತ್ತಿದ್ದ ಪ್ರದೇಶಗಳು ಮತ್ತು ಹೊಸ ಸಂವಿಧಾನದಡಿಯಲ್ಲಿ ಅಸ್ತಿತ್ವಕ್ಕೆ ಬಂದಿರುವ ಪ್ರಾಂತಗಳು ಇವುಗಳ ನಡುವೆ ಯಾವುದೇ ವ್ಯತ್ಯಾಸವಿಲ್ಲ.

ಸಂವಿಧಾನವನ್ನು ರಚಿಸಲು ನಮಗೆ ಮೂರು ವರ್ಷಗಳು ತಗುಲಿದವು. ಆದರೆ ಈ ಸಂವಿಧಾನವನ್ನು ರಚಿಸಲು ತಗುಲಿದ ದಿನಗಳ ಸಂಖ್ಯೆ ಮತ್ತು ನಮ್ಮ ಸಾಧನೆಯ ಮಹತ್ತು ಇವುಗಳನ್ನು ಗಮನಿಸಿದರೆ, ಈ ಮೂರು ವರ್ಷಗಳ ಅವಧಿ ಏನೇನೂ ಅಲ್ಲ. ಅದಕ್ಕಾಗಿ ವ್ಯಯಿಸಿದ ದೀರ್ಘ ಅವಧಿಯ ಬಗ್ಗೆ ನಾವು ವಿಷಾದಿಸಬೇಕಾಗಿಲ್ಲ. ನಮ್ಮ ಕೆಲಸದ ಗಾತ್ರ ಮತ್ತು ಸತ್ವ ಕುರಿತು ಸನ್ಮಾನ್ಯ ಡಾ॥ ಬಿ.ಆರ್. ಅಂಬೇಡ್ಕರರು ನಿನ್ನೆಯೇ ತಮಗೆ ಸವಿಸ್ತಾರವಾಗಿ ವಿವರಿಸಿದ್ದಾರೆ.

ತೋರಿಕೆಗೆ ಅಪಾಹಾಸ್ಯವಾಗಿದ್ದ ರಾಜ್ಯಗಳ ಏಕೀಕರಣ ಮತ್ತು ಕೋಮು ಸಮಸ್ಯೆಗಳನ್ನು ಬಗೆಹರಿಸಲು ನಮ್ಮ ಸಂವಿಧಾನ ಸುಲಭ ಮಾರ್ಗಗಳನ್ನು ಕಲ್ಪಿಸಿಕೊಟ್ಟಿದೆ. ದುಂಡುಮೇಜಿನ

ಪರಿಷತ್ತಿನ ಸಂದರ್ಭದಲ್ಲಿ ಪರಿಹರಿಸಲು ಸಾಧ್ಯವಾಗದೇ ಇದ್ದ ತತ್ಪರಿಣಾಮವಾಗಿ ದೇಶವನ್ನು ಒಡೆದು ಹೋಳಾಗಿಸಿದ್ದದ್ದೂ ಈಗ ಸನ್ಮಾನ್ಯ ಸರ್ದಾರ್ ವಲ್ಲಭ ಬಾಯಿ ಪಟೇಲರ ವಿವೇಕಯುತ ಮಾರ್ಗದರ್ಶನದಲ್ಲಿ, ಸಂಬಂಧಪಟ್ಟ ಎಲ್ಲ ಪಕ್ಷಗಳ ಸಹಮತಿಯೊಂದಿಗೆ, ಪರಿಹರಿಸಲು ಸಾಧ್ಯವಾಗಿದೆ.

ಮೊಟ್ಟಮೊದಲಿಗೆ ನಾವು ಪ್ರತ್ಯೇಕ ಮತದಾರ ಪದ್ಧತಿಯನ್ನು ಕೊನೆಗೊಳಿಸಿದೆವು. ಅದು ಅನೇಕ ವರ್ಷಗಳವರೆಗೆ ನಮ್ಮ ರಾಜಕೀಯ ಬದುಕನ್ನು ವಿಷಮಯಗೊಳಿಸಿತ್ತು. ಬದಲಾಗಿ, ಪ್ರತ್ಯೇಕ ಮತದಾರರನ್ನು ಹೊಂದಿದ್ದ ಸಮುದಾಯಗಳಿಗೆ ಸ್ಥಾನಗಳ ಮೀಸಲಾತಿಯನ್ನು ನೀಡಲು ಒಪ್ಪಿಕೊಳ್ಳಲಾಯಿತು. ಆದರೆ 1919 ಮತ್ತು 1935ರ ಕಾಯ್ದೆಯನ್ವಯ ತಥಾಕಥಿತ 'ಚಾರಿತ್ರಿಕ ಮತ್ತು ಇತರ ಹಿರಿಮೆ'ಯ ಕಾರಣದಿಂದಾಗಿ ಕೆಲವು ಸಮುದಾಯಗಳಿಗೆ ಕೊಡಲಾಗುತ್ತಿದ್ದ ಸ್ಥಾನಗಳ ಸಂಖ್ಯೆಗೆ ಪ್ರತಿಯಾಗಿ, ಈಗ ಮೀಸಲಾತಿಯ ಸ್ಥಾನಗಳು ಆಯಾ ಜನತೆಯ ಸಂಖ್ಯೆಯನ್ನು ಆಧರಿಸಿ ನಿರ್ಧರಿಸಲಾಯಿತು. ನಮ್ಮ ಸಂವಿಧಾನವು ವಿವಿಧ ಕೋಮುಗಳನ್ನಾಧರಿಸಿ ಮೀಸಲಾತಿಗೆ ಅವಕಾಶ ಮಾಡಿಕೊಡುವುದಿಲ್ಲ. ಪ್ರತಿಯಾಗಿ ಅದು ಎರಡೇ ಎರಡು ವರ್ಗಗಳಿಗೆ ಅಂದರೆ ಹಿಂದೂ ಜನಾಂಗದಲ್ಲಿಯ ದಲಿತ ವರ್ಗಗಳಿಗೆ ಮತ್ತು ಪರಿಶಿಷ್ಟ ಪಂಗಡದ ಜನರಿಗೆ ಮೀಸಲಾತಿಯ ವಿಶೇಷ ಸೌಲಭ್ಯ ಕಲ್ಪಿಸಿಕೊಟ್ಟಿದೆ. ಅದೂ ಕೂಡ ಅವರ ಶಿಕ್ಷಣ ಮತ್ತು ಇತರ ಕ್ಷೇತ್ರಗಳಲ್ಲಿಯ ಹಿಂದುಳಿದಿರುವಿಕೆಯನ್ನು ಪರಿಗಣಿಸಿ. ಆದ್ದರಿಂದ ಸಂವಿಧಾನ ರಚನೆಗೆ ತಗುಲಿದ ದೀರ್ಘ ಸಮಯಕ್ಕಾಗಿ ನಾವು ಕ್ಷಮೆಯಾಚಿಸಲು ಯಾವುದೇ ಕಾರಣಗಳಿಲ್ಲ.

ಮೂರು ವರ್ಷಗಳ ಅವಧಿಯಲ್ಲಿ ಸಂವಿಧಾನ ಸಭೆಗೆ ನಾವು ಖರ್ಚು ಮಾಡಿರುವ ಹಣವೂ ಅಷ್ಟೇನು ದೊಡ್ಡ ಮೊತ್ತದ್ದಲ್ಲ. ಸಂವಿಧಾನ ರಚನೆಯ ಮಾಹಿತಿಯನ್ನು ಪರಿಗಣಿಸಿದರೆ, ಅದು ಅಲ್ಪವೆಂದೇ ಹೇಳಬೇಕು. ನನಗೆ ತಿಳಿದಿದ್ದಂತೆ ನವೆಂಬರ್ 22ರವರೆಗಿನ ಒಟ್ಟು ಖರ್ಚು ರೂಪಾಯಿ 6396729.

ಸಂವಿಧಾನ ರಚನೆಗೆ ಸಂಬಂಧಿಸಿದಂತೆ ಸಂವಿಧಾನ ಸಭೆಯು ಒಂದು ನಿರ್ದಿಷ್ಟವಾದ ವಿಧಾನವನ್ನು ಅನುಸರಿಸಿತು. ಪಂಡಿತ ಜವಾಹರಲಾರ್ ನೆಹರೂ ಅವರು ತಮ್ಮೊಂದು ಭಾಷಣದ ಮೂಲಕ ಮಂಡಿಸಿದ ಧ್ಯೇಯ ಧೋರಣೆ ಕುರಿತ ಗೊತ್ತುವಳಿಯ ಚೌಕಟ್ಟಿನೊಳಗೆ ಅದು ತನ್ನ ನೆಲೆಗಳನ್ನು ನಿರ್ಧರಿಸಿಕೊಂಡಿತು; ತನ್ನ ವ್ಯಾಪ್ತಿಯನ್ನು ಸ್ಪಷ್ಟಪಡಿಸಿಕೊಂಡಿತು. ಅದುವೇ ಈಗ ನಮ್ಮ ಸಂವಿಧಾನದ ಪೀಠಿಕೆಯಾಗಿದೆ. ಆಮೇಲೆ ಸಂವಿಧಾನಿಕ ಸಮಸ್ಯೆಯ ವಿಭಿನ್ನ ಆಯಾಮಗಳೊಂದಿಗೆ ವ್ಯವಹರಿಸಲು ವಿವಿಧ ಸಮಿತಿಗಳನ್ನು ನೇಮಿಸಲಾಯಿತು. ಡಾ|| ಅಂಬೇಡ್ಕರರು ಈ ಸಮಿತಿಯ ಹೆಸರುಗಳನ್ನು ಸೂಚಿಸಿದರು. ಇವುಗಳಲ್ಲಿ ಅನೇಕ ಸಮಿತಿಗಳಿಗೆ ಪಂಡಿತ ಜವಾಹರಲಾಲ್ ನೆಹರೂ ಅಥವಾ ಸರ್ದಾರ್ ಪಟೇಲರು ಅಧ್ಯಕ್ಷರಾಗಿದ್ದರು. ಹೀಗಾಗಿ, ನಮ್ಮ ಸಂವಿಧಾನದ ಮೂಲಭೂತ ನೆಲೆಗಳ ಕೀರ್ತಿ ಅವರಿಗೇ ಹೋಗತಕ್ಕದ್ದು. ಆ ವಿವಿಧ ಸಮಿತಿಗಳ ಸದಸ್ಯರೆಲ್ಲರೂ ತುಂಬ ಕಾರ್ಯತತ್ಪರತೆ ಮತ್ತು ದಕ್ಷತೆಯಿಂದ ಕೆಲಸ ಮಾಡಿ ತಂತಮ್ಮ ವರದಿಗಳನ್ನು ಸಲ್ಲಿಸಿದರು. ಸಂವಿಧಾನ ಸಭೆಯು ಅವುಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಅವರ ಶಿಫಾರಸ್ಸುಗಳನ್ನು ಅಂಗೀಕರಿಸಿತು. ಅವುಗಳ ಆಧಾರದ ಮೇಲೆ ಕರಡು ಸಂವಿಧಾನವನ್ನು ತಯಾರಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಬಿ.ಎನ್. ರಾವ್ ಅವರು ಸಲ್ಲಿಸಿದ ಸೇವೆ

ಮಹತ್ತರವಾದದ್ದು. ಇತರ ದೇಶಗಳ ಸಂವಿಧಾನಗಳ ಬಗ್ಗೆ ಅವರಿಗಿದ್ದ ವ್ಯಾಪಕ ಜ್ಞಾನ, ನಮ್ಮ ದೇಶದ ಸ್ಥಿತಿಗಳ ಬಗ್ಗೆ ಅವರಿಗಿದ್ದ ಅತುಲ ಅರಿವು ಮತ್ತು ಅಪಾರ ಆಡಳಿತಾತ್ಮಕ ಅನುಭವ ಈ ಎಲ್ಲವೂ ಮುಪ್ಪುರಿಗೊಂಡು ಸಂವಿಧಾನ ರಚನೆಯ ಪ್ರಕ್ರಿಯೆಯಲ್ಲಿ ಸಹಾಯ ಮಾಡಿದವು. ಸಂವಿಧಾನ ಸಭೆಯು ಆಮೇಲೆ ಒಂದು ಕರಡು ರಚನಾ ಸಮಿತಿಯನ್ನು ನೇಮಿಸಿತು. ಈ ಸಮಿತಿಯು ಶ್ರೀ ಬಿ.ಎನ್. ರಾವ್ ಅವರು ಸಿದ್ಧಪಡಿಸಿದ ಕರಡಿನ ಆಧಾರದ ಮೇಲೆ ಮುನ್ನಡೆದು, ಒಂದು ಕರಡು ಸಂವಿಧಾನವನ್ನು ರಚಿಸಿತು. ತದನಂತರ ಸಂವಿಧಾನ ಸಭೆಯು ತನ್ನ ಎರಡನೇ ವಾಚನ ಹಂತದಲ್ಲಿ ಸುದೀರ್ಘವಾಗಿ ಎಲ್ಲವನ್ನೂ ಪರಿಶೀಲಿಸಿತು. ಡಾ|| ಅಂಬೇಡ್ಕರರು ಹೇಳಿದಂತೆ, ಸುಮಾರು 7635 ತಿದ್ದುಪಡಿಗಳನ್ನು ಸೂಚಿಸಲಾಗಿತ್ತು. ಅವುಗಳಲ್ಲಿ 2473 ತಿದ್ದುಪಡಿಗಳನ್ನು ಗಮನಕ್ಕೆ ತೆಗೆದುಕೊಳ್ಳಲಾಯಿತು. ಇದೆಲ್ಲ ನಾನು ಏಕೆ ಹೇಳುತ್ತಿದ್ದೇನೆಂದರೆ, ಕೇವಲ ಕರಡು ಸಮಿತಿಯ ಸದಸ್ಯರಷ್ಟೇ ಅಲ್ಲ ಉಳಿದೆಲ್ಲಾ ಸದಸ್ಯರು ಸಂವಿಧಾನ ರಚನೆಯ ಬಗ್ಗೆ ತುಂಬಾ ಜಾಗರೂಕತೆಯ ನಿಗಾ ವಹಿಸಿದ್ದರು ಎಂಬುದನ್ನು ತಮ್ಮ ಗಮನಕ್ಕೆ ತರುವುದೇ ನನ್ನ ಉದ್ದೇಶವಾಗಿದೆ. ಕರಡು ಸಂವಿಧಾನದಲ್ಲಿಯ ಪ್ರತಿಯೊಂದು ಛೇದ, ಪರಿಛೇದಗಳನ್ನು ಅಷ್ಟೇ ಅಲ್ಲ, ವಾಸ್ತವವಾಗಿ ಪ್ರತಿಯೊಂದು ವಾಕ್ಯವನ್ನು ಕೆಲವೊಮ್ಮೆ ಪ್ರತಿಯೊಂದು ಶಬ್ದವನ್ನೊ ನಾವು ಕಟ್ಟೆಚ್ಚರದಿಂದ ಪರಿಶೀಲಿಸಬೇಕಾಯ್ತೆಂದರೆ ಆಶ್ಚರ್ಯದ ಮಾತಲ್ಲ. ಜನಸಾಮಾನ್ಯರೂ ಈ ವಿಷಯದಲ್ಲಿ ಸಾಕಷ್ಟು ಆಸಕ್ತಿ ತೋರುತ್ತಿದ್ದರೆಂಬುದನ್ನೂ ಮಾನ್ಯ ಸದಸ್ಯರ ಗಮನಕ್ಕೆ ತರಬಯಸುತ್ತೇನೆ. ಸಂವಿಧಾನ ಸಭೆಯ ಚರ್ಚೆ, ಜಿಜ್ಞಾಸೆಯನ್ನು ಆಲಿಸಲು 53000 ಮಿಕ್ಕಿ ಸಂದರ್ಶಕರು, ವಿಜಿಟರ್ಸ್ ಗ್ಯಾಲರಿಗೆ ಬಂದು ಹೋಗಿದ್ದಾರೆಂಬುದು ತುಂಬಾ ಮಹತ್ವದ ಸಂಗತಿ. ಪರಿಣಾಮತಃ ಕರಡು ಸಂವಿಧಾನವು ಗಾತ್ರದಲ್ಲಿ ತುಂಬಾ ದೊಡ್ಡದಾಗಿದೆ. ಅದನ್ನು ಅಂತಿಮವಾಗಿ ಅಂಗೀಕರಿಸುವ ಹೊತ್ತಿಗೆ ಅದರಲ್ಲಿ ಒಟ್ಟು 395 ವಿಧಿಗಳನ್ನು ಮತ್ತು ಎಂಟು ಪರಿಶಿಷ್ಟಗಳನ್ನು ಅಡಕಗೊಳಿಸಲಾಯಿತು. ಇದಕ್ಕೆ ಪ್ರತಿಯಾಗಿ, ಶ್ರೀ ಬಿ.ಎನ್. ರಾವ್ ಅವರು ತಯಾರಿಸಿದ್ದ ಮೂಲ ಕರಡಿನಲ್ಲಿ 243 ವಿಧಿಗಳು ಮತ್ತು 13 ಪರಿಶಿಷ್ಟಗಳಿದ್ದವು. ನಮ್ಮ ಸಂವಿಧಾನವು ಗಾತ್ರದಲ್ಲಿ ತೀರಾ ದೊಡ್ಡದಾಗಿದೆ ಎಂದು ಆಗಾಗ ಮಾಡಲಾಗುತ್ತಿರುವ ದೂರುಗಳಿಗೆ ನಾನು ಹೆಚ್ಚಿನ ಮಹತ್ವ ಕೊಡುವುದಿಲ್ಲ. ಅದು ಸತ್ವಯುತವಾಗಿದ್ದಲ್ಲಿ ಅದರ ಗಾತ್ರದ ಬಗ್ಗೆ ನಾವು ತಲೆ ಕೆಡಿಸಿಕೊಳ್ಳಬೇಕಾಗಿಲ್ಲ.

ಈಗ ನಾವು ನಮ್ಮ ಸಂವಿಧಾನದ ಮುಖ್ಯ ಗುಣ ಲಕ್ಷಣಗಳನ್ನು ಪರಿಶೀಲಿಸಬೇಕಿದೆ. ನಮ್ಮ ಸಂವಿಧಾನದ ಬಗ್ಗೆ ಕೇಳಲಾಗುವ ಮೊದಲನೇ ಪ್ರಶ್ನೆಯೆಂದರೆ, ಅದು ಯಾವ ಪ್ರಕಾರಕ್ಕೆ ಸೇರಿದ್ದುದೆಂಬುದು. ವೈಯಕ್ತಿಕವಾಗಿ ನಾನಂತೂ ಹೆಸರಿಗೆ ಮಹತ್ವ ಕೊಡುವುದಿಲ್ಲ. ನೀವು ಅದನ್ನು 'ಫೆಡರಲ್' ಸಂವಿಧಾನ ಎಂದರೂ ಸರಿ, ಅಥವಾ 'ಯುನಿಟರಿ' ಸಂವಿಧಾನ ಎಂದು ಕರೆದರೂ ಸರಿ. ಅಥವಾ ಇನ್ನಾವುದೇ ಹೆಸರಿನಿಂದಾದರೂ ಕರೆಯಿರಿ. ಅದರಿಂದೇನೂ ವ್ಯತ್ಯಾಸವಾಗುವುದಿಲ್ಲ. ನಮ್ಮ ಸಂವಿಧಾನ ನಮ್ಮ ಉದ್ದೇಶ ಈಡೇರಿಸಿದರೆ ಸಾಕು. ಈಗಾಗಲೆ ಪ್ರಪಂಚದಲ್ಲಿ ಚಿರಪರಿಚಿತವಾಗಿರುವ ಯಾವುದಾದರೂ ಒಂದು ಪ್ರಕಾರದ ಸಂವಿಧಾನವನ್ನೇ ರಚಿಸಿಕೊಳ್ಳಬೇಕೆಂದೇನೂ ಇಲ್ಲ. ನಮ್ಮ ಸಂವಿಧಾನದ ರಚನೆಯ ಸಂದರ್ಭದಲ್ಲಿ ನಾವು ನಮ್ಮ ದೇಶದ ಐತಿಹಾಸಿಕ ಸಂಗತಿಗಳನ್ನು ಪರಿಗಣಿಸಬೇಕಾಗುತ್ತದೆ. ನಮ್ಮ ದೇಶದ ಐತಿಹಾಸಿಕ ವಾಸ್ತವಗಳು ನಮ್ಮ ಸಂವಿಧಾನದ ಮೇಲೆ ಗಮನಾರ್ಹವಾದ ಪ್ರಭಾವ ಬೀರಿವೆಯೆಂಬುದು ಸರ್ವವಿದಿತ.

1930 ರಲ್ಲಿ ದುಂಡುಮೇಜಿನ ಪರಿಷತ್ತು ಜರುಗುವವರೆಗೆ ನಮ್ಮ ದೇಶದಲ್ಲಿ ಸಂಪೂರ್ಣವಾಗಿ ಒಂದು 'ಯುನಿಟರಿ' ಸ್ವರೂಪದ ಸರ್ಕಾರವಿತ್ತು. ಎಲ್ಲ ಪ್ರಾಂತಗಳು ಭಾರತ ಸರ್ಕಾರಕ್ಕೆ ಅಧೀನವಾಗಿದ್ದವು. ಅವುಗಳ ಅಧಿಕಾರವು ಕೇಂದ್ರ ಸರ್ಕಾರದಿಂದ ಪಡೆದದ್ದಾಗಿತ್ತು. ಆಗಲೇ ಮೊಟ್ಟಮೊದಲ ಬಾರಿಗೆ ಒಂದು ವಾಸ್ತವಿಕವಾದ ಒಕ್ಕೂಟವನ್ನು ರಚಿಸುವ ಪ್ರಶ್ನೆ ಕಾಣಿಸಿಕೊಂಡಿತ್ತು. ಅಂಥ ಒಕ್ಕೂಟದಲ್ಲಿ ಕೇವಲ ವಿವಿಧ ಪ್ರಾಂತಗಳಷ್ಟೇ ಅಲ್ಲ, ಅನೇಕ ರಾಜ್ಯಗಳು ಒಳಗೊಳ್ಳುವಂತಾಯಿತು. 1935ರ ಸಂವಿಧಾನವು ಒಂದು ಒಕ್ಕೂಟಕ್ಕೆ ಅವಕಾಶ ಮಾಡಿಕೊಟ್ಟಿತು. ಅದರಲ್ಲಿ ಕೇಂದ್ರೀಯ ಪ್ರಾಂತಗಳು ಮತ್ತು ವಿವಿಧ ರಾಜ್ಯಗಳು ಸೇರುವಂತೆ ಕೇಳಿಕೊಳ್ಳಲಾಯಿತು. ಆದರೆ ಅದರ ಒಕ್ಕೂಟದ ಸ್ವರೂಪ ಆಚರಣೆಗೆ ಬರಲಿಲ್ಲ. ಯಾಕೆಂದರೆ, ಯಾವ ಷರತ್ತುಗಳ ಮೇಲೆ ಅಳರಸರು ಅದರಲ್ಲಿ ಸೇರಿಕೊಳ್ಳಬೇಕಾಗಿತ್ತೋ ಅವುಗಳನ್ನು ದೀರ್ಘ ಕಾಲದ ಚರ್ಚೆ ಜಿಜ್ಞಾಸೆಯ ನಂತರವೂ ಇತ್ಯರ್ಥಗೊಳಿಸಲು ಸಾಧ್ಯವಾಗಲಿಲ್ಲ. ಆಮೇಲೆ ಯುದ್ಧ ಪ್ರಾರಂಭವಾದಾಗ ಸಂವಿಧಾನದ ಆ ಭಾಗವನ್ನು ವಾಸ್ತವವಾಗಿ ಅನೂರ್ಜಿತಗೊಳಿಸಲಾಯಿತು. ನಮ್ಮ ಪ್ರಸಕ್ತದ ಸಂವಿಧಾನದಲ್ಲಿ ನಮ್ಮ ಭೌಗೋಳಿಕ ಮಿತಿಯೊಳಗಿರುವ ಎಲ್ಲ ರಾಜ್ಯಗಳನ್ನು ಒಟ್ಟಿಗೆ ತರಲು ಸಾಧ್ಯವಾಗಿದೆ. ಅಷ್ಟೇ ಅಲ್ಲ, ಭಾರತದಲ್ಲಿಯ ಹೆಚ್ಚಿನ ರಾಜ್ಯಗಳನ್ನು ಏಕತ್ರಗೊಳಿಸಲು ಸಾಧ್ಯವಾಗಿದೆ. ಈಗ ಅಸ್ತಿತ್ವಕ್ಕೆ ಬಂದಿರುವ ಸಂವಿಧಾನವು ಆಡಳಿತಾತ್ಮಕ ದೃಷ್ಟಿಯಿಂದ ಮತ್ತು ರಾಜ್ಯದ ವಿವಿಧ ಅಂಗಗಳಿಗೆ ಅಧಿಕಾರವನ್ನು ಹಂಚುವ ದೃಷ್ಟಿಯಿಂದ ಈ ಹಿಂದಿನ ಪ್ರಾಂತಗಳು ಹಾಗೂ 'ಭಾರತೀಯ ರಾಜ್ಯ'ಗಳ ನಡುವೆ ಯಾವುದೇ ವ್ಯತ್ಯಾಸವನ್ನು ಮಾಡುವುದಿಲ್ಲ. ಈಗ ಹೆಚ್ಚೂ ಕಡಿಮೆ ಅವೆಲ್ಲವೂ ಒಂದೇ ನೆಲೆಯ ಮೇಲಿವೆ. ಏನಾದರೂ ಚೂರುಪಾರು ಇದ್ದ ವ್ಯತ್ಯಾಸವೂ ಕಾಲ ಕ್ರಮೇಣ ಕಣ್ಮರೆಯಾಗಲಿದೆ. ಆದ್ದರಿಂದ ಸಂವಿಧಾನಕ್ಕೆ ಹಣೆ ಪಟ್ಟಿ ಹಚ್ಚುವ ತೊಂದರೆ ನಾವು ತೆಗೆದುಕೊಳ್ಳಬೇಕಿಲ್ಲ; ಅದಕ್ಕೆ ಯಾವ ಹೆಸರು ಸೂಕ್ತ ಎಂಬ ಸಮಸ್ಯೆ ನಮಗೆ ಕಾಡಬೇಕಿಲ್ಲ.

ನಮ್ಮ ಸಂವಿಧಾನಕ್ಕೆ ಸಂಬಂಧಿಸಿ ಯಾವುದೇ ನಿರೀಕ್ಷಕನ ಗಮನ ಸೆಳೆಯುವ ಮೊದಲನೇ ಅಂಶವೆಂದರೆ, ಅದರಲ್ಲಿ ಅಡಕವಾಗಿರುವ 'ಗಣರಾಜ್ಯ'. ಸುಮಾರು ಎರಡು ಸಾವಿರ ವರ್ಷಗಳ ಹಿಂದೆಯೂ ಭಾರತದಲ್ಲಿ ಗಣರಾಜ್ಯಗಳಿದ್ದವು. ಆದರೆ ಅವು ತೀರಾ ಪ್ರಾಚೀನ ಕಾಲದ ಸಣ್ಣ ಸಣ್ಣ ಗಣರಾಜ್ಯಗಳು. ನಮ್ಮ ಸದ್ಯದ ಗಣರಾಜ್ಯಕ್ಕೆ ಹೋಲಿಸಬಹುದಾದ ಯಾವುದೂ ಈ ಹಿಂದೆ ಅಸ್ತಿತ್ವದಲ್ಲಿರಲಿಲ್ಲ. ಪ್ರಾಚೀನ ಭಾರತದಲ್ಲೂ, ಅಂತೆಯೇ ಮೊಗಲರ ಕಾಲದಲ್ಲಿ, ಭಾರತದ ಬಹುಭಾಗಗಳನ್ನು ಒಳಗೊಂಡಿದ್ದ ಸಾಮ್ರಾಜ್ಯಗಳೇನೋ ಇದ್ದವು. ಆದರೆ ಅವು ಯಾವುವೂ ನಮ್ಮ ಪ್ರಸಕ್ತದ ಗಣರಾಜ್ಯಕ್ಕೆ ಹೋಲಿಕೆಗಳಲ್ಲ. ನಮ್ಮ ಗಣರಾಜ್ಯದ ಅಧ್ಯಕ್ಷ ಒಬ್ಬ ಚುನಾಯಿತ ಅಧ್ಯಕ್ಷನಾಗಿರುತ್ತಾನೆ. ಭಾರತದ ಇಷ್ಟು ವಿಶಾಲ ಪ್ರದೇಶದ ಸರ್ವೋನ್ನತ ಸ್ಥಾನದಲ್ಲಿ ಹಿಂದೆ ಎಂದೂ ಒಬ್ಬ ಚುನಾಯಿತ ಅಧಿಪತಿಯಿರಲಿಲ್ಲ. ಇತಿಹಾಸದಲ್ಲಿಯೇ ಮೊಟ್ಟ ಮೊದಲ ಬಾರಿಗೆ, ಕಟ್ಟಕಡೆಯ ನಾಗರೀಕನೂ ಇಂಥ ಬೃಹತ್ ರಾಷ್ಟ್ರದ ಮುಖ್ಯಸ್ಥನಾಗಬಹುದಾದ ಸಾಧ್ಯತೆ ನಮ್ಮೆದುರು ತೆರೆದುಕೊಳ್ಳಲಿದೆ. ಇದು ಸಾಮಾನ್ಯ ಸಂಗತಿಯೇನಲ್ಲ. ನಾವು ಚುನಾಯಿತ ಅಧ್ಯಕ್ಷನನ್ನು ಹೊಂದಲಿರುವ ಕಾರಣಕ್ಕಾಗಿಯೇ ಕೆಲವು ಅತ್ಯಂತ ಕಠಿಣ ಸಮಸ್ಯೆಗಳು ನಮ್ಮೆದುರು ಉದ್ಭವಿಸಲಿವೆ. ನಾವು ಅಧ್ಯಕ್ಷರ ಚುನಾವಣೆಗೆ ಅವಕಾಶ ಮಾಡಿದ್ದೇವೆ. ಜೊತೆಗೆ ಪರಮಾಧಿಕಾರವುಳ್ಳ ಶಾಸನ

ಸಭೆಯನ್ನು ಚುನಾಯಿಸಲಿದ್ದೇವೆ. ಅಮೇರಿಕೆಯಲ್ಲಿ ಶಾಸನ ಸಭೆ ಮತ್ತು ಅಧ್ಯಕ್ಷರು ಇಬ್ಬರನ್ನೂ ಚುನಾಯಿಸಲಾಗುವುದು. ಹೆಚ್ಚುಕಡಿಮೆ ಇಬ್ಬರಿಗೂ ತಂತಮ್ಮ ಕ್ಷೇತ್ರದಲ್ಲಿ ಸಮಾನ ಅಧಿಕಾರವುಂಟು. ಅಂದರೆ, ಕಾರ್ಯಾಂಗದಲ್ಲಿ ಅಧ್ಯಕ್ಷನಿಗೆ ಪರಮಾಧಿಕಾರವಿದ್ದರೆ, ಶಾಸಕಾಂಗದಲ್ಲಿ ಶಾಸನ ಸಭೆಗೆ ಸರ್ವೋಚ್ಚ ಅಧಿಕಾರವಿದೆ.

ನಾವು ಅಮೇರಿಕೆಯ ಮಾದರಿಯನ್ನನುಸರಿಸಬೇಕೇ ಅಥವಾ ಬ್ರಿಟಿಷ್ ಮಾದರಿಯನ್ನು ಸ್ವೀಕರಿಸಬೇಕೇ ಎಂಬ ಜಿಜ್ಞಾಸೆ ನಡೆಸಿದೆವು. ಇಂಗ್ಲೆಂಡಿನ ಮಾದರಿಯಲ್ಲಿ ಅನುವಂಶಿಕ ಅಧಿಕಾರದ ರಾಜನಿರುತ್ತಾನೆ. ಅವನು ಎಲ್ಲಾ ಗೌರವ ಮತ್ತು ಅಧಿಕಾರದ ಮೂಲನೂ ಹೌದು. ಆದರೆ ವಾಸ್ತವಿಕವಾಗಿ ಅವನಿಗೆ ಯಾವುದೇ ಅಧಿಕಾರವಿಲ್ಲ. ಎಲ್ಲಾ ಅಧಿಕಾರವೂ ಮಂತ್ರಿಗಳು ಜವಾಬ್ದಾರರಾಗಿರುವ ಶಾಸನ ಸಭೆಯ ಕೈಯಲ್ಲಿಯೇ ಕೇಂದ್ರೀಕೃತವಾಗಿದೆ. ಚುನಾಯಿತ ಶಾಸನ ಸಭೆಯ ಜೊತೆಗೆ ಚುನಾಯಿತ ಅಧ್ಯಕ್ಷನ ಸ್ಥಾನಮಾನ ಕುರಿತು ನಾವು ಪುನರ್ ಪರಿಶೀಲನೆ ನಡೆಸಬೇಕಾಯಿತು. ಹಾಗೆ ಮಾಡುವ ಮೂಲಕ ನಾವು ಹೆಚ್ಚೂ ಕಡಿಮೆ ಬ್ರಿಟಿಷ್ ರಾಜನ ಸ್ಥಾನವನ್ನೇ ನಮ್ಮ ಅಧ್ಯಕ್ಷರಿಗೆ ಕಲ್ಪಿಸಿಕೊಟ್ಟಿದ್ದೇವೆ. ಇದು ತೃಪ್ತಿದಾಯಕವಿರಬಹುದು ಅಥವಾ ಇರಲಿಕ್ಕಿಲ್ಲ. ಕೆಲವು ಜನರ ಪ್ರಕಾರ ಅಧ್ಯಕ್ಷರಿಗೆ ಅನಾವಶ್ಯಕ ಹೆಚ್ಚಿನ ಅಧಿಕಾರ ಕೊಡಲಾಗಿದೆ. ಇನ್ನು ಕೆಲವರ ಪ್ರಕಾರ ಅಧ್ಯಕ್ಷ ಚುನಾಯಿತನಾಗಿರುವುದರಿಂದ ಅವನಿಗೆ ಈಗಿದ್ದುದಕ್ಕಿಂತಲೂ ಹೆಚ್ಚಿನ ಅಧಿಕಾರ ಕೊಡಬೇಕಾಗಿತ್ತು.

ಸಂಸತ್ತು ಮತ್ತು ಅಧ್ಯಕ್ಷರನ್ನು ಚುನಾಯಿಸುವ ಮತದಾರರ ದೃಷ್ಟಿಯಿಂದ ನೋಡಿದರೆ, ದೇಶದ ಇಡೀ ವಯಸ್ಕ ಜನತೆ ಸಂಸತ್ತನ್ನು ಚುನಾಯಿಸುವಲ್ಲಿ ಸಕ್ರಿಯ ಪಾತ್ರವಹಿಸುತ್ತದೆ. ಇನ್ನು ಅಧ್ಯಕ್ಷರ ಚುನಾವಣೆಯಲ್ಲಿ ಸಂಸತ್ ಸದಸ್ಯರಷ್ಟೇ ಅಲ್ಲ, ರಾಜ್ಯಗಳ ಶಾಸನ ಸಭೆಗಳ ಸದಸ್ಯರೂ ಪಾಲ್ಗೊಳ್ಳುತ್ತಾರೆ. ಈ ರೀತಿಯಾಗಿ, ಸಂಸತ್ತು ಮತ್ತು ಶಾಸನ ಸಭೆಯ ಸದಸ್ಯರನ್ನು ದೇಶದ ಸಮಗ್ರ ವಯಸ್ಕ ಮತದಾರರು ಚುನಾಯಿಸಿದರೆ, ಹೀಗೆ ಚುನಾಯಿತರಾದ ಸದಸ್ಯರು (ಸಮಗ್ರ ಜನತೆಯನ್ನು ಎರಡು ಸಲ ಪ್ರತಿನಿಧಿಸುವ ಅವರು) ಅಧ್ಯಕ್ಷರನ್ನು ಚುನಾಯಿಸುತ್ತಾರೆ. ಅಧ್ಯಕ್ಷರನ್ನು ಚುನಾಯಿಸುವಲ್ಲಿ ಕೇಂದ್ರ ಮತ್ತು ಶಾಸನ ಸಭೆಯ ಸದಸ್ಯರು ಪಾಲ್ಗೊಳ್ಳುವರಾದರೂ ಹಾಗೆ ಚುನಾಯಿತರಾದ ಅಧ್ಯಕ್ಷರು 'ಸಂವಿಧಾನಿಕ ಅಧ್ಯಕ್ಷ, ಮಾತ್ರ ಆಗಿರುತ್ತಾರೆ.

ಇನ್ನು ಸಚಿವರ ಬಗ್ಗೆ ಒಂದೆರಡು ಮಾತು. ಅವರು ಸಹಜವಾಗಿಯೇ ಶಾಸನ ಸಭೆಗೆ ಜವಾಬ್ದಾರರಾಗಿರುತ್ತಾರೆ. ಜೊತೆಗೆ ಅಧ್ಯಕ್ಷರಿಗೆ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಅಧ್ಯಕ್ಷರು ಅವುಗಳಿಗನುಗುಣವಾಗಿ ನಡೆದುಕೊಳ್ಳಲು ಬದ್ಧರಾಗಿರುತ್ತಾರೆ. ಮಂತ್ರಿಗಳು ನೀಡುವ ಸಲಹೆಗಳನ್ನು ಸ್ವೀಕರಿಸಲೇಬೇಕೆಂದು ಅಧ್ಯಕ್ಷರ ಮೇಲೆ ನಿಬಂಧನೆ ಹೇರುವ ವಿಧಿಗಳ್ಯಾವುವೂ ನನಗೆ ಗೊತ್ತಿದ್ದ ಮಟ್ಟಿಗೆ ಸಂವಿಧಾನದಲ್ಲಿಲ್ಲ. ಆದರೂ ಇಂಗ್ಲೆಂಡಿನ ರಾಜನು ಸಚಿವರ ಸಲಹೆಗಳಿಗನುಗುಣವಾಗಿ ನಡೆದುಕೊಳ್ಳುವ ಸಂಪ್ರದಾಯವಿರುವಂತೆ ನಮ್ಮ ದೇಶದಲ್ಲಿಯೂ ಅಧ್ಯಕ್ಷರು ಅಂಥ ಸಂಪ್ರದಾಯಕ್ಕೆ ಅನುವು ಮಾಡಿಕೊಡುತ್ತಾರೆಂದು ಆಶಿಸಲಾಗಿದೆ. ಹಾಗೆಂದು ಸಂವಿಧಾನದಲ್ಲಿ ಬರೆಯಲಾಗಿದೆಯೆಂಬ ಕಾರಣಕ್ಕಾಗಿ ಅಲ್ಲ. ಪ್ರತಿಯಾಗಿ, ಒಂದು ಆರೋಗ್ಯಪೂರ್ಣ ಸತ್‌ಸಂಪ್ರದಾಯಕ್ಕೆ ಅನುಗುಣವಾಗಿ ಅಧ್ಯಕ್ಷರು ಎಲ್ಲ ವಿಷಯಗಳಲ್ಲಿಯೂ ಸಂವಿಧಾನಿಕ ಅಧ್ಯಕ್ಷರಾಗಿ ನಡೆದುಕೊಳ್ಳುವರು.

ಕೇಂದ್ರೀಯ ಸಂಸತ್ತಿನಲ್ಲಿ ಎರಡು ಸದನಗಳಿರುತ್ತವೆ. ಒಂದು, ಲೋಕಸಭೆ; ಎರಡನೆಯದು, ರಾಜ್ಯಸಭೆ. ಇವೆರಡೂ ಒಟ್ಟಿಗೇ ಭಾರತದ ಸಂಸತ್ತಾಗಿ ಕೆಲಸ ನಿರ್ವಹಿಸುತ್ತವೆ. ಇನ್ನು ಪ್ರಾಂತ ಅಥವಾ ರಾಜ್ಯಗಳೆಂದು ಈಗ ಕರೆಯಲ್ಪಡುತ್ತಿರುವ ಪ್ರದೇಶಗಳಲ್ಲಿ (ಒಂದನೆಯ ಪರಿಶಿಷ್ಟದಲ್ಲಿಯ 'ಸಿ' ಮತ್ತು 'ಡಿ' ಭಾಗಗಳಲ್ಲಿ ಕಾಣಿಸಲಾದವುಗಳನ್ನು ಹೊರತುಪಡಿಸಿ) ಒಂದೊಂದು ಶಾಸನ ಸಭೆಗಳಿರುತ್ತವೆ. ಆದರೆ ಈ ಎಲ್ಲಾ ರಾಜ್ಯಗಳಲ್ಲಿ ಒಂದೊಂದು ದ್ವಿತೀಯ ಸದನ ಇರುವುದಿಲ್ಲ. ಯಾವ ರಾಜ್ಯಗಳ ಪ್ರತಿನಿಧಿಗಳಿಗೆ ತಮಗೊಂದು ದ್ವಿತೀಯ ಸದನದ ಅವಶ್ಯಕತೆ ಎನಿಸುತ್ತದೆಯೋ ಅವರು ಅದನ್ನು ರೂಪಿಸಿಕೊಳ್ಳಬಹುದು. ಈ ಕುರಿತು ಸಂವಿಧಾನದಲ್ಲಿ ಅವಕಾಶ ಕಲ್ಪಿಸಿಕೊಡಲಾಗಿದೆ. ಹಾಗೆಯೇ ಯಾರು ತಮಗೆ ದ್ವಿತೀಯ ಸದನದ ಅವಶ್ಯಕತೆ ಇದೆ ಇಲ್ಲವೆಂದು ಭಾವಿಸುವರೋ ಅಂಥವರು ಶಾಸನಸಭೆಯ 2/3ನೇ ಭಾಗದ ಸದಸ್ಯರ ಬಹುಮತದಿಂದ ಅದನ್ನು ತೆಗೆದು ಹಾಕಬಹುದು. ಈ ರೀತಿಯಾಗಿ, ನಾವು ಕೆಲವು ಶಾಸನ ಸಭೆಗಳಿಗೆ ದ್ವಿತೀಯ ಸದನವನ್ನು ಕಲ್ಪಿಸಿಕೊಡುವುದರ ಜೊತೆಗೆ, ಅವು ಬೇಡವಾದಾಗ ರದ್ದುಪಡಿಸುವ, ದ್ವಿತೀಯ ಸದನಗಳಿಲ್ಲದ ಶಾಸನ ಸಭೆಗಳು ತಮಗೆ ಬೇಕೆನಿಸಿದಾಗ ಅದನ್ನು ಸಂಸ್ಥಾಪಿಸಿಕೊಳ್ಳುವ, ಸರಳ ವಿಧಾನವನ್ನು ಕಲ್ಪಿಸಿಕೊಟ್ಟಿದ್ದೇವೆ. ಇದಕ್ಕೆ ಸರಳವೆಂದು ಕರೆಯೋದಕ್ಕೆ ಕಾರಣ: ಈ ಯಾವ ಸಂದರ್ಭದಲ್ಲಿಯೂ ನಾವು ಸಂವಿಧಾನಕ್ಕೆ ತಿದ್ದುಪಡಿ ತರುವ ಅವಶ್ಯಕತೆಯಿರುವುದಿಲ್ಲ. ಬದಲಾಗಿ, ಸಂಸದೀಯ ಶಾಸನ ಸಭೆಯಲ್ಲಿ ಒಂದು ಸಾಮಾನ್ಯ ಪ್ರಕ್ರಿಯೆ ಕೈಗೊಳ್ಳುವ ಮೂಲಕ ಅದನ್ನು ಸಾಧಿಸಬಹುದು.

ರಾಜ್ಯಗಳಲ್ಲಿಯ ಶಾಸನ ಸಭೆಯ ಸದಸ್ಯರನ್ನು ಮತ್ತು ಕೇಂದ್ರದ ಲೋಕಸಭೆಯ ಸದಸ್ಯರನ್ನು ಚುನಾಯಿಸಲು ನಾವು ವಯಸ್ಕ ಮತದಾನ ಪದ್ಧತಿಯನ್ನು ಅಳವಡಿಸಿದ್ದೇವೆ. ಇದು ನಾವು ತೆಗೆದುಕೊಂಡಿರುವ ಅತ್ಯಂತ ದೊಡ್ಡ ಹೆಜ್ಜೆಯಾಗಿದೆ. ಇದು ದೊಡ್ಡ ಹೆಜ್ಜೆ ಎಂದು ಹೇಳಲು ಕಾರಣ, ನಮ್ಮ ಸದ್ಯದ ಮತದಾರರ ಸಂಖ್ಯೆ ತೀರಾ ಸಣ್ಣದಿರುವುದಷ್ಟೇ ಅಲ್ಲ, ಅದು ಹೆಚ್ಚಾಗಿ ಆಸ್ತಿ ಅರ್ಹತೆಯನ್ನು ಅವಲಂಬಿಸಿದೆ. ಆದರೆ ಈಗ ನಾವು ತೆಗೆದುಕೊಂಡಿರುವ ಹೆಜ್ಜೆಯ ಮೂಲಕ ಅಸ್ತಿತ್ವಕ್ಕೆ ಬಂದಿರುವ ಮತದಾರರ ಸಂಖ್ಯೆ ತುಂಬಾ ದೊಡ್ಡದು. ಸದ್ಯ ನಮ್ಮ ಜನಸಂಖ್ಯೆ 320 ಮಿಲಿಯನ್ನಿನ ಆಸುಪಾಸುಯಿದೆ. ಮತದಾರರ ಪಟ್ಟಿ ತಯಾರಿಸುತ್ತಿರುವ ಈ ಸಂದರ್ಭದ ಅನುಭವದಿಂದ ನಮಗೆ ಗೊತ್ತಾದದ್ದೇನೆಂದರೆ, ಒಟ್ಟು ಜನಸಂಖ್ಯೆಯ ಸುಮಾರು ಅರ್ಧದಷ್ಟು ಜನರು ವಯಸ್ಕರಾಗಿದ್ದಾರೆ. ಈ ಆಧಾರದ ಮೇಲೆ ಸುಮಾರು 160 ಮಿಲಿಯನ್‌ದಷ್ಟುಮತದಾರರು ಮತ ಚಲಾಯಿಸಲಿದ್ದಾರೆ. ಇಷ್ಟು ಬೃಹತ್ ಸಂಖ್ಯೆಯ ಜನರನ್ನೊಳಗೊಂಡ ಚುನಾವಣೆಯನ್ನು ಸಂಘಟಿಸುವುದು ಒಂದು ಮಹತ್ತರ ಕೆಲಸವಾಗಿದೆ. ಮೇಲಾಗಿ, ಇಷ್ಟು ದೊಡ್ಡ ಸಂಖ್ಯೆಯ ಜನರಿಗೆ ಚುನಾವಣೆ ನಡೆಸಿರುವ ಮತ್ತೊಂದು ರಾಷ್ಟ್ರ ಜಗತ್ತಿನಲ್ಲಿಯೇ ಬೇರೊಂದಿಲ್ಲ.

ಇದೀಗ ನಾನು ಇದಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ನಿಮ್ಮ ಮುಂದೆ ಮಂಡಿಸಲಿದ್ದೇನೆ. ವಿವಿಧ ಪ್ರಾಂತಗಳಲ್ಲಿಯ ಶಾಸನಸಭೆಗಳು ಒಟ್ಟು ಮೂರು ಸಾವಿರದ ಎಂಟುನೂರು ಶಾಸಕರನ್ನು ಚುನಾಯಿಸಿಕೊಳ್ಳಲಿವೆ. ಕೇಂದ್ರ ಸಂಸತ್ತಿನಲ್ಲಿ ಐದುನೂರು ಲೋಕ ಸಭಾ ಸದಸ್ಯರೂ, ಎರಡುನೂರ ಇಪ್ಪತ್ತು ರಾಜ್ಯ ಸಭಾ ಸದಸ್ಯರೂ, ಚುನಾಯಿತರಾಗಿ ಬರಲಿದ್ದಾರೆ. ಹೀಗಾಗಿ, ನಾವು ಒಟ್ಟು 4500 ಸದಸ್ಯರನ್ನು ಚುನಾಯಿಸಿಕೊಳ್ಳಲಿದ್ದೇವೆ. ಮತ್ತು ಇದಕ್ಕಾಗಿ ಇಡೀ ರಾಷ್ಟ್ರವನ್ನು ಸುಮಾರು 4000 ಮತ ಕ್ಷೇತ್ರಗಳನ್ನಾಗಿ ವಿಭಾಗಿಸಲಿದ್ದೇವೆ. ನಾನು ಮೊನ್ನೆ ಸುಮ್ಮನೆ ವಿನೋದಕ್ಕಾಗಿ ನಮ್ಮ

ಮತದಾರರ ಪಟ್ಟಿಯ ರೂಪರೇಷೆ, ಗಾತ್ರದ ಬಗ್ಗೆ ಮನದಲ್ಲಿಯೇ ಲೆಕ್ಕ ಹಾಕುತ್ತಿದ್ದೆ. ಒಂದು ಫೂಲ್ ಸ್ಕೇಪ್ ಸೈಜಿನ ಪುಟದ ಮೇಲೆ ನಲ್ವತ್ತು ಹೆಸರುಗಳನ್ನು ಮುದ್ರಿಸುತ್ತಾ ಹೋದರೆ ಇಡೀ ಮತದಾರರ ಪಟ್ಟಿಗೆ ಸುಮಾರು 40 ಲಕ್ಷ ಹಾಳೆಗಳು ಬೇಕಾಗಬಹುದು. ಈ ಎಲ್ಲಾ ಹಾಳೆಗಳನ್ನು ಒಂದು ಸಂಪುಟವನ್ನಾಗಿ ರಚಿಸಿದರೆ ಆ ಸಂಪುಟದ ದಪ್ಪಳತೆ ಎರಡುನೂರು ಗಜಗಳಿಗೂ ಹೆಚ್ಚು ಎತ್ತರವಾಗುತ್ತದೆ. ಇದು ಮತದಾರರ ಪಟ್ಟಿಯನ್ನು ತಯಾರಿಸುವ, ಮತಕ್ಷೇತ್ರಗಳನ್ನು ನಿರೂಪಿಸುವ, ಮತಗಟ್ಟೆಗಳನ್ನು ನಿರ್ದಿಷ್ಟಪಡಿಸುವ ಮತ್ತು ಇತರ ಕಾರ್ಯಭಾರದ ಬೃಹತ್ತು ಮತ್ತು ಮಹತ್ತು ಎರಡನ್ನೂ ಸೂಚಿಸುತ್ತದೆಂದು ಭಾವಿಸುತ್ತೇನೆ. ಇಷ್ಟೆಲ್ಲಾ ಕೆಲಸವನ್ನು ನಾವು 1950-51ರ ಚಳಿಗಾಲದ ಮುಂಚೆಯೇ ಮಾಡಿ ಮುಗಿಸಬೇಕಿದೆ. ಯಾಕೆಂದರೆ, ಅಷ್ಟೊತ್ತಿಗೇ ನಮ್ಮ ಪ್ರಥಮ ಚುನಾವಣೆಗಳನ್ನು ನಡೆಸಲು ಆಶಿಸಲಾಗಿದೆ.

ವಯಸ್ಕ ಮತದಾನ ಪದ್ಧತಿಯನ್ನು ಅಳವಡಿಸಿದ್ದರ ವಿವೇಕವನ್ನು ಕೆಲವು ಜನರು ಸಂಶಯದಿಂದ ನೋಡುತ್ತಿದ್ದಾರೆ. ವೈಯಕ್ತಿಕವಾಗಿ ನಾನು ಅದನ್ನೊಂದು ಪ್ರಯೋಗವೆಂದೇ ಭಾವಿಸಿದ್ದೇನೆ. ಅದರ ಫಲಾಫಲ ಕುರಿತು ಇವತ್ತೇ ಮುಂಗಾಣಲು ಯಾರಿಂದಲೂ ಸಾಧ್ಯವಿಲ್ಲ. ಆದರೂ ಅದರಿಂದ ನನಗೆ ಖೇದವೇನೂ ಇಲ್ಲ. ನನ್ನ ಬದುಕಿನ ಬಹುಭಾಗ ನಗರಗಳಲ್ಲಿಯೇ ಕಳೆಯುವ ಅನಿವಾರ್ಯತೆಯುಂಟಾಗಿದ್ದರೂ, ನಾನು ಇವೊತ್ತಿಗೂ ಹಳ್ಳಿಯವನೇ. ನನ್ನ ಕೆಲಸ ಕಾರ್ಯಗಳು ನಗರಕ್ಕೆ ಸೀಮಿತವಾಗಿದ್ದರೂ ನನ್ನ ಬೇರುಗಳು ಇನ್ನೂ ಹಳ್ಳಿಯಲ್ಲಿಯೇ ಇವೆ. ನಮ್ಮ ಮತದಾರರ ಹೆಚ್ಚಿನ ಭಾಗವಾಗಿರುವ ಈ ಹಳ್ಳಿಗರನ್ನು ನಾನು ಚೆನ್ನಾಗಿ ಬಲ್ಲೆ. ನನ್ನ ಅಭಿಪ್ರಾಯದಲ್ಲಿ ಅವರು ತುಂಬಾ ಜಾಣರು, ಸದಸದ್ವಿವೇಕದ ಸಾಕಾರರು. ನಮ್ಮ ಇಂದಿನ ನಗರ ವಾಸಿಗಳು ಸಹಜವಾಗಿ ಮೆಚ್ಚಲಾಗದ ಸಂಸ್ಕೃತಿ ಈ ಗ್ರಾಮಾಂತರ ಜನತೆಯದು. ನಗರದ ನಯ, ನಾಜೂಕು ಆ ಹಳ್ಳಿಗರಲ್ಲಿ ಇರಲಿಕ್ಕಿಲ್ಲ. ಆದರೆ ಅವರದು ಘನವಾದ ಸಂಸ್ಕೃತಿಯೆಂಬುದರಲ್ಲಿ ಎರಡು ಮಾತಿಲ್ಲ. ಗ್ರಾಮೀಣರು ಅನಕ್ಷರಸ್ಥರು. ಅವರಿಗೆ ಓದುವ, ಬರೆಯುವ ಯಾಂತ್ರಿಕ ಕೌಶಲ್ಯ ಕರಗತವಾಗಿಲ್ಲ. ಆದರೆ ಅವರಿಗೆ ತಮ್ಮ ಹಿತಾಹಿತದ ಪ್ರಜ್ಞೆಯಿದೆ. ಅಂತೆಯೇ ರಾಷ್ಟ್ರದ ಹಿತಾಹಿತದ ಕುರಿತು ಸಾರಾಸಾರ ವಿವೇಚಿಸಿಯೇ ಕ್ರಮ ಕೈಗೊಳ್ಳುತ್ತಾರೆಂಬ ವಿಶ್ವಾಸ ನನಗಿದೆ. ಅವರಿಗೆ ವಿಷಯವನ್ನು ವಿವರಿಸಿ ಹೇಳಿದರೆ ಸಾಕು, ಎಲ್ಲವನ್ನೂ ಆಮೂಲಾಗ್ರವಾಗಿ ಗ್ರಹಿಸುವ ಶಕ್ತಿ ಅವರಿಗಿದೆ. ವಾಸ್ತವವಾಗಿ, ಅವರು ಫ್ಯಾಕ್ಟರಿ ಕಾರ್ಮಿಕರಿಗಿಂತಲೂ ಹಲವು ವಿಧದಲ್ಲಿ ಹೆಚ್ಚು ಜಾಣರಾಗಿದ್ದಾರೆ. ಕಾರ್ಖಾನೆಯಲ್ಲಿಯಾದರೋ ಕಾರ್ಮಿಕರು ಯಂತ್ರದ ಜೊತೆ ದುಡಿಯುತ್ತಾ ದುಡಿಯುತ್ತ, ಹೆಚ್ಚು ಕಡಿಮೆ ಅದರ ಒಂದು ಭಾಗವೇ ಆಗಿಬಿಡುತ್ತಾರೆ. ಪರಿಣಾಮವಾಗಿ, ಅವರ ವ್ಯಕ್ತಿತ್ವ ಅಳಿದು ಹೋಗುತ್ತದೆ. ಆದ್ದರಿಂದ, ಸರಿಯಾಗಿ ವಿವರಿಸಿ ಹೇಳಿದರೆ ಸಾಕು, ಗ್ರಾಮಾಂತರ ಪ್ರದೇಶದ ಬೃಹತ್ ಸಂಖ್ಯೆಯ ಮತದಾರರೆಲ್ಲರೂ ಚುನಾವಣೆಯ ತಂತ್ರವನ್ನು ಬಹು ಸುಲಭವಾಗಿ ಮನೋಗತ ಮಾಡಿಕೊಳ್ಳಬಲ್ಲರೆಂಬ ನಂಬುಗೆ ನನಗಿದೆ. ಅವರು ತಮ್ಮ ಜಾಣತನವನ್ನು ಬಳಸಿ, ಸೂಕ್ತ ರೀತಿಯಲ್ಲಿ ಮತ ಚಲಾಯಿಸಬಲ್ಲರೆಂಬುದರಲ್ಲಿ ಯಾವುದೇ ಸಂಶಯವಿಲ್ಲ. ಆದರೆ ಇದೇ ಮಾತನ್ನು ಕೆಲವು ಘೋಷಣೆಗಳ ಮೂಲಕ ದಾರಿತಪ್ಪಿಸಲು ಪ್ರಯತ್ನಿಸುವವರ ಬಗ್ಗೆ ಹೇಳುವಂತಿಲ್ಲ. ಅವರು ಅಮಾಯಕರ ಮುಂದೆ ಸುಂದರವಾದ ಆದರೆ ಕಾರ್ಯಸಾಧುವಲ್ಲದ ಕಾರ್ಯಕ್ರಮಗಳನ್ನು

ಪ್ರಸ್ತಾಪಿಸುತ್ತಾರೆ; ಕನಸುಗಳನ್ನು ಬಿತ್ತುತ್ತಾರೆ. ಆದಾಗ್ಯೂ ಗ್ರಾಮೀಣರು ತಮ್ಮ ಹರಿತ ಬುದ್ಧಿಯಿಂದ ಇದೆಲ್ಲವನ್ನೂ ಭೇದಿಸಿ, ನಿಜವನ್ನರಿಯುವ ಸಾಮರ್ಥ್ಯ ಪಡೆದಿದ್ದಾರೆ ಎಂದು ನನಗನಿಸುತ್ತದೆ. ಆದ್ದರಿಂದ ನಮ್ಮ ಚುನಾಯಿತ ಸದಸ್ಯರು ವಾಸ್ತವದ ಮೇಲೆ ಗಟ್ಟಿಯಾಗಿ ನಿಂತು ಸತ್ಯಾಸತ್ಯತೆಯ ಪ್ರಜ್ಞೆಯಿಂದ ತೀರ್ಮಾನಗಳನ್ನು ತೆಗೆದುಕೊಳ್ಳಬಲ್ಲರೆಂದು ಆಶಿಸಬಹುದು.

ಸಂಸತ್ತಿನಲ್ಲಿ ಮತ್ತು ಕೆಲವು ರಾಜ್ಯಗಳ ಶಾಸನ ಸಭೆಗಳಲ್ಲಿ ದ್ವಿತೀಯ ಸದನಗಳು ಅಸ್ತಿತ್ವದಲ್ಲಿರಲು ಅವಕಾಶವಿದೆಯಾದರೂ ನೇರವಾಗಿ ಜನತೆಯಿಂದ ಚುನಾಯಿತವಾದ ಲೋಕಸಭೆ ಮತ್ತು ಶಾಸನ ಸಭೆಗಳೇ ಪರಮಾಧಿಕಾರವುಳ್ಳವುಗಳಾಗಿರುತ್ತವೆ. ಹಣಕಾಸಿನ ವಿಷಯದಲ್ಲಿ ಲೋಕಸಭೆ ಮತ್ತು ಶಾಸನ ಸಭೆಗಳಿಗೆ ಸರ್ವೋನ್ನತಧಿಕಾರ ಇರುತ್ತದೆಂದು ಅನೇಕ ಶಬ್ದಗಳಲ್ಲಿ ಸ್ಪಷ್ಟವಾಗಿಯೇ ನಿರೂಪಿಸಲಾಗಿದೆ. ಇನ್ನಿತರ ಎಷ್ಟೋ ವಿಷಯಗಳಲ್ಲಿ ಕಾರ್ಯವನ್ನು ರೂಪಿಸುವ, ಅವುಗಳನ್ನು ಪಾಸು ಮಾಡುವ ವಿಷಯ ಕುರಿತಂತೆ ಮೇಲ್ಮನೆಗೆ ಸಮಾನ ಅಧಿಕಾರಗಳಿದ್ದರೂ, ಅಂತಿಮ ವಿಶ್ಲೇಷಣೆಯಲ್ಲಿ ಲೋಕಸಭೆಯೇ ಪರಮಾಧಿಕಾರವುಳ್ಳದ್ದಾಗಿರುತ್ತದೆ. ಸಂಸತ್ತಿಗೆ ಸಂಬಂಧಿಸಿ ಹೇಳುವುದಾದರೆ, ಯಾವುದೇ ಒಂದು ವಿಷಯ ಕುರಿತು ಎರಡೂ ಸದನಗಳ ನಡುವೆ ಭಿನ್ನಾಭಿಪ್ರಾಯ ಕಾಣಿಸಿಕೊಂಡಾಗ, ಒಂದು ಸಂಯುಕ್ತ ಅಧಿವೇಶನವನ್ನು ಕರೆಯಬಹುದು. ಆದರೆ ಇಂಥ ಸಂದರ್ಭದಲ್ಲಿ ರಾಜ್ಯಸಭೆ ಅಥವಾ ವಿಧಾನ ಪರಿಷತ್ತುಗಳ ಸದಸ್ಯರ ಸಂಖ್ಯೆ ಕ್ರಮವಾಗಿ ಲೋಕಸಭೆ ಅಥವಾ ಶಾಸನ ಸಭೆಯ ಸದಸ್ಯರ ಸಂಖ್ಯೆಯ ಅರ್ಧಕ್ಕಿಂತ ಹೆಚ್ಚಾಗಿರಕೂಡದೆಂದು ಸಂವಿಧಾನ ವಿಧಿಸುತ್ತದೆ. ಆದ್ದರಿಂದ ಸಂಯುಕ್ತ ಅಧಿವೇಶನದ ಸಂದರ್ಭದಲ್ಲಿಯೂ ಲೋಕಸಭೆ ಮತ್ತು ಶಾಸನಸಭೆಗಳ ಪರಮಾಧಿಕಾರವನ್ನು ಕಾಯ್ದುಕೊಳ್ಳಲು ಯೋಜಿಸಲಾಗಿದೆ. ಪ್ರಾಂತೀಯ ಶಾಸನಸಭೆಗಳಲ್ಲಿ ಕೆಳಮನೆಯ ನಿರ್ಧಾರಗಳೇ ಅಂತಿಮವಾಗಿರುತ್ತವೆ. ಒಂದುವೇಳೆ ಅವುಗಳನ್ನು ಪ್ರಶ್ನಿಸಿದಲ್ಲಿ, ಎರಡನೆಯ ಸಲಕ್ಕೆ ತೆಗೆದುಕೊಂಡ ತೀರ್ಮಾನ ಅಂತಿಮವಾಗಿರುತ್ತದೆ. ಆದ್ದರಿಂದ ಮೇಲ್ಮನೆಯು ಒಂದು ವಿಧೇಯಕದ ದಾರಿಯಲ್ಲಿ ಅಡಚಣೆಯುಂಟುಮಾಡಿ ವಿಳಂಬ ಮಾಡಬಹುದೇ ವಿನಾಃ ಅದನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯವಿಲ್ಲ. ಅಧ್ಯಕ್ಷರು ಅಥವಾ ರಾಜ್ಯಪಾಲರು ಯಾವುದೇ ಶಾಸನಕ್ಕೆ ತಮ್ಮ ಸಮ್ಮತಿಯನ್ನು ಸೂಚಿಸಲೇಬೇಕಾಗುತ್ತದೆ. ಆದರೆ ಸಚಿವ ಸಂಪುಟದ ಸಲಹೆಗನುಗುಣವಾಗಿಯೇ ಅವರು ನಡೆದುಕೊಳ್ಳಬೇಕಾಗುತ್ತದೆ. ಸಚಿವ ಸಂಪುಟವು ಅಂತಿಮವಾಗಿ ಲೋಕಸಭೆ ಅಥವಾ ಶಾಸನಸಭೆಗೆ ಜವಾಬ್ದಾರಿಯಾಗಿರುತ್ತದೆ. ಈ ರೀತಿಯಾಗಿ, ತಮ್ಮ ಪ್ರತಿನಿಧಿಗಳ ಮೂಲಕ ಅಭಿವ್ಯಕ್ತಿಸಲ್ಪಡುವ ಜನತೆಯ ಅಭಿಲಾಷೆಯೇ ಲೋಕಸಭೆ ಅಥವಾ ಶಾಸನ ಸಭೆಗಳಲ್ಲಿ ಅಂತಿಮವಾಗಿ ಎಲ್ಲ ವಿಷಯಗಳನ್ನು ನಿರ್ಧರಿಸುತ್ತದೆ. ದ್ವಿತೀಯ ಸದನ ಮತ್ತು ಅಧ್ಯಕ್ಷರು ಅಥವಾ ರಾಜ್ಯಪಾಲರು ಯಾವುದೇ ಒಂದು ವಿಷಯ ಕುರಿತು ಪುನರ್ ಪರಿಶೀಲಿಸಲು ಸೂಚಿಸಬಹುದು ಮತ್ತು ಅದನ್ನು ಕೆಲಕಾಲದವರೆಗೆ ವಿಳಂಬಿಸಬಹುದು. ಆದರೆ ಲೋಕಸಭೆ ಅಥವಾ ಶಾಸನ ಸಭೆಯು ದೃಢ ನಿರ್ಧಾರಿತವಾಗಿದ್ದರೆ, ಅದು ಸಂವಿಧಾನದ ಅಡಿಯಲ್ಲಿ ನಿರಾತಂಕವಾಗಿ ಮುನ್ನಡೆಯಬಲ್ಲದು. ಆದ್ದರಿಂದ ಕೇಂದ್ರ ಸರ್ಕಾರವಾಗಲೀ ಅಥವಾ ವಿವಿಧ ಪ್ರಾಂತ್ಯಗಳಲ್ಲಿಯ ರಾಜ್ಯ ಸರ್ಕಾರಗಳಾಗಲೀ ಪ್ರತಿನಿಧಿಗಳ ಮೂಲಕ ಜನತೆಯ ಅಭಿಲಾಷೆಯ ಮೇಲೆಯೇ ಅವಲಂಬಿಸಿರುತ್ತವೆ. ಚುನಾವಣೆಯ ಸಂದರ್ಭದಲ್ಲಿ ಇಡೀ ಲೋಕಸಭೆ ಅಥವಾ ಶಾಸನ ಸಭೆ ನೇರವಾಗಿ ಜನತೆಯಿಂದಲೇ ಪ್ರತಿನಿಧಿಸಲ್ಪಡುತ್ತದೆ.

ನಮ್ಮ ಸಂವಿಧಾನದಲ್ಲಿ ನಾವು ಒಂದು ಸ್ವತಂತ್ರವಾದ ನ್ಯಾಯಾಂಗ ವ್ಯವಸ್ಥೆಗೆ ಅವಕಾಶ ಮಾಡಿಕೊಟ್ಟಿದ್ದೇವೆ. ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯಗಳು ಕಾರ್ಯಾಂಗ ಪ್ರಭಾವಕ್ಕೆ ಒಳಗಾಗದೆ ಸ್ವತಂತ್ರವಾಗಿರುವಂತೆ ನೋಡಿಕೊಳ್ಳಲು ಸರ್ವ ಪ್ರಯತ್ನಗಳನ್ನು ಮಾಡಲಾಗಿದೆ. ಇದಕ್ಕಿಂತ ಹೆಚ್ಚಿಗೆ ಏನೂ ಮಾಡಲೂ ಸಾಧ್ಯವಿಲ್ಲ. ಕೆಳ ಹಂತದ ನ್ಯಾಯಾಲಯಗಳು ತಮ್ಮ ಹೊರಗಿನ ಯಾವುದೇ ಪ್ರಭಾವ ದಬಾವುಗಳಿಗೆ ಒಳಗಾಗದೆ ಸ್ವತಂತ್ರವಾಗಿರುವಂತೆ ನೋಡಿಕೊಳ್ಳುವ ಪ್ರಯತ್ನವನ್ನೂ ಸಂವಿಧಾನದಲ್ಲಿ ಮಾಡಲಾಗಿದೆ. ನಮ್ಮ ಸಂವಿಧಾನದಲ್ಲಿಯ ಒಂದು ವಿಧಿಯು ರಾಜ್ಯ ಸರ್ಕಾರಗಳ, ಕಾರ್ಯಾಂಗ ಮತು ನ್ಯಾಯಾಂಗಗಳು ಪರಸ್ಪರ ಪರಭಾರೆಯಾಗಿರುವಂತೆ ನೋಡಿಕೊಳ್ಳುತ್ತದೆ. ಸಿವಿಲ್ ಮತ್ತು ಕ್ರಿಮಿನಲ್ ಮೊಕದ್ದಮೆಗಳನ್ನು ನಿರ್ವಹಿಸುವ ನ್ಯಾಯಾಲಯಗಳು ಸಮಾನ ಸ್ಥಾನಮಾನಗಳನ್ನು ಪಡೆದಿರುತ್ತವೆ. ರಾಜ್ಯ ಸರ್ಕಾರಗಳು ಈ ವಿಧಿಯನ್ನು ಬಳಸಿ ನ್ಯಾಯಾಂಗದಲ್ಲಿ ಬಹುಕಾಲದಿಂದ ನೆನೆಗುದಿಗೆ ಬಿದ್ದಿರುವ ಸುಧಾರಣೆಯನ್ನು ತರಬಲ್ಲವೆಂದು ನಾನು ಆಶಿಸುತ್ತೇನೆ.

ಕೆಲವು ನಿರ್ದಿಷ್ಟ ವಿಷಯಗಳ ಕುರಿತು ವ್ಯವಹರಿಸಲು, ಅವುಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸಲು ನಮ್ಮ ಸಂವಿಧಾನವು ಕೆಲವು ಸ್ವತಂತ್ರ ಏಜೆನ್ಸಿಗಳನ್ನು ರೂಪಿಸಿದೆ. ಉದಾಹರಣೆಗೆ: ಕೇಂದ್ರ ಮತ್ತು ರಾಜ್ಯಗಳಲ್ಲಿ ಲೋಕಸೇವಾ ಆಯೋಗಗಳನ್ನು ರಚಿಸಲು ಅವಕಾಶ ಮಾಡಿಕೊಟ್ಟಿದೆ. ಈ ಆಯೋಗಗಳು ಸರ್ವತಂತ್ರ ಸ್ವತಂತ್ರವಾಗಿದ್ದು ಕಾರ್ಯಾಂಗದ ಪ್ರಭಾವಕ್ಕೊಳಗಾಗದೆ ತಮ್ಮ ಕೆಲಸವನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ವಿಶೇಷ ಸ್ಥಾನಮಾನಗಳನ್ನು ಪಡೆದಿವೆ. ಈ ವಿಷಯದಲ್ಲಿ ನಾವು ಎಚ್ಚರಿಕೆಯಿಂದಿರಬೇಕಾದ ಒಂದೇ ಒಂದು ಸಂಗತಿಯೆಂದರೆ, ಮನುಷ್ಯನಿಗೆ ಸಾಧ್ಯವಿರುವ ಎಲ್ಲ ಪ್ರಯತ್ನಗಳ ಮೂಲಕ ಈ ಆಯೋಗಗಳು ಶುದ್ಧಾಂಗ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವಂತೆ ನೋಡಿಕೊಳ್ಳಬೇಕು. ಅಲ್ಲಿ ಯಾವುದೇ ಭ್ರಷ್ಟಾಚಾರ, ಶಿಫಾರಸ್ಸು, ಸ್ವಜನ ಪಕ್ಷಪಾತಕ್ಕೆ ಅವಕಾಶವಿರದಂತೆ ನೋಡಿಕೊಳ್ಳಬೇಕು. ಇದಕ್ಕೆ ಸಂಬಂಧಿಸಿ ನಮ್ಮ ಸಂವಿಧಾನದಲ್ಲಿ ಕಲ್ಪಿಸಲಾಗಿರುವ ವಿಧಿ ವಿಧಾನಗಳು ಈ ದಿಶೆಯಲ್ಲಿ ನಮಗೆ ಸಾಕಷ್ಟು ಸಹಾಯ ಮಾಡಬಹುದೆಂದು ನನ್ನ ಅನಿಸಿಕೆ.

ಇಂಥ ಇನ್ನೊಂದು ಸ್ವತಂತ್ರ ಪ್ರಾಧಿಕಾರವೆಂದರೆ, ಕಾಂಪ್ಟ್ರೋಲರ್ ಜನರಲ್ ಮತ್ತು ಆಡಿಟರ್ ಜನರಲ್ ಅವರ ಹುದ್ದೆ. ಇವರು ಭಾರತದ ಅಥವಾ ಯಾವುದೇ ರಾಜ್ಯದ ಹಣಕಾಸಿನ ವ್ಯವಹಾರದ ಮೇಲೆ ತಮ್ಮ ನಿಗಾ ಇಟ್ಟಿರುತ್ತಾರೆ. ಯಾವುದೇ ಬಾಬತ್ತಿಗೆ ನಿಗದಿಯಾದ ಹಣ ಪೋಲಾಗದಂತೆ, ದುರ್ವ್ಯಯವಾಗದಂತೆ ಯೋಜಿತ ಉದ್ದೇಶಗಳಿಗೆ ಬಳಕೆಯಾಗುತ್ತದೆಯೇ, ಯಾವುದೇ ಉದ್ದೇಶಕ್ಕೆ ಹಣ ಖರ್ಚು ಮಾಡಲು ಸಂಬಂಧಪಟ್ಟವರಿಗೆ ಯುಕ್ತ ಅಧಿಕಾರವಿದೆಯೇ ಎಂಬಿತ್ಯಾದಿ ಸಂಗತಿಗಳಿಗೆ ಕಾವಲು ನಿಲ್ಲುವ ಜೊತೆಗೆ ರಾಜ್ಯದ ಹಣಕಾಸಿನ ಲೆಕ್ಕಪತ್ರವನ್ನು ಸುವ್ಯವಸ್ಥೆಗೊಳಿಸುವ ಮಹತ್ತರ ಜವಾಬ್ದಾರಿ ಈ ಕಾಂಪ್ಟ್ರೋಲರ್ ಮತ್ತು ಆಡಿಟರ್ ಜನರಲ್ಲರದ್ದು. ನಮ್ಮ ಸರ್ಕಾರಗಳು ವ್ಯವಹರಿಸಲಿರುವ ನೂರಾರು ಕೋಟಿ ಬೃಹತ್ ಮೊತ್ತದ ಹಣವನ್ನು ಗಮನಕ್ಕೆ ತೆಗೆದುಕೊಂಡರೆ, ಈ ಪ್ರಾಧಿಕಾರದ ಕಾರ್ಯ ಗಾಂಭೀರ್ಯ ನಮಗೆ ಮನದಟ್ಟಾಗುತ್ತದೆ. ನಮ್ಮ ಸಂವಿಧಾನದಲ್ಲಿ ಇನ್ನೊಂದು ಸ್ವತಂತ್ರ ಪ್ರಾಧಿಕಾರಕ್ಕೆ ಅವಕಾಶ ಮಾಡಿಕೊಡಲಾಗಿದೆ. ಈ ಪ್ರಾಧಿಕಾರವೂ ಅಷ್ಟೇ ಮುಖ್ಯವಾದುದ್ದಾಗಿದ್ದು ತೀರಾ ಮಹತ್ವದ ಜವಾಬ್ದಾರಿಯನ್ನು

ನಿಭಾಯಿಸಬೇಕಾಗುತ್ತದೆ. ಈ ಪ್ರಾಧಿಕಾರದ ಚುನಾವಣೆಗಳನ್ನು ನಡೆಸುವ, ಅವುಗಳ ಮೇಲ್ವಿಚಾರಣೆ ಮಾಡುವ ಮಹತ್ವದ ಹೊಣೆ ಚುನಾವಣಾ ಆಯೋಗದ ಹೆಗಲ ಮೇಲಿದೆ. ಶಾಸನ ಸಭೆ ಮತ್ತು ಲೋಕಸಭೆಗಳಿಗೆ ಸಕಾಲದಲ್ಲಿ ಚುನಾವಣೆಗಳನ್ನು ನಡೆಸುವ, ಚುನಾವಣೆಗಳಿಗೆ ಸಂಬಂಧಿಸಿದ ಎಲ್ಲಾ ಅವಶ್ಯಕ ಕ್ರಮಗಳನ್ನು ಕೈಗೊಳ್ಳುವ, ಮಹತ್ವದ ಜವಾಬ್ದಾರಿ ಈ ಚುನಾವಣಾ ಆಯೋಗದ್ದು. ಇಲ್ಲಿ ನಾವು ಎದುರಿಸಬೇಕಾಗಿ ಬರಬಹುದಾದ ಒಂದೇ ಒಂದು ಅಪಾಯವೆಂದರೆ, ಅಧಿಕಾರದಲ್ಲಿರುವ ಸರ್ಕಾರ, ಪಕ್ಷ ಅಥವಾ ಅಭ್ಯರ್ಥಿ ತನ್ನ ಅಧಿಕಾರವನ್ನು ದುರುಪಯೋಗಿಸಿ, ಭ್ರಷ್ಟಮಾರ್ಗಗಳನ್ನು ಅನುಸರಿಸಬಹುದು. ನಮಗೆ ಪ್ರಜಾತಾಂತ್ರಿಕ ಚುನಾವಣೆಗಳ ಅನುಭವದ ಯಾವುದೇ ಹಿನ್ನೆಲೆಯಲ್ಲಿ ಅನೇಕ ವರ್ಷಗಳವರೆಗೆ ಚುನಾವಣೆ ಎಂಬ ಮಾತೇ ನಮಗೆ ಗೊತ್ತಿರಲಿಲ್ಲ. ಕಳೆದ ಕೆಲವು ವರ್ಷಗಳಿಂದೀಚೆಗೆ ಮಾತ್ರ ನಾವು ಚುನಾವಣೆ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳುತ್ತಿದ್ದೇವೆ. ಈಗ ವಾಸ್ತವವಾಗಿ ನಮಗೆ ಅಧಿಕಾರ ಬಂದಿರುವುದರಿಂದ ಭ್ರಷ್ಟಾಚಾರದ ಅಪಾಯ ಕೇವಲ ಒಂದು ಕಾಲ್ಪನಿಕ ಸಂಗತಿಯಾಗಿ ಉಳಿದಿಲ್ಲ. ಆದ್ದರಿಂದ ನೇರ ಮತ್ತು ನಿಷ್ಪಕ್ಷಪಾತ ಚುನಾವಣೆ ನಡೆಯುವಂತೆ, ಅಲ್ಲಿ ಅ ಪ್ರಮಾಣಿಕತೆಗೆ ಮಾತ್ರವೂ ಅವಕಾಶವಿಲ್ಲದಂತೆ, ಜಾಗರೂಕತೆ ವಹಿಸುತ್ತಾ ಇಂಥ ಅಪಾಯದ ವಿರುದ್ಧ ಕಟ್ಟೆಚ್ಚರದಿಂದರಬೇಕಾದದ್ದು ನಮ್ಮ ಸಂವಿಧಾನದ ಕರ್ತವ್ಯವಾಗಿದೆ. ಶಾಸಕಾಂಗ, ಉಚ್ಚ ನ್ಯಾಯಾಲಯಗಳು, ಲೋಕಸೇವಾ ಆಯೋಗ, ಕಾಂಪ್ಟ್ರೋಲರ್ ಮತ್ತು ಆಡಿಟರ್ ಜನರಲ್ ಹಾಗೂ ಚುನಾವಣಾ ಆಯೋಗ ಈ ಎಲ್ಲಾ ಅಂಗ, ಉಪಾಂಗಗಳಿಗೆ ಸಹಾಯ ಮಾಡಲು ಬೇಕಾಗುವ ಸಿಬ್ಬಂದಿ ವರ್ಗವನ್ನು ಒದಗಿಸಲಾಗಿದೆ. ಮೇಲಾಗಿ ಈ ಸಿಬ್ಬಂದಿ ವರ್ಗವು ಆಯಾ ಪ್ರಾಧಿಕಾರ ಮತ್ತು ಆಯೋಗಗಳ ನೇರ ನಿಯಂತ್ರಣಕೊಳ್ಳಪಟ್ಟಿರುತ್ತದೆ. ಅವರ ನೇಮಕಾತಿ, ಮುಂಬಡ್ತಿ ಮತ್ತು ಶಿಸ್ತು ಪಾಲನೆ ಮುಂತಾದ ಸಂಗತಿಗಳ ಕುರಿತು ಅಧಿಕಾರ ಅವರು ಸೇವೆ ಸಲ್ಲಿಸುವ ನಿರ್ದಿಷ್ಟ ಸಂಸ್ಥೆಗಳಿಗೇ ಇರುತ್ತದೆ. ಈ ರೀತಿಯಾಗಿ, ಈ ಪ್ರಾಧಿಕಾರ ಮತ್ತು ಆಯೋಗಗಳ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಅವುಗಳಿಗೆ ವಿಶೇಷ ರಕ್ಷಣೆಗಳನ್ನು ಒದಗಿಸಲಾಗಿದೆ.

ಪರಿಶಿಷ್ಟ ಜಾತಿ ಮತ್ತು ಜನಾಂಗಗಳ ಅಭ್ಯುದಯವನ್ನು ನೋಡಿಕೊಳ್ಳುವ, ಅವುಗಳಿಗೆ ಸಂಬಂಧಿಸಿದ ಆಡಳಿತವನ್ನು ನಿಯಂತ್ರಿಸುವ ಉದ್ದೇಶದಿಂದ ನಮ್ಮ ಸಂವಿಧಾನದಲ್ಲಿ ಎರಡು ಪರಿಶಿಷ್ಟಗಳಲ್ಲಿ ಅವಕಾಶ ಮಾಡಿಕೊಡಲಾಗಿದೆ. ಅಸ್ಸಾಮಿನ ಹೊರತು ಎಲ್ಲ ರಾಜ್ಯಗಳಲ್ಲಿ ಪರಿಶಿಷ್ಟ ಪಂಗಡ ಮತ್ತು ಅವರ ಪ್ರದೇಶಗಳಿಗೆ ಸಂಬಂಧಿಸಿದಂತೆ ಅವರು ಆಡಳಿತದ ಮೇಲೆ ಪ್ರಭಾವ ಬೀರಲು ಪರಿಶಿಷ್ಟ ಪಂಗಡಗಳ ಸಲಹಾ ಪರಿಷತ್ತುಗಳನ್ನು ರಚಿಸಿಕೊಳ್ಳುವುದಕ್ಕೆ ವ್ಯವಸ್ಥೆಗೊಳಿಸಲಾಗಿದೆ. ಇನ್ನು ಅಸ್ಸಾಮಿನಲ್ಲಿರುವ ಪರಿಶಿಷ್ಟ ಪಂಗಡ ಮತ್ತು ಅವರ ಪ್ರದೇಶಗಳಲ್ಲಿ ಜಿಲ್ಲಾ ಪರಿಷತ್ತುಗಳು ಮತ್ತು ಸ್ವಾಯುತ್ತ ಪ್ರಾಂತೀಯ ಪರಿಷತ್ತುಗಳ ಮೂಲಕ ಅವರಿಗೆ ಇನ್ನೂ ಹೆಚ್ಚಿನ ಅಧಿಕಾರ ಕೊಡಲಾಗಿದೆ. ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ಜಾತಿಗಳ ಕಲ್ಯಾಣ ಕಾರ್ಯವನ್ನು ನೋಡಿಕೊಳ್ಳಲು ರಾಜ್ಯ ಸಚಿವಾಲಯದಲ್ಲಿ ಒಬ್ಬ ಮಂತ್ರಿಯಿರುವಂತೆ ಅವಕಾಶ ಕಲ್ಪಿಸಲಾಗಿದೆ. ಆತ ಈ ಕಲ್ಯಾಣ ಕಾರ್ಯದ ಪ್ರಭಾರವನ್ನು ಹೊರುತ್ತಾನೆ. ಇದಲ್ಲದೆ, ಒಂದು ವಿಶೇಷ ಆಯೋಗಕ್ಕೆ ಅವಕಾಶವಿದ್ದು ಅದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ

ಸ್ಥಿತಿಗತಿ ಮತ್ತು ಎಲ್ಲ ಸಮಸ್ಯೆಗಳನ್ನು ಕೂಲಂಕುಷವಾಗಿ ಅಭ್ಯಸಿಸಿ, ಕಾಲಕಾಲಕ್ಕೆ ವರದಿಸುತ್ತದೆ. ಹಿಂದುಳಿದ ಜನಾಂಗಗಳಿಗೆ ಸಂಬಂಧಿಸಿಯೂ ಇಂಥಾ ಒಂದು ಅವಕಾಶ ಕಲ್ಪಿಸಿ ಕೊಡಬೇಕಾದದ್ದು ತುಂಬಾ ಅವಶ್ಯಕವಾಗಿತ್ತು. ಅವರಿಗೆ ವಿಶೇಷ ರಕ್ಷಣೆಯ ಅವಶ್ಯಕತೆಯಿದೆ ಮತ್ತು ಅವರು ತಮ್ಮ ಸಮಸ್ಯೆಗಳನ್ನು ತಮ್ಮದೇ ಆದ ರೀತಿಯಲ್ಲಿ ಪರಿಹರಿಸಿಕೊಳ್ಳಬಲ್ಲರು. ಪರಿಶಿಷ್ಟ ಜಾತಿಗಳಿಗೆಂತೋ ಅಂತೇಯೇ ಪರಿಶಿಷ್ಟ ಪಂಗಡಗಳಿಗೂ ಈ ಅವಕಾಶಗಳು ಸಾಕಷ್ಟು ತೃಪ್ತಿಯನ್ನುಂಟುಮಾಡಿವೆ. ಯಾಕೆಂದರೆ, ಅವರು ತಮ್ಮ ಏಳ್ಗೆಯನ್ನು ತಮ್ಮದೇ ವಿಧಾನದಲ್ಲಿ ಸಾಧಿಸಿಕೊಳ್ಳಲು ಹೊಸ ದಾರಿ ತೆರೆದಂತಾಗಿದೆ.

ಕೇಂದ್ರ ಮತ್ತು ರಾಜ್ಯಗಳ ಆಡಳಿತ ಮತ್ತು ಇತರ ಚಟುವಟಿಕೆಗಳ ಎಲ್ಲ ಆಯಾಮಗಳಿಗೆ ಸಂಬಂಧಿಸಿದಂತೆ ಸಂವಿಧಾನವು ತಲಸ್ಪರ್ಶಿಯಾಗಿ ಅಭ್ಯಾಸ ಮಾಡಿದೆ. ಕೇಂದ್ರ ಮತ್ತು ರಾಜ್ಯಗಳ ಮಧ್ಯೆ ಅಧಿಕಾರ ಹಂಚಿಕೆಯ ಪ್ರಶ್ನೆ ಮತ್ತು ಅವುಗಳ ಪ್ರತ್ಯೇಕ ಕಾರ್ಯಗಳ ಕುರಿತೂ ಅದು ಆಳವಾದ ವಿಶ್ಲೇಷಣೆಯನ್ನು ಮಾಡಿದೆ. ಕೆಲವರ ಪ್ರಕಾರ ಕೇಂದ್ರಕ್ಕೆ ಕೊಟ್ಟಿರುವ ಅಧಿಕಾರಗಳು ತುಂಬಾ ಹೆಚ್ಚಾಗಿದ್ದು ಬಹು ವ್ಯಾಪಕವಾಗಿವೆ. ರಾಜ್ಯಗಳಿಗೆ ನಿಜವಾಗಿಯೂ ದಕ್ಕಬೇಕಾಗಿದ್ದ ಅಧಿಕಾರಗಳಿಂದ ಅವು ವಂಚಿತವಾಗಿವೆ. ಈ ಟೀಕೆಯ ಬಗ್ಗೆ ನಾನು ಯಾವುದೇ ತೀರ್ಮಾನ ನೀಡಬಯಸುವುದಿಲ್ಲ. ನಾನು ಹೇಳಲಿಚ್ಚಿಸುವುದಿಷ್ಟೆ: ಶತ ಶತಮಾನಗಳುದ್ದಕ್ಕೂ ವ್ಯಾಪಿಸಿರುವ ನಮ್ಮ ದೇಶದ ಇತಿಹಾಸವನ್ನು ನೆನಸಿಕೊಂಡರೆ ಸಾಕು, ನಾವು ನಮ್ಮ ದೇಶದ ಭವಿಷ್ಯತ್ತಿನ ಬಗ್ಗೆ ಎಷ್ಟೇ ಜಾಗರೂಕರಾಗಿದ್ದರೂ ಅದು ಕಡಿಮೆಯೇ ಎಂದು ಹೇಳದೆ ವಿಧಿಯಿರುವುದಿಲ್ಲ. ಆದರೆ, ರಾಜ್ಯಗಳ ಕ್ಷೇತ್ರದಲ್ಲಿ ಕೇಂದ್ರವು ಕೈಹಾಕುವುದಕ್ಕೆ ಮಾಡಿಕೊಟ್ಟಿರುವ ಅವಕಾಶವು ಕೇವಲ ತುರ್ತು ಪರಿಸ್ಥಿತಿಗಳಿಗೆ ಸಂಬಂಧಿಸಿದೆ. ಅಪರೂಪದ ತುರ್ತು ಸಂದರ್ಭಗಳಲ್ಲಿ ಮಾತ್ರ ಕೇಂದ್ರವು ರಾಜ್ಯಗಳ ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳ ಮೇಲೆ ತನ್ನ ಅಧಿಕಾರ ಚಲಾಯಿಸಬಲ್ಲದು. ರಾಷ್ಟ್ರದ ಸುವ್ಯವಸ್ಥೆ ಮತ್ತು ಸಮುಚಿತ ಆಡಳಿತ ನಡೆಸಲು ಅವಶ್ಯವಿರುವದಕ್ಕಿಂತ ಹೆಚ್ಚಿನ ಅಧಿಕಾರ ಹಸ್ತಗತ ಮಾಡಿಕೊಳ್ಳಲು ಕೇಂದ್ರವು ಎಂದೂ ಹವಣಿಸದೆಂದು ಆಶಿಸಬಹುದಾಗಿದೆ. ಇದೇನೆಯಿದ್ದರೂ, ಕೇಂದ್ರದ ಸಂಸತ್ತಿನಲ್ಲಿ ಎಲ್ಲಾ ರಾಜ್ಯಗಳ ಪ್ರತಿನಿಧಿಗಳೇ ಇರುವುದರಿಂದ ಅವರು ರಾಜ್ಯಗಳ ಹಿತಾಸಕ್ತಿಗೆ ವಿರುದ್ಧವಾಗುವಷ್ಟು ಮಟ್ಟಿನ ಅಧಿಕಾರ ಕೇಂದ್ರದಲ್ಲಿ ಸಂಚಯವಾಗದಂತೆ ಎಚ್ಚರಿಕೆ ವಹಿಸುತ್ತಾರೆ. ತಾವು ಪ್ರತಿನಿಧಿಸುತ್ತಿರುವ ಜನತೆಗೆ ಯಾವುದೇ ಅಹಿತ ಉಂಟಾಗದಂತೆ ಕಾಳಜಿ ವಹಿಸುತ್ತಾರೆ. ಆದ್ದರಿಂದ ಕೇಂದ್ರಕ್ಕೆ ಹೆಚ್ಚಿನ ಅಧಿಕಾರ ಕೊಡಲಾಗಿದೆ ಎಂಬ ದೂರುಗಳಿಗೆ ನಾನು ಅಷ್ಟೇನೂ ಮಹತ್ವ ನೀಡುವುದಿಲ್ಲ. ಎಂಟನೇ ಪರಿಶಿಷ್ಟದಲ್ಲಿ ಅಧಿಕಾರಕ್ಕೆ ಸಂಬಂಧಿಸಿ ಬಹು ಜಾಗರೂಕತೆಯಿಂದ ಅವುಗಳನ್ನು ನಿರೂಪಿಸಲಾಗಿದೆ. ಕೇಂದ್ರ ಮತ್ತು ರಾಜ್ಯಗಳ ಅಧಿಕಾರದ ವ್ಯಾಪ್ತಿಯನ್ನು ತುಂಬಾ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಕೇಂದ್ರಕ್ಕೆ ಕೊಟ್ಟಿರುವ ಹೆಚ್ಚಿನ ಅಧಿಕಾರ ಅಷ್ಟೇನೂ ಹೆಚ್ಚು ವ್ಯಾಪಕವಾಗಿಲ್ಲ. ಆದ್ದರಿಂದ ರಾಜ್ಯಗಳು ತಮ್ಮ ಹೆಚ್ಚಿನ ಅಧಿಕಾರ ಕಳೆದುಕೊಂಡಿವೆ ಎಂಬ ಮಾತಿನಲ್ಲಿ ಹುರುಳಿಲ್ಲ.

ಸಂವಿಧಾನ ಸಭೆಯು ಸುದೀರ್ಘ ಕಾಲದವರೆಗೆ ಚರ್ಚೆ, ಜಿಜ್ಞಾಸೆ ನಡೆಸಿ ಪರಿಹರಿಸಲು ಪ್ರಯತ್ನಿಸಿದ ಇನ್ನೊಂದು ಸಮಸ್ಯೆಯೆಂದರೆ, ನಮ್ಮ ಅಧಿಕೃತ ಆಡಳಿತ ಭಾಷೆಗೆ ಸಂಬಂಧಿಸಿದ್ದು. ದೇಶದ ಆಡಳಿತಕ್ಕಾಗಿ ಯಾವ ಭಾಷೆ ಬಳಸಬೇಕು ಎಂಬುವುದೇ ನಮ್ಮ ಮುಂದಿನ ಪ್ರಶ್ನೆಯಾಗಿತ್ತು.

ನಮ್ಮ ಆಡಳಿತ ನಮ್ಮದೇ ಭಾಷೆಯಲ್ಲಿ ನಡೆಸಬೇಕೆಂಬ ಅಭಿಲಾಷೆ ಸಹಜವಾದದ್ದೆ. ನಮ್ಮ ದೇಶದಲ್ಲಿ ಅನೇಕ ಭಾಷೆಗಳು ಅಸ್ತಿತ್ವದಲ್ಲಿವೆ. ಅವುಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳುವುದು ಸಾಕಷ್ಟು ಕಷ್ಟದ ಕೆಲಸ. ಹಾಗಿದ್ದೂ ನಾವು ಹಿಂದೀಯನ್ನು ಆಯ್ಕೆ ಮಾಡಿಕೊಳ್ಳಲು ಸಾಧ್ಯವಾಗಿದೆ. ಯಾಕೆಂದರೆ, ಅದು ನಮ್ಮ ರಾಷ್ಟ್ರದ ಬಹು ಸಂಖ್ಯಾತರ ಭಾಷೆಯಾಗಿದ್ದು, ಅಷ್ಟೇ ವ್ಯಾಪಕವಾದ ಪ್ರದೇಶಗಳಲ್ಲಿ ಹಬ್ಬಿ ಹರಡಿದೆ. ಆದ್ದರಿಂದ ಅದನ್ನು ನಮ್ಮ ದೇಶದ ಅಧಿಕೃತ ಭಾಷೆಯನ್ನಾಗಿ ಅಂಗೀಕರಿಸಿದ್ದೇವೆ. ಇದು ಅತ್ಯಂತ ಮಹತ್ವದ ತೀರ್ಮಾನವೆಂದು ನಾನು ಬಗೆಯುತ್ತೇನೆ. ಸ್ವಿಡ್ಜರ್‌ಲ್ಯಾಂಡಿನಂತಹ ಸಣ್ಣದೇಶದಲ್ಲಿ ಮೂರು ಅಧಿಕೃತ ಭಾಷೆಗಳಿರುವುದು ದಕ್ಷಿಣ ಆಫ್ರಿಕೆಯಲ್ಲಿ ಎರಡು ಅಧಿಕೃತ ಭಾಷೆಗಳಿರುವುದು - ಇತ್ಯಾದಿಯನ್ನು ಗಮನಿಸಿದರೆ ನಾವು ತೆಗೆದುಕೊಂಡ ತೀರ್ಮಾನ ಬಹು ಮಹತ್ವದ್ದೆಂದೇ ಹೇಳಬೇಕು. ಹಿಂದೀ ಭಾಷೆಯೇತರರೂ ಹಿಂದಿಯನ್ನು ಭಾರತದ ಅಧಿಕೃತ ಆಡಳಿತ ಭಾಷೆಯನ್ನಾಗಿ ಸ್ವೀಕರಿಸಿರುವುದು ಅವರ ಹೃದಯ ವೈಶಾಲ್ಯಕ್ಕೆ ಸಾಕ್ಷಿಯಾಗಿದೆ. ಮೇಲಾಗಿ, ಅದು ಇಡೀ ದೇಶವನ್ನು ಒಂದು ರಾಷ್ಟ್ರವನ್ನಾಗಿ ಸಂಘಟಿಸಬೇಕೆಂಬ ಅವರ ದೃಢ ನಿರ್ಧಾರದ ಸದ್ಭಾವವನ್ನು ಸೂಚಿಸುತ್ತದೆ. ಒಂದು ಭಾಷೆಯನ್ನು ಈಗ ಮೇಲಿನಿಂದ ಹೇರುವ ಪ್ರಶ್ನೆಯೇ ಇಲ್ಲ. ಬ್ರಿಟಿಷರ ಕಾಲದಲ್ಲಿ ಇಂಗ್ಲೀಷ್ ಮತ್ತು ಮೊಗಲರ ಕಾಲದಲ್ಲಿ ಪರ್ಶಿಯನ್ ನ್ಯಾಯಾಲಯದ ಮತ್ತು ಆಡಳಿತದ ಭಾಷೆಯಾಗಿದ್ದವು. ಜನರು ಅವುಗಳನ್ನು ಅಭ್ಯಸಿಸಿ ಸಾಕಷ್ಟು ಪರಿಣತಿಯನ್ನೇನೋ ಪಡೆದಿದ್ದರಾದರೂ ಅವರು ಅವುಗಳನ್ನು ಸ್ವಇಚ್ಛೆಯಿಂದ ಸ್ವೀಕರಿಸಿದ್ದರೆಂದೂ ರಾಷ್ಟ್ರದ ಜನತೆ ಆ ಭಾಷೆಗಳನ್ನು ಮನಸಾರೆ ಒಪ್ಪಿ ಅಂಗೀಕರಿಸಿದ್ದಾರೆಂದೂ ಹೇಳಲಾಗದು. ಈಗ ದೇಶದ ಇತಿಹಾಸದಲ್ಲಿಯೇ ಪ್ರಥಮ ಬಾರಿಗೆ ರಾಷ್ಟ್ರದಾದ್ಯಂತ ಆಡಳಿತದ ಉದ್ದೇಶಗಳಿಗಾಗಿ ಬಳಸಬಹುದಾದ ಒಂದು ಭಾಷೆಯನ್ನು ನಾವು ಸ್ವೀಕರಿಸಿದ್ದೇವೆ. ಅದು ಕ್ರಮೇಣ ಬೆಳೆದು ರಾಷ್ಟ್ರೀಯ ಭಾಷೆಯಾಗಲೆಂದು ಹಾರೈಸುತ್ತೇನೆ. ಕಾಲಾನುಕ್ರಮದಲ್ಲಿ ರಾಷ್ಟ್ರದ ಸಮಗ್ರ ಜನತೆ ಅದರ ಬಗ್ಗೆ ಅಭಿಮಾನ ಪಡುವಂತಾಗಲಿ.

ಜೊತೆಗೆ, ತಂತಮ್ಮ ಸಂಸ್ಕೃತಿ ಪರಂಪರೆಗಳ ಆಗರವಾಗಿರುವ ತಮ್ಮದೇ ವಿಶಿಷ್ಟ ಭಾಷೆಯ ಅಭಿವೃದ್ಧಿಗೂ ಉತ್ತೇಜನ ದೊರೆಯುವಂತಾಗಲಿ; ಪ್ರತಿಯೊಂದು ಪ್ರಾಂತ್ಯವು ತನ್ನ ಭಾಷೆಯನ್ನು ಅಪೂರ್ವ ಅಭಿವೃದ್ಧಿಪಡಿಸಲು ಅವಶ್ಯವಿರುವ ಮುಕ್ತ ವಾತಾವರಣ ಅವರಿಗೆ ದೊರಕುವಂತಾಗಲಿ. ಸ್ಥಿತ್ಯಂತರದ ಈ ಸಂದರ್ಭದಲ್ಲಿ ಇಂಗ್ಲೀಷಿನ ಬಳಕೆ ಅನಿವಾರ್ಯವೆಂದು ಭಾವಿಸಲಾಗಿದೆ ಮತ್ತು ಇದಕ್ಕೆ ವಾಸ್ತವಿಕ ಕಾರಣಗಳಿಲ್ಲದಿಲ್ಲ. ಹೀಗಾಗಿ, ಈ ನಿರ್ಣಯದಿಂದ ಯಾರೂ ಹತಾಶರಾಗಬೇಕಾಗಿಲ್ಲ. ಈಗ ಇಡೀ ರಾಷ್ಟ್ರದ, ಅದರಲ್ಲಿಯೂ ವಿಶೇಷವಾಗಿ ಹಿಂದೀ ಭಾಷಿಕರ, ಮುಖ್ಯ ಕರ್ತವ್ಯವೇನೆಂದರೆ ಹಿಂದೀ ಭಾಷೆಯನ್ನು ಒಂದು ಸಮರ್ಥ ಭಾಷೆಯನ್ನಾಗಿ ಅಭಿವೃದ್ಧಿಪಡಿಸುವುದು. ಸಮಗ್ರ ರಾಷ್ಟ್ರದ ಸಂಕೀರ್ಣ ಸಂಸ್ಕೃತಿಗೆ ಅದು ಒಂದು ಸಮರ್ಥ ವಾಹಕವಾಗುವಂತೆ, ಶ್ರೇಷ್ಠ ಮಾಧ್ಯಮವಾಗುವಂತೆ ರೂಪಿಸುವ ಜವಾಬ್ದಾರಿ ಅವರದ್ದಾಗಿದೆ.

ನಮ್ಮ ಸಂವಿಧಾನದ ಇನ್ನೊಂದು ಮಹತ್ವದ ಲಕ್ಷಣವೆಂದರೆ, ಅದು ತಿದ್ದುಪಡಿಗಳಿಗೆ ಬಹು ಸರಳ ಮಾರ್ಗವನ್ನು ಕಲ್ಪಿಸಿಕೊಟ್ಟಿದೆ. ಸಂವಿಧಾನಿಕ ತಿದ್ದುಪಡಿಗಳು ಕೂಡ ಇತರ ಎಷ್ಟೋ ರಾಷ್ಟ್ರಗಳಂತೆ ಕಷ್ಟಕರವಾಗಿಲ್ಲ. ಸಂವಿಧಾನದಲ್ಲಿಯ ಎಷ್ಟೋ ವಿಧಿಗಳನ್ನು ಸಂಸತ್ತು ತಿದ್ದುಪಡಿಗಳ ವಿಧಿವಿಧಾನಗಳನ್ನು ಅನುಸರಿಸುವ ಮೂಲಕ ಬದಲಾಯಿಸಬಹುದು.

ಸಂವಿಧಾನ ಜಾರಿಗೆ ಬಂದ ಮೇಲೆ ಐದು ವರ್ಷಗಳವರೆಗೆ ಅದರ ತಿದ್ದುಪಡಿ ಬಹು ಸರಳವಾಗಿದ್ದು ಆಮೇಲೆ ಅದರ ತಿದ್ದುಪಡಿಗಳ ವಿಧಿವಿಧಾನಗಳನ್ನು ಸಂಕೀರ್ಣಗೊಳಿಸಬೇಕೆಂಬ ಪ್ರಸ್ತಾವನೆಯೊಂದು ಬಂದಿತ್ತು. ಆದರೆ ತಿದ್ದುಪಡಿಗಳಿಗೆ ಸಂಬಂಧಿಸಿದಂತೆ ಸಂವಿಧಾನದೊಳಗೇ ಅಡಕವಾಗಿರುವ ಅನೇಕ ವಿನಾಯಿತಿಗಳ ಕಾರಣದಿಂದಾಗಿ, ಇಂಥ ಒಂದು ಅವಕಾಶ ಕಲ್ಪಿಸಿಕೊಡುವುದು ಅನಾವಶ್ಯಕವೆಂದು ಭಾವಿಸಲಾಯಿತು. ಒಟ್ಟಾರೆಯಾಗಿ, ದೇಶದ ಸೇವೆಯನ್ನು ಬಹುಸಮರ್ಥವಾಗಿ ಮಾಡಬಲ್ಲ ಸಂವಿಧಾನವೊಂದನ್ನು ರಚಿಸಲು ನಮಗೆ ಸಾಧ್ಯವಾಗಿದೆ ಎಂಬುದು ನನ್ನ ಭಾವನೆ.

ನಮ್ಮ ನಿರ್ದೇಶಕ ಸೂತ್ರಗಳಲ್ಲಿ ಒಂದು ವಿಶೇಷ ಅವಕಾಶವಿದೆ. ಇದಕ್ಕೆ ನಾನು ತುಂಬಾ ಮಹತ್ವ ನೀಡುತ್ತೇನೆ. ಜನರ ಒಳಿತನ್ನು ಸಾಧಿಸುವುದಷ್ಟೇ ಅಲ್ಲ, ಅವರ ಭೌತಿಕ ಶಾಂತಿ, ಸುರಕ್ಷತೆ, ರಾಷ್ಟ್ರ ರಾಷ್ಟ್ರಗಳ ನಡುವೆ ಗೌರವಾದರಗಳಿಂದೊಡಗೂಡಿದ ನ್ಯಾಯಯುತ ಸಂಬಂಧ, ಅಂತರರಾಷ್ಟ್ರೀಯ ಕಾಯ್ದೆ ಮತ್ತು ಕೌಲುಗಳ ಬಗ್ಗೆ ಜನರು ಮರ್ಯಾದೆಯ ನಿಲುವು ತಳೆಯುವಂತೆ ನೋಡಿಕೊಳ್ಳುವ ಜವಾಬ್ದಾರಿಯೂ ಪ್ರಭುತ್ವದ್ದಾಗಿದೆ ಮತ್ತು ಅಂತರರಾಷ್ಟ್ರೀಯ ತಕರಾರುಗಳನ್ನು ಚರ್ಚೆ ಸಂಧಾನದ ಮೂಲಕ ಬಗೆಹರಿಸಿಕೊಳ್ಳಲು ನಮ್ಮ ನಿರ್ದೇಶಕ ಸೂತ್ರಗಳು ಉತ್ತೇಜನ ನೀಡುತ್ತವೆ. ಜಗಳ ತೋಟಿಗಳಿಂದ ಹರಿದು ಚಿಂದಿಯಾಗಿರುವ, ಎರಡು ಮಹಾಯುದ್ಧಗಳಿಂದ ಧ್ವಂಸಗೊಂಡು ತತ್ತರಿಸಿ ಹೋಗಿರುವ, ನಮ್ಮ ಪ್ರಪಂಚ ಶಾಂತಿ ಸೌಹಾರ್ದತೆಯನ್ನು ಸಂಸ್ಥಾಪಿಸಲು ಇನ್ನೂ ಶಸ್ತ್ರಗಳನ್ನೇ ಅವಲಂಬಿಸುತ್ತದೆ. ನಾವು ನಮ್ಮ ರಾಷ್ಟ್ರಪಿತನ ಬೋಧನೆಗಳಿಗೆ ನಿಷ್ಠರಾಗಿದ್ದರೆ, ಈ ಸಂದರ್ಭದಲ್ಲಿ ನಾವು ವಹಿಸಬಹುದಾದ ಮಹತ್ತರ ಪಾತ್ರವೊಂದಿದೆ; ಆ ಮೂಲಕ ನಮ್ಮ ಸಂವಿಧಾನದಲ್ಲಿಯ ನಿರ್ದೇಶಕ ಸೂತ್ರಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಸಾಧ್ಯತೆಗಳಿವೆ. ನಮ್ಮ ದಾರಿಯಲ್ಲಿ ಎದುರಾಗಿರುವ ಎಲ್ಲ ಎಡರು ತೊಡರುಗಳ ಹೊರತಾಗಿಯೂ ನಾವು ಈ ಶಾಂತಿ ಸೌಹಾರ್ದತೆಯ ದಾರಿಯಲ್ಲಿ ಮುನ್ನಡೆಯಲು ದೇವರು ನಮಗೆ ಶಕ್ತಿ ಸದ್ಬುದ್ಧಿ ನೀಡಲೆಂದು ಪ್ರಾರ್ಥಿಸೋಣ. ಉಸಿರುಗಟ್ಟಿಸುವ ಈ ವಾತಾವರಣದಲ್ಲಿ ನಾವು ಮುನ್ನಡೆಯಲು ದೇವರ ಕೃಪಾಕಟಾಕ್ಷಕ್ಕಾಗಿ ಹಂಬಲಿಸೋಣ. ನಮ್ಮ ಶಕ್ತಿ ಸಾಮರ್ಥ್ಯಗಳಲ್ಲಿ ನಮಗೆ ಆತ್ಮ ವಿಶ್ವಾಸವಿರಲಿ. ನನ್ನ ಹಿಂದೆ ತಲೆಯ ಮೇಲೆ ಕಾಣಿಸುತ್ತಿರುವ ಹಿರಿಯ ಗುರುವಿನ ಬೋಧನೆಗಳ ಬಗ್ಗೆ ನಿಷ್ಠೆಯಿರಲಿ. ನಮ್ಮ ಆತ್ಮವಿಶ್ವಾಸ ಮತ್ತು ಪಿತಾಮಹನ ಬಗ್ಗೆ ಇರುವ ನಿಷ್ಠೆ ಇವುಗಳ ಮೂಲಕ ನಾವು ಕೇವಲ ನಮ್ಮ ರಾಷ್ಟ್ರದ್ದಷ್ಟೇ ಅಲ್ಲ, ಸಮಗ್ರ ಪ್ರಪಂಚದ ಹಿತಾಸಕ್ತಿಗಳನ್ನು ಕಾಯಬಲ್ಲವೆಂಬ ವಿಶ್ವಾಸ ನನಗಿದೆ.

ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿದ ವಿಧಿಗಳ ಮೇಲಿನ ಟೀಕೆ ಟಿಪ್ಪಣಿಗಳ ಕುರಿತು ನಾನಿಲ್ಲಿ ಚರ್ಚಿಸ ಬಯಸುವುದಿಲ್ಲ. ಆ ಹಕ್ಕುಗಳನ್ನು ತುರ್ತು ಪರಿಸ್ಥಿತಿಗಳಲ್ಲಿ ಮಾತ್ರ ಮೊಟಕುಗೊಳಿಸಬಹುದು. ಇದಕ್ಕೆ ಸಂಬಂಧಿಸಿದ ಆಕ್ಷೇಪಣೆಗಳ ಕುರಿತು ಅನೇಕ ಸದಸ್ಯರು ತುಂಬಾ ವಿಸ್ತೃತವಾಗಿಯೇ ಮಾತನಾಡಿದ್ದಾರೆ. ಈ ಸಂದರ್ಭದಲ್ಲಿ ನಾನು ಹೇಳ ಬಯಸುವುದಿಷ್ಟೇ; ಸದ್ಯದ ಪರಿಸ್ಥಿತಿಯಲ್ಲಿ ರಾಷ್ಟ್ರಾದ್ಯಂತ ಕಂಡುಬರುತ್ತಿರುವ ಒಲವು ನಿಲುವುಗಳೇ ಇಂಥ ಕಟ್ಟಳೆಗಳನ್ನು ಸಂವಿಧಾನದಲ್ಲಿ ಸೇರಿಸುವ ಅನಿವಾರ್ಯತೆಯನ್ನುಂಟು ಮಾಡಿವೆ. ಜೊತೆಗೆ ಇತರ ದೇಶಗಳ ಅನುಭವಗಳೂ ಈ ಕುರಿತು ನಾವು ಸೂಕ್ತ ಕ್ರಮ ಕೈಗೊಳ್ಳುವಂತೆ ಒತ್ತಾಯಿಸಿವೆ.

1740

ಆ ದೇಶಗಳ ಸಂವಿಧಾನಗಳಲ್ಲಿ ಇಂಥ ಅವಕಾಶವಿಲ್ಲದಿದ್ದರೂ ನ್ಯಾಯಾಂಗದ ತೀರ್ಮಾನದ ಮೂಲಕ ಇಂಥ ಸಂದರ್ಭದ ಸಂಗತಿಗಳನ್ನು ಜಾರಿಗೊಳಿಸಿಕೊಂಡಿವೆ.

ನಾನು ಇಲ್ಲಿಯೇ ಎಲ್ಲ ಸನ್ಮಾನ್ಯ ಸದಸ್ಯರ ಜೊತೆ ಹಂಚಿಕೊಳ್ಳ ಬಯಸುವ ಎರಡು ದುಃಖಗಳಿವೆ: ಒಂದು, ಶಾಸಕರಾಗ ಬಯಸುವವರಿಗೆ, ಯಾವುದೇ ಕನಿಷ್ಟ ವಿದ್ಯಾರ್ಹತೆಯನ್ನು ನಿಗದಿಗೊಳಿಸದೇ ಇದ್ದದ್ದು. ಕಾಯ್ದೆಯನ್ನು ಜಾರಿಗೊಳಿಸಲು ಆಡಳಿತದಲ್ಲಿ ತೊಡಗಿರುವವರಿಗೆ ಉನ್ನತ ಅರ್ಹತೆಗಳನ್ನು ನಿಗದಿಪಡಿಸಿ, ಕಾಯ್ದೆಯನ್ನು ರೂಪಿಸುವವರಿಗೆ ಯಾವುದೇ ವಿದ್ಯಾರ್ಹತೆ ಇಲ್ಲದಿದ್ದರೂ ನಡೆಯುತ್ತದೆ ಎನ್ನುವುದು ತೀರಾ ಅಸಂಬದ್ಧವಾದದ್ದು. ಅವರು ಜನತೆಯಿಂದ ಚುನಾಯಿತರಾದದ್ದು ಒಂದೇ ಅವರ ಅರ್ಹತೆಯೆಂಬುದು ತೀರಾ ಅಸಂಗತವಾದ ಮಾತು. ಕಾನೂನು ರಚಿಸುವವನು ಬೌದ್ಧಿಕವಾಗಿ ಸುಸಜ್ಜಿತನಾಗಿರಬೇಕು. ಅದಕ್ಕಿಂತಲೂ ಹೆಚ್ಚಾಗಿ, ಆತ ಸ್ವತಂತ್ರವಾಗಿ ತೀರ್ಮಾನ ತೆಗೆದುಕೊಳ್ಳಬಲ್ಲ, ಬದುಕಿನ ಮೂಲಭೂತ ಸಂಗತಿಗಳ ಬಗ್ಗೆ, ಒಂದೇ ಮಾತಿನಲ್ಲಿ ಹೇಳುವುದಾದರೆ ಚಾರಿತ್ರ್ಯದ ಬಗ್ಗೆ ನೈಜ ನಿಲುವು ತಳೆಯುವ, ತನ್ನ ಸುತ್ತಲಿನ ಸ್ಥಿತಿಗತಿಗಳ ಬಗ್ಗೆ ಸಂತುಲಿತ ದೃಷ್ಟಿ ತಾಳುವ ಸಾಮರ್ಥ್ಯ ಪಡೆದಿರಬೇಕೆಂಬುದು ಅಪೇಕ್ಷಣೀಯ. ಇನ್ನು ವ್ಯಕ್ತಿಯ ನೈತಿಕ ಗುಣಗಳನ್ನಳೆಯಲು ಯಾವುದೇ ಮಾನದಂಡಗಳನ್ನು ರೂಪಿಸುವುದು ಸಾಧ್ಯವಿಲ್ಲ. ಇದಕ್ಕೆ ಸಂಬಂಧಿಸಿದಂತೆ ನಮ್ಮ ಸಂವಿಧಾನ ದೋಷಪೂರ್ಣವಾಗಿಯೇ ಉಳಿಯಲಿದೆ. ನನ್ನ ಇನ್ನೊಂದು ದುಖಃವೆಂದರೆ, ನಮ್ಮ ದೇಶದ ಪ್ರಥಮ ಸಂವಿಧಾನವನ್ನು ಸ್ವತಂತ್ರ ಭಾರತದ ಒಂದು ಭಾಷೆಯಲ್ಲಿ ಬರೆಯಲಾಗಿಲ್ಲವಲ್ಲಾ ಎಂಬುದು. ಈ ಎರಡೂ ಸಂದರ್ಭಗಳಲ್ಲಿ ವಾಸ್ತವಿಕವಾದ ತೊಂದರೆಗಳಿದ್ದು ಅವುಗಳನ್ನು ಅಷ್ಟು ಸುಲಭವಾಗಿ ಬಗೆಹರಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಆದರೂ ಇದರಿಂದ ನನ್ನ ದುಃಖದ ಮೊನಚೇನೂ ಕಡಿಮೆಯಾಗಲು ಸಾಧ್ಯವಾಗಿಲ್ಲ.

ನಾವು ಒಂದು ಪ್ರಜಾಸತ್ತಾತ್ಮಕ ಸಂವಿಧಾನವನ್ನು ಸಿದ್ಧಪಡಿಸಿದ್ದೇವೆ. ಪ್ರಜಾತಾಂತ್ರಿಕ ಸಂಸ್ಥೆಗಳ ಯಶಸ್ಸು, ಆ ಸಂಸ್ಥೆಗಳಲ್ಲಿ ಕೆಲಸ ಮಾಡುವವರನ್ನು ಅವಲಂಬಿಸಿರುತ್ತದೆ. ಮತ್ತೊಬ್ಬರ ನೆಲೆ, ನಿಲುವುಗಳನ್ನು ಗೌರವಿಸುವ ಸಂಕಲ್ಪ, ರಾಜಿ, ಸಂಧಾನ ಮಾಡಿಕೊಳ್ಳುವ ಸಾಮರ್ಥ್ಯ ಮತ್ತು ಭಿನ್ನಮತೀಯರ ದೃಷ್ಟಿಕೋನಕ್ಕೂ ಅವಕಾಶ ಮಾಡಿಕೊಡುವ ಔದಾರ್ಯ - ಇವೇ ಮುಂತಾದ ಗುಣಗಳು ಪ್ರಜಾತಾಂತ್ರಿಕ ಸಂಸ್ಥೆಗಳಲ್ಲಿ ದುಡಿಯುವವರ ಅವಿಭಾಜ್ಯ ಅಂಗವಾಗಬೇಕು. ಸಂವಿಧಾನದಲ್ಲಿ ಬರೆಯಲಾಗದ ಎಷ್ಟೋ ಸಂಗತಿಗಳನ್ನು ಸಂಪ್ರದಾಯಗಳ ಮೂಲಕ ಪಾಲಿಸಬೇಕು. ಈ ಮೇಲೆ ಕಾಣಿಸಿದ ಗುಣ ವಿಶೇಷಗಳನ್ನು ಮೈಗೂಡಿಸಿಕೊಂಡು ಅವಶ್ಯವಿರುವ ಸಂಪ್ರದಾಯಗಳನ್ನು ನಾವು ಅಭಿವೃದ್ಧಿಪಡಿಸಿಕೊಳ್ಳಬಹುದೆಂಬ ಆಶಯ ನನ್ನದು. ಈ ಸಂವಿಧಾನ ರಚಿಸುವಾಗ ಯಾವೊಂದು ವಿಷಯದಲ್ಲಿಯೂ ಭಿನ್ನಾಭಿಪ್ರಾಯ ತೋರಿ ಅದು ಮತಕ್ಕೆ ಹಾಕುವ ಪ್ರಕ್ರಿಯೆಗೆ ಎಡೆಮಾಡಿಕೊಡಲಿಲ್ಲವೆಂಬುದೂ, ಇಡೀ ರಚನಾ ಪ್ರಕ್ರಿಯೆಯು ಕೊನೆಗೊಳ್ಳುವವರೆಗೂ ಅದರಲ್ಲಿ ಪಾಲ್ಗೊಂಡ ಜನರಲ್ಲಿ ಭಿನ್ನವಿಭಿನ್ನ ಬಣಗಳಾಗಿ ಒಡೆಯಲಿಲ್ಲವೆಂಬುದೂ ನಮ್ಮ ಆ ಆಶಯವನ್ನು ಇನ್ನೂ ಸಬಲಗೊಳಿಸುತ್ತದೆ.

ಸಂವಿಧಾನದಲ್ಲಿ ಏನಾದರೂ ವಿಧಿಸಿರಬಹುದು ವಿಧಿಸದೆಯೂ ಇರಬಹುದು. ಆದರೆ ಇಡೀ ದೇಶದ ಶ್ರೇಯೋಭಿವೃದ್ಧಿ ನಾವು ದೇಶದ ಆಡಳಿತವನ್ನು ಹೇಗೆ ನಡೆಸುತ್ತೇವೆ, ಸಂವಿಧಾನದ ವಿಧಿ ವಿಧಾನಗಳನ್ನು ಹೇಗೆ ಜಾರಿಗೊಳಿಸುತ್ತೇವೆ ಎಂಬುದನ್ನು ಅವಲಂಭಿಸಿದೆ. ರಾಷ್ಟ್ರದ ಏಳ್ಗೆ ಅದರ ಆಡಳಿತಗಾರರನ್ನು ಅವಲಂಬಿಸಿರುತ್ತದೆ. ಯಾವೊಂದು ರಾಷ್ಟ್ರವು ತನಗೆ ಸಲ್ಲುವ ಸರ್ಕಾರವನ್ನೇ ಪಡೆದುಕೊಳ್ಳುತ್ತದೆಯೆಂಬ ಚಿರಪರಿಚಿತ ಹಳಸಲು ಮಾತೊಂದಿದೆ. ಒಂದಿಲ್ಲೊಂದು ದೃಷ್ಟಿಯಿಂದ ಕೆಲವರು ಆಕ್ಷೇಪಿಸಬಹುದಾದ ಅನೇಕ ವಿಧಿಗಳು ನಮ್ಮ ಸಂವಿಧಾನದಲ್ಲಿವೆ. ದೋಷ ಚ್ಯುತಿ ನ್ಯೂನತೆಗಳು ರಾಷ್ಟ್ರದ ಪರಿಸ್ಥಿತಿಯೊಳಗೇ ಅಂತರ್ಗತವಾಗಿರುತ್ತವೆ. ಅಂತೆಯೇ ಜನತೆಯೂ ಅಚ್ಯುತರೇನಲ್ಲ. ಚುನಾಯಿತ ಜನರು ದಕ್ಷರಾಗಿದ್ದರೆ, ಸಚ್ಚಾರಿತ್ರ್ಯವಂತರಾಗಿದ್ದರೆ, ಅಂತರಂಗದಲ್ಲಿ ಬಹಿರಂಗದಲ್ಲಿ ಶುದ್ಧಾಂಗ ಶುದ್ಧಿವುಳ್ಳವರಾಗಿದ್ದರೆ, ಎಂಥ ದೋಷಪೂರ್ಣವಾದ ಸಂವಿಧಾನವನ್ನೂ ದೇಶದ ಅಭಿವೃದ್ಧಿಗೆ ಬಳಸಬಲ್ಲರು. ಆದರೆ ಅವರಲ್ಲಿ ಈ ಯಾವ ಗುಣಗಳೂ ಇಲ್ಲದಿದ್ದರೆ, ಎಂಥ ಉತ್ತಮ ಸಂವಿಧಾನವೂ ದೇಶದ ಉದಾತ್ತತೆಯನ್ನು ಸಾಧಿಸಲಾರದು. ಎಷ್ಟೇ ಆದರೂ ಒಂದು ಯಂತ್ರದಂತೆ, ಸಂವಿಧಾನವೂ ನಿರ್ಜೀವ ವಸ್ತು. ಅದನ್ನು ನಿಯಂತ್ರಿಸುವ, ನಿರ್ವಹಿಸುವ ಜನರಿಂದಲೇ ಅದು ಜೀವ ಪಡೆದುಕೊಳ್ಳುತ್ತದೆ. ದೇಶದ ಹಿತಾಸಕ್ತಿಗೆ ತಮ್ಮ ಸರ್ವಸ್ವವನ್ನು ಸಮರ್ಪಿಸಬಲ್ಲ ಪ್ರಾಮಾಣಿಕ ನೇತಾರರ ಆವಶ್ಯಕತೆ ಇಂದು ನಮ್ಮ ದೇಶಕ್ಕೆ ಬಹಳಷ್ಟಿದೆ. ನಮ್ಮ ಬದುಕಿನಲ್ಲಿ ಒಡಕುಂಟು ಮಾಡುವ ಅನೇಕ ಪ್ರವೃತ್ತಿಗಳು ಆಗಾಗ ತಲೆಯೆತ್ತುವುದುಂಟು. ನಮ್ಮಲ್ಲಿ ಕೋಮು ಭೇದಗಳಿವೆ. ಜಾತಿ ಭಿನ್ನತೆಗಳಿವೆ. ಭಾಷಾ ವೈಷಮ್ಯಗಳಿವೆ, ಪ್ರಾದೇಶಿಕ ಪ್ರಭೇದಗಳಿವೆ. ಹೀಗೆಯೇ ಇನ್ನೂ ಅನೇಕ ಒಡಕಿನ ಸಂಗತಿಗಳಿವೆ. ಆದ್ದರಿಂದ ಇವೆಲ್ಲವನ್ನೂ ಮೆಟ್ಟಿ ಮೀರಿ ನಿಲ್ಲಬೇಕಾದರೆ, ನಮಗೆ ಸಶಕ್ತ ಚಾರಿತ್ರ್ಯದ ಜನ ಬೇಕು. ದೇಶದ ಹಿತಾಸಕ್ತಿಗಾಗಿ ತಮ್ಮ ಸಂಕುಚಿತ ಭೇದ-ಭಾವಗಳನ್ನು ಮರೆಯಬಲ್ಲ, ವಿಶಾಲ ರಾಷ್ಟ್ರದ ಉದ್ಧಾರಕ್ಕಾಗಿ ಕ್ಷುಲ್ಲಕ ಪೂರ್ವಾಗ್ರಹಗಳನ್ನು ತೊರೆಯಬಲ್ಲ, ಎಲ್ಲ ವಿಧಧ ಭಿನ್ನತೆಯನ್ನಳಿದು ಅಭಿನ್ನತೆಯನ್ನು ಸಾಧಿಸಬಲ್ಲ, ದೃಷ್ಟಾರರು ನಮಗಿಂದು ಬೇಕಾಗಿದ್ದಾರೆ. ನಮ್ಮ ರಾಷ್ಟ್ರ ಇಂಥ ಜನರನ್ನು ಬಹುಸಂಖ್ಯೆಯಲ್ಲಿ ಸೃಷ್ಟಿಸುವುದೆಂಬ ಆಶಾಭಾವನೆ ನಮ್ಮದು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ನಾವು ಪಡೆದ ಅನುಭವದ ಹಿನ್ನೆಲೆಯಿಂದ ನಾನು ಈ ಮಾತನ್ನು ಹೇಳುತ್ತಿದ್ದೇನೆ. ಹೊಸ ಹೊಸ ಸಂದರ್ಭ ಸನ್ನಿವೇಶಗಳಿಗೆ ಸ್ಪಂದಿಸಲು ಹೊಸ ಹೊಸ ವ್ಯಕ್ತಿಗಳು ಕಾಣಿಸಿಕೊಳ್ಳುತ್ತಾರೆ. ಇದು ಅನೇಕ ಸಲ ಸಂಭವಿಸಿದ್ದನ್ನು ನಾನೇ ನೋಡಿದ್ದೇನೆ. ಮುಂಚೂಣಿ ಕಾಂಗ್ರೆಸ್ ನೇತಾರರು ದಿಢೀರನೆ ಜೈಲಿಗೆ ತಳ್ಳಲ್ಪಟ್ಟಾಗ ಅವರ ಸ್ಥಾನ ತುಂಬಿಕೊಳ್ಳಲು, ರಾಷ್ಟ್ರೀಯ ಆಂದೋಲನವನ್ನು ಮುನ್ನಡೆಸಿಕೊಂಡು ಹೋಗಲು ಅನೇಕ ನವೋನವೀನ ನೇತಾರರು ಜನಸಾಮಾನ್ಯರ ಮಧ್ಯದಿಂದಲೇ ಉದ್ಭವಿಸಿದ್ದನ್ನು ನಾವು ಕಂಡಿದ್ದೇವೆ. ಹೀಗೆ ಆವಿಷ್ಕರಿಸಿದ ಆಂದೋಲನಕಾರರು ತಮ್ಮ ಹಿರಿಯ ನೇತಾರರಿಗಿಂತ ಯಾವ ರೀತಿಯಿಂದಲೂ ಕಡಿಮೆಯಿರಲಿಲ್ಲ. ದಕ್ಷತೆ, ಜಾಣ್ಮೆ, ಸಂಘಟನಾ ಚಾತುರ್ಯ, ಎಗ್ಗಿಲ್ಲದೆ ಮುನ್ನುಗ್ಗುವ ನಿರ್ಭೀತ ಸ್ವಭಾವ ಇತ್ಯಾದಿ ಗುಣ ವಿಶೇಷಗಳಿಂದ ಕೂಡಿದ ಅವರ ವ್ಯಕ್ತಿತ್ವಗಳು ಆಂದೋಲನವನ್ನು ಮುನ್ನಡೆಸುವಲ್ಲಿ, ಪ್ರಚಾರ ಪ್ರಕ್ಷೋಭೆಗಳನ್ನು ನಡೆಸುವಲ್ಲಿ ಯಾರನ್ನೂ ದಂಗು ಬಡಿಸುವಂತಿದ್ದವು. ಅವರ ಅದ್ಭುತ ಶಕ್ತಿ ಸಾಮರ್ಥ್ಯಗಳು ಕಲ್ಪನಾತೀತವಾಗಿದ್ದವು. ಆದ್ದರಿಂದ ದೇಶಕ್ಕೆ ಸಚ್ಚಾರಿತ್ರ್ಯವುಳ್ಳವರ ಅವಶ್ಯಕತೆಯಿರುವಾಗಲೆಲ್ಲ ಅಂಥವರು ಆವಿರ್ಭವಿಸುವುದು

ಖಂಡಿತ. ಆದರೆ, ಈ ಹಿಂದೆ ಸೇವೆಗೈದ ಜನರು ನಾವು ಸಾಕಷ್ಟು ಸೇವೆ ಮಾಡಿದ್ದೇವೆ, ಇನ್ನೇನು ಅದರ ಫಲವುಣ್ಣುವ ಕಾಲ ಸನ್ನಿಹಿತವಾಗಿದೆಯೆಂದು ವಿಶ್ರಾಂತಿ ಪಡೆಯುವಂತಿಲ್ಲ. ಇಂದು ನಮ್ಮ ದೇಶದಲ್ಲಿ ನಾವು ಎದುರಿಸಬೇಕಾದ ಸಮಸ್ಯೆ ಸವಾಲುಗಳು ಹಿಂದಿಗಿಂತಲೂ ಹೆಚ್ಚು ಕಠಿಣತರವಾಗಿವೆ. ಈ ಹಿಂದೆ ನಮ್ಮೊಳಗೇ ರಾಜಿ ಸಂಧಾನಗಳನ್ನು ಬಯಸುವ ಯಾವುದೇ ತಾಕಲಾಟಗಳಿರಲಿಲ್ಲ; ಹಂಚಿಕೊಳ್ಳಲು ಫಲಾಫಲಗಳೇನೂ ಇರಲಿಲ್ಲ; ಪಾಲು ಕೇಳಲು ಅಧಿಕಾರವಿರಲಿಲ್ಲ. ಆದರೆ ಈಗ ಇವೆಲ್ಲವೂ ನಮಗೆ ಲಭಿಸಿವೆ. ಮೇಲಾಗಿ ಅವುಗಳ ಆಕರ್ಷಣೆಯೂ ತುಂಬಾ ಹೆಚ್ಚಾಗಿದೆ. ಆದ್ದರಿಂದ ಈ ಎಲ್ಲಾ ಆಸೆ ಆಮಿಷಗಳನ್ನು ಮೀರಿ ದೇಶಸೇವೆಗೆ ಟೊಂಕಕಟ್ಟಿ ನಿಲ್ಲಬಲ್ಲ ಸದ್‌ಬುದ್ಧಿ ನಮಗೀಯಲೆಂದು ನಾನು ದೇವರಲ್ಲಿ ಪ್ರಾರ್ಥಿಸ ಬಯಸುತ್ತೇನೆ. ಅತುಲ ಛಲ, ಎದೆಗಾರಿಕೆಯ ಮೂಲಕ ಪಡೆದ ನಮ್ಮ ಸ್ವಾತಂತ್ರ್ಯ ಅರ್ಥಪೂರ್ಣವಾಗುವಂತೆ ನಾವೆಲ್ಲರೂ ದೇಶ ಸೇವೆಗೆ ತೊಡಗುವಂತಾಗಲಿಯೆಂಬುದೇ ನನ್ನ ಪ್ರಾಂಜಲ ಪ್ರಾರ್ಥನೆ.

ಮಹಾತ್ಮಾ ಗಾಂಧೀಜಿ ನಾವು ನಮ್ಮ ಗುರಿ ಮುಟ್ಟಲು ಅನುಸರಿಸುವ ವಿಧಿ ವಿಧಾನಗಳ ಪರಿಶುದ್ಧತೆಯ ಮೇಲೆ ಹೆಚ್ಚಿನ ಒತ್ತು ಕೊಡುತ್ತಿದ್ದರು. ಅವರ ಈ ಬೋಧನೆಗೆ ಪರಮ ಹಾಗೂ ಚಿರಂತನ ಮೌಲ್ಯವಿದೆಯೆಂಬುದನ್ನು ನಾವು ಮರೆಯಬಾರದು. ಅವರ ಸಂದೇಶ ಕೇವಲ ಸಂದಿಗ್ಧ ಸಮಯಗಳಿಗಲ್ಲ; ಅದು ಹೋರಾಟದ ಸಂದರ್ಭಕ್ಕೂ ಸೀಮಿತಿವಾಗಿಲ್ಲ. ಬದಲಾಗಿ, ಇಂದಿಗೂ ಆ ಸಂದೇಶದ ಮೌಲ್ಯ ಪ್ರಸ್ತುತವಾಗಿದೆ. ಯಾವುದೇ ತಪ್ಪಿಗೆ ಪರರನ್ನು ದೂಷಿಸುವ ಪವೃತ್ತಿ ನಮ್ಮಲ್ಲಿದೆ. ಅದಕ್ಕೆ ಬದಲಾಗಿ, ನಾವು ಕೂಡ ಆ ತಪ್ಪಿಗೆ ಭಾಜನರೇ ಎಂದು ನಮ್ಮನ್ನು ನಾವು ಒಳಹೊಕ್ಕು ಪ್ರಶ್ನಿಸಿಕೊಳ್ಳಬೇಕಿದೆ. ಮನಸ್ಸು ಮಾಡಿದರೆ, ನಮ್ಮ ಕ್ರಿಯೆ ಮತ್ತು ಧೋರಣೆಗಳನ್ನು ನಾವು ಬಹು ಸರಳವಾಗಿ ಶೋಧಿಸಿಕೊಳ್ಳಬಹುದು. ಮತ್ತೊಬ್ಬರ ಗುಣದೋಷಗಳನ್ನು ಸರಿಯಾಗಿ ಪರಾಮರ್ಶಿಸುವುದಕ್ಕಿಂತ ಸರಳವಾದ ಕೆಲಸವೆಂದರೆ, ನಮ್ಮನ್ನು ನಾವು ವಿಮರ್ಶಿಸಿಕೊಳ್ಳುವುದು. ಇನ್ನು ಮುಂದೆ ಈ ಸಂವಿಧಾನದೊಂದಿಗೆ ಕಾರ್ಯಕ್ಕಿಳಿಯಲಿರುವ ಸುದೈವಿಗಳೆಲ್ಲರೂ ಒಂದು ಮಾತನ್ನು ನೆನಪಿಡಬೇಕು: ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ನಮ್ಮದು ಒಂದು ಅನುಪಮ ವಿಜಯ, ಅದನ್ನು ಸಾಧಿಸಲು ಬಳಸಿದ ವಿಧಾನವೂ ಅಷ್ಟೇ ಅದ್ವಿತೀಯವಾದದ್ದು. ಈ ಸಾಧನ, ವಿಧಾನಗಳನ್ನು ನಾವು ನಮ್ಮ ರಾಷ್ಟ್ರಪಿತನಿಂದ ಕಲಿತುಕೊಂಡಿದ್ದೇವೆ. ಇಂಥ ಅನುಪಮ ಮಾರ್ಗದ ಮೂಲಕ ಗಳಿಸಿಕೊಂಡಿರುವ ಅಪೂರ್ವ ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಳ್ಳುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಅದು ನಿಜವಾದ ಅರ್ಥದಲ್ಲಿ ಈ ದೇಶದ ಶ್ರೀಸಾಮಾನ್ಯನಿಗೆ ಫಲ ನೀಡುವಂತೆ ಮಾಡುವುದು ನಮ್ಮ ಪರಮ ಕರ್ತವ್ಯವಾಗಿದೆ. ನಾವು ನಮ್ಮ ಸ್ವತಂತ್ರ್ಯ ಗಣರಾಜ್ಯವನ್ನು ಸುಸೂತ್ರವಾಗಿ ಮುನ್ನಡೆಸಿಕೊಂಡು ಹೋಗುವ ನವ-ಸಾಹಸಕ್ಕೆ ಆತ್ಮವಿಶ್ವಾಸದಿಂದ ತೊಡಗೋಣ. ನಮ್ಮೀ ಸಾಹಸಯಾತ್ರೆಯಲ್ಲಿ ಸತ್ಯ ಅಹಿಂಸೆಗಳು ನಮ್ಮ ಸಂಗಾತಿಗಳಾಗಲಿ. ನಮ್ಮೊಳಗಿನ ಅಂತರಾತ್ಮ, ನಮ್ಮ ಮೇಲಿನ ದೇವರು ನಮ್ಮನ್ನು ಮಾರ್ಗದಲ್ಲಿ ಮುನ್ನಡೆಸುವ ಅದಮ್ಯ ಚಿತ್‌ಚೇತನದ ಚಿಲುಮೆಗಳಾಗಲಿ.

ನಾನು ನನ್ನ ಮಾತನ್ನು ಮುಗಿಸುವ ಮುಂಚೆ ಈ ಮಹಾಸಭೆಯ ಎಲ್ಲ ಸದಸ್ಯರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸಬೇಕು. ಅವರಿಂದ ನನಗೆ ದೊರೆತ ಸೌಜನ್ಯ, ಗೌರವ, ಪ್ರೀತಿಗಾಗಿ

ನಾನು ಕೃತಜ್ಞನಾಗಿದ್ದೇನೆ. ಸಂವಿಧಾನ ಸಭೆಯ ಅಧ್ಯಕ್ಷನಾಗಿ ನಾನು ಅದರ ನಡವಳಿಕೆಗಳನ್ನು ದಿನಂಪ್ರತಿ ಕಣ್ಣಲ್ಲಿ ಕಣ್ಣಿಟ್ಟು ನೋಡಿದ್ದೇನೆ. ಉಳಿದೆಲ್ಲರಿಗಿಂತಲೂ ಹೆಚ್ಚಾಗಿ ಕರಡು ರಚನಾ ಸಮಿತಿಯ ಸದಸ್ಯರ ಕಾರ್ಯ ತತ್ಪರತೆಯನ್ನು ವೀಕ್ಷಿಸಿದ್ದೇನೆ. ವಿಶೇಷವಾಗಿ, ಅದರ ಅಧ್ಯಕ್ಷರಾಗಿರುವ ಡಾ: ಅಂಬೇಡ್ಕರರ ಪರಿಶ್ರಮ ಗಮನಾರ್ಹವಾದದ್ದು. ಅವರು ಅನಾರೋಗ್ಯದಿಂದ ಬಳಲುತ್ತಿದ್ದರೂ ಸತತವಾಗಿ ದುಡಿದಿದ್ದಾರೆ. ಅವರನ್ನು ಕರಡು ರಚನಾ ಸಮಿತಿಯ ಅಧ್ಯಕ್ಷರನ್ನಾಗಿ ಮಾಡಿದ್ದುದು ಅತ್ಯಂತ ಸಮಂಜಸವಾದ ತೀರ್ಮಾನವೆಂದು ನನ್ನ ಭಾವನೆ. ಅವರು ತಮ್ಮ ಆಯ್ಕೆಗೆ ನ್ಯಾಯ ದೊರಕಿಸಿಕೊಟ್ಟಿದ್ದಾರೆ. ತಮ್ಮ ದಕ್ಷತೆ ಹಾಗೂ ಸಮರ್ಥತೆಯಿಂದ ತಾವು ಕೈಗೊಂಡ ಕೆಲಸಕ್ಕೆ ಒಂದು ರೀತಿಯ ಪ್ರಜ್ವಲತೆಯನ್ನು ತಂದುಕೊಟ್ಟಿದ್ದಾರೆ. ಈ ದೃಷ್ಟಿಯಿಂದ ಉಳಿದ ಸದಸ್ಯರೂ ಅಷ್ಟೇ ದಕ್ಷತೆಯಿಂದ ದುಡಿದಿದ್ದಾರೆಂದು ಹೇಳಬಯಸುತ್ತೇನೆ. ಸಮಿತಿಯ ಅಧ್ಯಕ್ಷರಷ್ಟೇ ಸಮರ್ಪಣಾ ಭಾವದಿಂದ ತಮ್ಮನ್ನು ತಾವು ತೊಡಗಿಸಿಕೊಂಡ ಸಕಲ ಸದಸ್ಯರಿಗೆ ಸಮಗ್ರ ರಾಷ್ಟ್ರದ ಧನ್ಯವಾದಗಳು ಸಲ್ಲುತ್ತವೆ.

ತಾವು ಅನುವು ಮಾಡಿಕೊಡುವುದಾದರೆ, ನಾನು ನನ್ನ ಪರವಾಗಿಯೂ ಇಡೀ ಸದನದ ಪರವಾಗಿಯೂ ನಮ್ಮ ಸಂವಿಧಾನಿಕ ಸಲಹೆಗಾರರಾಗಿರುವ ಶ್ರೀ ಬಿ.ಎನ್. ರಾವ್ ಅವರಿಗೆ ಕೃತಜ್ಞತೆಗಳನ್ನು ಹೇಳಬಯಸುತ್ತೇನೆ. ಅವರು ಇಲ್ಲಿರುವಾಗಲೆಲ್ಲ ಇಡೀ ಸಭೆ ತನ್ನ ಕಾರ್ಯವನ್ನು ಸಮುಚಿತವಾಗಿ ನಡೆಸಿಕೊಂಡು ಹೋಗಲು ತಮ್ಮ ಜ್ಞಾನ ಪಾಂಡಿತ್ಯವನ್ನು ಧಾರೆಯೆರೆದಿದ್ದಾರೆ. ಎಲ್ಲ ಸದಸ್ಯರೂ ತಂತಮ್ಮ ಕೆಲಸವನ್ನು ನಿರಾತಂಕವಾಗಿ ನಡೆಸಿಕೊಂಡು ಹೋಗಲು ಅವಶ್ಯವಿದ್ದ ಎಲ್ಲ ಸಾಮಗ್ರಿಯನ್ನೂ ಅವರು ಒದಗಿಸಿದ್ದಾರೆ. ಈ ಕೆಲಸದಲ್ಲಿ ಶ್ರೀ ರಾವ್ ಅವರ ಸಂಶೋಧನಾ ಸಹಾಯಕರ ತಂಡ, ಅವರ ಸಿಬ್ಬಂದಿ ವರ್ಗ ಏಕೋದೃಢ ಭಕ್ತಿಯಿಂದ ದುಡಿದಿದೆ. ಅವರಿಗೂ ನಾವು ಆಭಾರಿಯಾಗಿದ್ದೇವೆ. ಕರಡು ಸಮಿತಿಗೆ ಅಮೂಲ್ಯ ಸಹಾಯ ಮಾಡಿದ ಶ್ರೀ ಎಸ್.ಎನ್. ಮುಖರ್ಜಿಯವರಿಗೆ ನಾವು ನೀಡಿದ ನುಡಿಗಾಣಿಕೆಯೂ ಅಷ್ಟೇ ಸಮರ್ಥನೀಯವಾಗಿದೆ.

## ಹಂಗಾಮಿ ರಾಷ್ಟ್ರಾಧ್ಯಕ್ಷರಾಗಿ ಚುನಾಯಿತರಾದಾಗ *

ಇದು ಒಂದು ಗಂಭೀರವಾದ ಸಂದರ್ಭ. ದೀರ್ಘ ಹೋರಾಟದ ನಂತರ ನಾವೊಂದು ಘಟ್ಟವನ್ನು ತಲುಪಿದ್ದೇವೆ. ಈಗ ಇನ್ನೊಂದು ಘಟ್ಟದ ನಮ್ಮ ಪಯಣ ಆರಂಭವಾಗುತ್ತಿದೆ. ನನ್ನ ಮೇಲೆ ತುಂಬಾ ಭಾರವಾದ ಹೊಣೆಯನ್ನು ಹೊರಿಸಿದ್ದೀರಿ. ಅದು ನಿಮ್ಮ ಔದಾರ್ಯದ ಫಲವೆಂದು ಬಗೆಯುತ್ತೇನೆ. ಒಬ್ಬ ವ್ಯಕ್ತಿಯನ್ನು ಅಭಿನಂದಿಸಬೇಕಾದ ಸಮಯ ಅವನನ್ನು ಒಂದು ಹುದ್ದೆಗೆ ನೇಮಕ ಮಾಡಿದಾಗಲ್ಲ, ಬದಲಾಗಿ, ಅವನು ನಿವೃತ್ತಿ ಹೊಂದಿದಾಗ ಎಂಬ ಮಾತನ್ನು ನಾನು ಆಗಾಗ ಹೇಳುತ್ತಲೇ ಇದ್ದೇನೆ. ತಾವು ನನ್ನ ಬಗ್ಗೆ ತೋರಿದ ವಿಶ್ವಾಸ, ಸದ್ಭಾವನೆ ಇತ್ಯಾದಿಗಳಿಗೆ ನಿಜವಾಗಿಯೂ ಅರ್ಹನೇ ಎಂಬುದನ್ನು ತಿಳಿಯಲು ನಾನು ನನ್ನ ನಿವೃತ್ತಿಯ ಕ್ಷಣದವರೆಗೆ ಕಾಯಬಯಸುತ್ತೇನೆ. ಎಲ್ಲ ಗೆಳೆಯರೂ ಹಲವಾರು ದಿಕ್ಕುದೆಸೆಗಳಿಂದ ನನ್ನ ಮೇಲೆ ಧಾರಾಕಾರವಾಗಿ ಸುರಿದ ಶ್ರದ್ಧೆ, ಸದ್ಭಾವನೆಗಳಿಗೆ ನಾನು ಯೋಗ್ಯನೇ ಎಂಬುದು ನಾನು ನನ್ನ ಹುದ್ದೆಯನ್ನು ತ್ಯಜಿಸಿದ ಮೇಲೆಯೇ ಋಜುವಾತಾಗಬೇಕು. ತಾವು ಆಡುತ್ತಿರುವ ಶ್ಲಾಘನೆಯ ಮಾತುಗಳನ್ನು ಕೇಳುತ್ತಾ ಕುಳಿತಾಗ ನನಗೆ ಮಹಾಭಾರತದ ಕಥೆಯೊಂದು ನೆನಪಾಗುತ್ತಿದೆ. ಮಹಾಭಾರತದಲ್ಲಿ ಅನೇಕ ಸಂಧಿಗ್ಧ ಸಂದರ್ಭಗಳ ಆಖ್ಯಾಯಿಕೆಯಿದೆ. ಹಾಗೆ ಎದುರಾದ ಎಲ್ಲ ಕಠಿಣತಮ ಸಮಸ್ಯೆಗಳಿಗೂ ಶ್ರೀ ಕೃಷ್ಣನು ಪರಿಹಾರ ಸೂಚಿಸುತ್ತಿದ್ದನು. ಒಮ್ಮೆ ಇಂಥ ಕಠಿಣ ಸಮಸ್ಯೆಯೊಂದು ಪಾಂಡವರಿಗೆ ಎದುರಾಯಿತು. ಅರ್ಜುನನು ಸೂರ್ಯಾಸ್ತದೊಳಗಾಗಿ ಒಂದು ಮಹಾಸಾಧನೆಗೈಯ್ಯುವುದಾಗಿಯೂ ಅದರಲ್ಲಿ ವಿಫಲನಾದರೆ ತಾನೇ ಬೆಂಕಿಗೆ ಆಹುತಿಯಾಗುವುದಾಗಿಯೂ ಪ್ರತಿಜ್ಞೆ ಮಾಡಿದ್ದನು. ದುರ್ದೈವವಶಾತ್ ಅವನ ಸಾಧನೆ ಸಾಧ್ಯವಾಗಲಿಲ್ಲ. ಹಾಗಾಗಿ ಅವನು ಅನಿವಾರ್ಯವಾಗಿ ಬೆಂಕಿಗಾಹುತಿಯಾಗುವ ಪ್ರಮೇಯ ಉದ್ಭವಿಸಿತು. ನೋಡನೋಡುತ್ತಲೇ ಅರ್ಜುನನ್ನು ಕಳೆದುಕೊಳ್ಳುವುದೆಂದರೆ ಪಾಂಡವರ ಕಲ್ಪನೆಗೂ ಮೀರಿದ ಸಂಗತಿಯಾಗಿತ್ತು. ಆದರೆ ಅರ್ಜುನನು ತನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಲು ದೃಢ ನಿರ್ಧಾರಿತನಾಗಿದ್ದನು. ಇಂಥ ಸಂಕಟಮಯ ಸಂದರ್ಭದಲ್ಲಿ ಕೃಷ್ಣನು ಒಂದು ಉಪಾಯ ಸೂಚಿಸಿ, ಸಮಸ್ಯೆಗೆ ಪರಿಹಾರ ಹುಡುಕಿಕೊಟ್ಟನು. ಅವನ ಪ್ರಕಾರ ಒಂದೆಡೆ ಕುಳಿತು ತನ್ನನ್ನು ತಾನು ಹೊಗಳಿಕೊಳ್ಳುವುದು ಅಥವಾ ಮತ್ತೊಬ್ಬರಿಂದ ನಡೆಯುವ ತನ್ನ ಮುಖ ಸ್ತುತಿಗೆ ಕಿವಿಗೊಡುವುದು ಈ ಎರಡೂ ಆತ್ಮಹತ್ಯೆಗೆ ಸಮಾನವಾದವುಗಳು. ಆದ್ದರಿಂದ ಅರ್ಜುನನು ತನ್ನನ್ನು ತಾನು ಹೊಗಳಿಕೊಂಡರೆ ಅಥವಾ ಮತ್ತೊಬ್ಬರ ಹೊಗಳಿಕೆಗೆ ಮನಸಾರೆ ಕಿವಿಗೊಟ್ಟರೂ ಸಾಕು, ಅದು ತನ್ನನ್ನು ತಾನು ಬೆಂಕಿಗಾಹುತಿ ಕೊಟ್ಟದ್ದಕ್ಕೆ ಸಮ ಎಂದು ಕೃಷ್ಣನು ಸಂಧಿಗ್ಧ ಸಮಸ್ಯೆಯನ್ನು ಲೀಲಾಜಾಲವಾಗಿ ಬಗೆಹರಿಸಿದನು. ತಾವೆಲ್ಲ ನನ್ನನ್ನು ಹೊಗಳಿ ಮಾಡುವ ಭಾಷಣಗಳನ್ನು ಕೇಳಿದಾಗ ನನಗೆ ಅಂಥದ್ದೇ ಭಾವನೆ ಬರುತ್ತದೆ. ಅನೇಕ ಸಲ ಇಂಥ ಸ್ತುತಿ ಮಾತುಗಳನ್ನು ನಾನು ಇದೇ ಅರ್ಥದಲ್ಲಿಯೇ ಗ್ರಹಿಸಿದ್ದೇನೆ. ಯಾಕೆಂದರೆ, ನನಗೆ ಚೆನ್ನಾಗಿ ಗೊತ್ತು: ನಾನು ಅನೇಕ ವಿಷಯಗಳಲ್ಲಿ ವಿಫಲನಾಗಿದ್ದೇನೆ; ಎಷ್ಟೋ ವಿಷಯಗಳನ್ನು ಸಾಧಿಸಲು ನನ್ನಿಂದ ಇನ್ನೂ ಸಾಧ್ಯವಾಗಿಲ್ಲ. ಆದ್ದರಿಂದ ಅರ್ಜುನನಂತೆ ಮೌನವಾಗಿ ಕುಳಿತು ನನ್ನ ಸ್ತುತಿ ಪಾಠ ಕೇಳಿ, ಕೃಷ್ಣ ಸೂಚಿಸಿದಂತಹ ಆತ್ಮ ಹತ್ಯೆಯೊಂದೇ ನನಗೆ ಉಳಿದಿರುವ ದಾರಿ.

* ಸಂವಿಧಾನ ಸಭೆಯ ಚರ್ಚೆಗಳು, ಸಂಪುಟ 12; 24, ಜನವರಿ, 1950.

ಆದರೆ ನಾನಿಲ್ಲಿ ಒಂದಿಷ್ಟು ಭಿನ್ನ ಸ್ಥಿತಿಯಲ್ಲಿದ್ದೇನೆ. ನಮ್ಮ ಪ್ರಧಾನ ಮಂತ್ರಿ, ಉಪ ಪ್ರಧಾನ ಮಂತ್ರಿಗಳು ನನ್ನ ಬಗ್ಗೆ ಭಾವಾವೇಶದಿಂದ ಮಾತಾಡಿದಾಗ, ನಾನು ಅವರಿಗೆ ಸ್ಪಂದಿಸದೇ ಇರಲು ಸಾಧ್ಯವಿಲ್ಲ. ನಾವು, ಕಳೆದ ಕಾಲು ಶತಮಾನಕ್ಕೂ ಹೆಚ್ಚು ದೀರ್ಘ ಕಾಲ ಕೂಡಿ ಬಾಳಿದ್ದೇವೆ, ಕೂಡಿ ಕೆಲಸ ಮಾಡಿದ್ದೇವೆ; ಅತ್ಯಂತ ನಿಕಟ ಸಂಪರ್ಕ ಸಾನಿಧ್ಯದಲ್ಲಿದ್ದುಕೊಂಡು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ್ದೇವೆ. ನಾವೆಂದೂ ಧೃತಿಗೆಡಲಿಲ್ಲ. ಬದಲಾಗಿ, ಐಕ್ಯ ಹೋರಾಟದ ಮೂಲಕ ಯಶಸ್ಸು ಸಾಧಿಸಿದ್ದೇವೆ. ಆದರೆ ನಾನೀಗ ಈ ಸ್ಥಾನದಲ್ಲಿ ಪವಡಿಸಿದ್ದೇನೆ. ಅವರಾದರೋ ನನ್ನೆದುರಿನಲ್ಲಿ ಕುಳಿತಿದ್ದಾರೆ. ಇವರಲ್ಲದೆ ಇನ್ನೂ ಅನೇಕ ಜನ ನನ್ನ ಸಹವರ್ತಿಗಳೂ, ಸ್ನೇಹಿತರೂ ಇಲ್ಲಿ ಇದ್ದಾರೆ. ಅವರ ಸಾನಿಧ್ಯವೂ ನನಗೆ ಅಷ್ಟೇ ಮೌಲ್ಯಯುತವಾಗಿದೆ. ಎಲ್ಲ ಮಂತ್ರಿ ಮಾನ್ಯರೂ, ಅವರ ಸಹಾಯಕ್ಕೆ ನಿಂತಿರುವ ಸಮಸ್ತ ಸಿಬ್ಬಂದಿ ವರ್ಗದವರೂ, ಈ ಎಲ್ಲರ ಸದ್ಭಾವ ನನ್ನೊಂದಿಗಿದೆ. ಈ ಸದನದ ಹೊರಗೂ ಅನೇಕ ಗೆಳೆಯರ ಒಂದು ಬೃಹತ್ ಸಮೂಹವೇ ಇದೆ. ನನ್ನ ಮೇಲೆ ಹೊರಿಸಿರುವ ಈ ಗುರುತರವಾದ ಜವಾಬ್ದಾರಿಯನ್ನು ಎಲ್ಲರಿಗೂ ತೃಪ್ತಿಯಾಗುವಂತೆ ನಿಭಾಯಿಸಬಲ್ಲೆನೆಂಬ ವಿಶ್ವಾಸ ನನಗಿದೆ. ಇದೆಲ್ಲವನ್ನೂ ನಾನೇ ಮಾಡಿ ಮುಗಿಸಬಲ್ಲೆನೆಂಬ ಅಹಮಿಕೆಯಿಂದ ಈ ಮಾತನ್ನು ನಾನು ಹೇಳುತ್ತಿಲ್ಲ. ಸಮಸ್ತರ ಐಕ್ಯ ಪ್ರಯತ್ನದಿಂದ ಈ ಕಾರ್ಯಭಾರಗಳನ್ನು ಸಮುಚಿತವಾಗಿ ನಿರ್ವಹಿಸಲು ಸಾಧ್ಯವಾಗುವುದೆಂಬ ಅನಿಸಿಕೆ ನನ್ನದು.

ಇಂದು ನಮ್ಮ ದೇಶ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ನಾವು ಎರಡು ವರ್ಷಗಳ ಹಿಂದಿನವರೆಗೆ ಮಾಡುತ್ತಾ ಬಂದ ಕೆಲಸಗಳಿಗಿಂತಲೂ ಇಂದು ಕೈಗೆತ್ತಿಕೊಳ್ಳಬೇಕಾದ ಕೆಲಸದ ಸ್ವರೂಪ ತುಂಬಾ ಭಿನ್ನವಾದದ್ದೆಂಬುದು ನನ್ನ ವಿಚಾರ. ಇಂದು ನಮ್ಮ ಕಾರ್ಯದಲ್ಲಿ ನಮಗೆ ಹಿಂದೆಂದಿಗಿಂತಲೂ ಹೆಚ್ಚಿನ ಕಾಳಜಿ, ಭಕ್ತಿ ಮತ್ತು ತತ್ಪರತೆಯ ಅವಶ್ಯಕತೆಯಿದೆ. ಜೊತೆಗೆ ಹಿಂದೆಂದಿಗಿಂತಲೂ ಮಹತ್ತರ ತ್ಯಾಗಕ್ಕೆ ನಾವು ಸಿದ್ಧರಾಗಬೇಕಿದೆ. ನಮ್ಮ ದೇಶ ಈ ಕಾಲದ ಕರೆಗೆ ಓಗೊಟ್ಟು, ಅದರ ಮಹಾಜನತೆಯ ಉದಾತ್ತ ಆಶೋತ್ತರಗಳನ್ನು ಈಡೇರಿಸುವ ಜವಾಬ್ದಾರಿಯನ್ನು ಹೊರಬಲ್ಲ ಧೀಮಂತ ಸ್ತ್ರೀ ಪುರುಷರಿಗೆ ಜನ್ಮ ಕೊಡಬಲ್ಲದೆಂಬ ವಿಶ್ವಾಸ ನನಗಿದೆ. ಅದು ನನ್ನ ಆಶಯವೂ ಹೌದು. ಇಂಥ ಘನತರ ಜವಾಬ್ದಾರಿಯನ್ನು ನಿಭಾಯಿಸಲು ದೇವರು ನಮಗೆ ಶಕ್ತಿ ಸಾಮರ್ಥ್ಯ ನೀಡಲೆಂದು ಪ್ರಾರ್ಥಿಸೋಣ.

## ಸಂಸತ್ತಿನ ಸದಸ್ಯರನ್ನುದ್ದೇಶಿಸಿ ಪ್ರಥಮ ಭಾಷಣ *

ಮಾನ್ಯ ಸಂಸತ್ ಸದಸ್ಯರೇ, ಭಾರತ ಗಣರಾಜ್ಯದ ಸಂಸತ್ತಿನ ಪ್ರಥಮ ಸದಸ್ಯರಾಗಿ ಚುನಾಯಿತರಾಗಿರುವ ತಮ್ಮೆಲ್ಲರನ್ನೂ ಇಂದು ನಾನಿಲ್ಲಿ ಹಾರ್ದಿಕವಾಗಿ ಸ್ವಾಗತಿಸುತ್ತೇನೆ. ನಮ್ಮ ಸಂವಿಧಾನದಡಿಯಲ್ಲಿ ಚುನಾವಣೆಯನ್ನು ನಡೆಸಿರುವ ನಾವು ಈಗಾಗಲೇ ಸಂವಿಧಾನದ ವಿಧಿಗಳಿಗನುಗುಣವಾಗಿ ಶಾಸನ ಸಭೆಗಳನ್ನು ರಚಿಸುವ, ರಾಜ್ಯದ ಮುಖ್ಯಸ್ಥರನ್ನು ಚುನಾಯಿಸುವ ಕ್ರಿಯೆಗಳನ್ನು ಜಾರಿಗೊಳಿಸಿದ್ದೇವೆ. ಹೀಗಾಗಿ ನಮ್ಮ ಪಯಣದ ಮೊದಲ ಘಟ್ಟವನ್ನು ತಲುಪಿದಂತಾಗಿದೆ. ಮೊದಲ ಘಟ್ಟವನ್ನು ತಲುಪುತಿದ್ದಂತೆಯೇ ಮುಂದಿನ ಘಟ್ಟಕ್ಕೆ ನಾವು ಹೆಜ್ಜೆ ಹಾಕುತ್ತಿದ್ದೇವೆ. ಮುನ್ನಡೆಯ ದಾರಿಯಲ್ಲಿ ಭರದಿಂದ ಹೆಜ್ಜೆ ಹಾಕುವ ದೇಶಕ್ಕಾಗಲೀ ಅಥವಾ ಜನತೆಗಾಗಲೀ ವಿಶ್ರಾಂತಿಯ ತಾಣವೆಂಬುದಿಲ್ಲ! ಸಂಸತ್ತಿನ ಪ್ರಿಯ ಸದಸ್ಯರೇ, ನೀವು ನಮ್ಮ 170 ಮಿಲಿಯನ್ ಜನರಿಂದ ಹೊಸದಾಗಿ ಚುನಾಯಿತರಾಗಿ ಬಂದಿದ್ದೀರಿ. ಈ ಬೃಹತ್ ಸಂಖ್ಯೆಯ ಜನತೆಯ ಹೆಗಲೆಣೆಯಾಗಿ ಅವರೊಂದಿಗೆ ಜೊತೆಗೂಡಿ ಪಯಣಿಸಬೇಕಾದ ಯಾತ್ರಿಕರು ನೀವಾಗಿದ್ದೀರಿ. ನಿಮ್ಮದು ಒಂದು ಅಪೂರ್ವವಾದ ಅವಕಾಶ. ಅಂತೆಯೇ ಅನುಪಮ ಭಾರದ ಒಂದು ಜವಾಬ್ದಾರಿ ನಿಮ್ಮ ಹೆಗಲ ಮೇಲಿದೆ.

ಈ ಚಾರಿತ್ರಿಕ ಸಂದರ್ಭದಲ್ಲಿ ನಿಮ್ಮನ್ನು ಉದ್ದೇಶಿಸಿ ಮಾತನಾಡುತ್ತಿರುವ ನನ್ನಲ್ಲಿ ನಮ್ಮೀ ಪ್ರಾಚೀನ ಭೂಮಿಯ ಭವಿಷ್ಯತ್ತಿನ ಬಗ್ಗೆ ಉದಾತ್ತ ಭಾವನೆಗಳು ಉಮ್ಮಳಿಸಿ ಬರುತ್ತಿವೆ. ಈ ದೇಶದ ಉದ್ದಗಲಕ್ಕೂ ವಾಸಿಸುತ್ತಿರುವ ಅಸಂಖ್ಯಾತ ಸ್ತ್ರೀ ಪುರುಷರ ಬಗ್ಗೆ ಭೂಮಾನುಭವದ ಅನಿಸಿಕೆಗಳು ನನ್ನಲ್ಲಿ ಅಂಕುರಿಸುತ್ತಿವೆ. ಸದ್ವಿಧಿಯೊಂದು ನಮಗೆ ಕೈ ಮಾಡಿ ಕರೆಯುತ್ತಿದೆ. ಅದರ ಕರೆಗೆ ಓಗೊಡಬೇಕಾದದ್ದು ನಮ್ಮ ಕರ್ತವ್ಯ. ಸಹಸ್ರಾರು ವರ್ಷಗಳ ಹಿಂದೆ ಆರಂಭವಾದ ತನ್ನ ದೀರ್ಘ ಕಥೆಯುದ್ದಕ್ಕೂ ಹಲವಾರು ಸುಖ ದುಃಖದ ಮಜಲುಗಳನ್ನು ದಾಟುತ್ತಾ ಬಂದಿರುವ, ಈ ಮಹಾನ್ ದೇಶದ ಸೇವೆಗಾಗಿ ಮೊಳಗುತ್ತಿರುವ ಈ ಕರೆಗೆ ನಾವು ಏಕೋದೃಢ ಚಿತ್ತದಿಂದ ಕಿವಿಗೊಡಬೇಕಾಗಿದೆ. ಈ ನಾಡಿನ ಇತಿಹಾಸದುದ್ದಕ್ಕೂ ಅದು ಹಲವು ಏಳು-ಬೀಳುಗಳನ್ನು ಕಂಡಿದೆ. ಮಹಾನತೆಯ ಮೇರುವೇರಿ ಮೆರೆದ ಅದು, ಅನೇಕ ದುರಂತದ ಪ್ರಪಾತಕ್ಕೂ ಧುಮುಕಿದೆ! ಭಾರತದ ದೀರ್ಘ ಇತಿಹಾಸದ ಇನ್ನೊಂದು ಘಟ್ಟದ ಹೊಸ್ತಿಲಲ್ಲಿ ನಿಂತಿರುವ ನಾವು, ಅದರ ಸೇವೆಗೆ ಮತ್ತೊಮ್ಮೆ ಕಂಕಣಬದ್ಧರಾಗಬೇಕಿದೆ. ನಮ್ಮ ಅತ್ಯುತ್ತಮ ಸೇವೆಯ ಅವಶ್ಯಕತೆ ಈಗ ಅದಕ್ಕಿದೆ. ನಾವೆಲ್ಲರೂ ಈ ದೇಶದ ಸೇವೆಗೈಯ್ಯುವ ಪ್ರಮಾಣ ವಚನ ಸ್ವೀಕರಿಸಿದ್ದೇವೆ. ಆ ವಚನದ ಪಾಲನೆಗೆ ನಮ್ಮನ್ನು ನಾವು ಸಮರ್ಪಿಸಿಕೊಳ್ಳಬೇಕಿದೆ.

ಅನೇಕ ವರ್ಷಗಳ ಪರಾಧೀನತೆಯ ನಂತರ ಭಾರತ ತನ್ನ ಸ್ವಾತಂತ್ರ್ಯವನ್ನು ಪಡೆದುಕೊಂಡಿದೆ. ಯಾವುದೇ ಬೆಲೆ ತೆತ್ತಾದರೂ ನಾವು ಆ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳಬೇಕಿದೆ, ಸಂರಕ್ಷಿಸಿಕೊಳ್ಳಬೇಕಿದೆ; ಮಿಗಿಲಾಗಿ, ಅದರ ನೆಲೆಯನ್ನು ವಿಸ್ತೃತಗೊಳಿಸಿಕೊಳ್ಳಬೇಕಿದೆ. ಯಾಕೆಂದರೆ, ಆ ಮೂಲಕ ಮಾತ್ರ ನಾವು ನಮ್ಮ ಪ್ರಗತಿಗೆ ಬುನಾದಿ ಹಾಕಬಹುದಾಗಿದೆ. ಸ್ವಾತಂತ್ರ್ಯವೆಂಬುದು ತನ್ನಷ್ಟಕ್ಕೆ ತಾನು ಏನೂ ಅಲ್ಲ. ಅದು ನಮ್ಮ ಜನತೆಯ ಕಷ್ಟ ಕಾರ್ಪಣ್ಯಗಳನ್ನು ನಿರ್ನಾಮಿಸಬೇಕು.

* ಸಂಸದೀಯ ಚರ್ಚೆಗಳು (ಲೋಕ ಸಭೆ), ಸಂಪುಟ 1, 16 ಮೇ 1952.

ಅವರ ನೋವಿನ ಹೊರೆಯನ್ನು ಇಳಿಸಿ, ಅಮಿತ ಸುಖ ಸಾಧನೆಗೆ ಸಾಧನವಾಗಬೇಕು. ಆದ್ದರಿಂದ ನಮ್ಮ ಸಂವಿಧಾನದಲ್ಲಿ ಅಡಕಗೊಳಿಸಲಾದ ಸಮಾನತೆ, ಸಾಮಾಜಿಕ ಮತ್ತು ಆರ್ಥಿಕ ನ್ಯಾಯ ಮುಂತಾದ ಉದಾತ್ತ ಆದರ್ಶಗಳನ್ನು ನಿಜಗೊಳಿಸುವ ಪ್ರಯತ್ನ ಮಾಡುತ್ತ ನಮ್ಮ ಜನತೆಯ ಆರ್ಥಿಕ ಮುನ್ನಡೆಯನ್ನು ತ್ವರಿತಗೊಳಿಸುವ ಕ್ರಮ ಕೈಗೊಳ್ಳಬೇಕಾಗಿದೆ. ಈ ದಾರಿಯಲ್ಲಿ ನಾವು ಪಡುವ ಶ್ರಮಕ್ಕೆ ಅತ್ಯಂತ ಹೆಚ್ಚಿನ ಮಹತ್ವವಿದೆ. ಭಾರತದ ಚರಿತ್ರೆಯಾದ್ಯಂತ ಮಾನವ ಚೇತನದ ಇನ್ನಿತರ ತುಡಿತ ಒತ್ತಾಸೆಗಳಿಗೂ ಅಷ್ಟೇ ಮಹತ್ವಕೊಡಲಾಗಿದೆ. ಬಹುಶಃ ಇದು ಭಾರತದ ವೈಶಿಷ್ಟ್ಯವಾಗಿದೆ. ಇತ್ತೀಚೆಗೆ ನಾವು ಭಾರತದ ಪ್ರಾಚೀನ ಚೇತನದ ಒಂದು ನಿದರ್ಶನವನ್ನು ಮಹಾತ್ಮಾಗಾಂಧೀಜಿಯಲ್ಲಿ ಕಂಡಿದ್ದೇವೆ. ನಮ್ಮನ್ನು ಸ್ವಾತಂತ್ರ್ಯದೆಡೆಗೆ ಮುನ್ನಡೆಸಿದ ಗಾಂಧೀಜಿ, ಭಾರತದ ಆರ್ಷೇಯ ಸತ್‌ಚೇತನದ ಸಾಕಾರವಾಗಿದ್ದರು. ಅವರಿಗೆ ರಾಜಕೀಯ ಸ್ವಾತಂತ್ರ್ಯ ಒಂದು ಮಹತ್ವದ ಹೆಜ್ಜೆಯಾಗಿತ್ತು. ಆದರೆ ಮಾನವ ಚೇತನದ ವ್ಯಾಪಕ ಸ್ವಾತಂತ್ರ್ಯದ ದಾರಿಯಲ್ಲಿ ಒಂದೇ ಒಂದು ಹೆಜ್ಜೆ ಮಾತ್ರವಾಗಿತ್ತು. ಅವರು ನಮಗೆ ಶಾಂತಿ ಅಹಿಂಸೆಯ ಮಾರ್ಗ ತೋರಿದ್ದಾರೆ. ಆದರೆ ಅವರದು ಸ್ಮಶಾನ ಶಾಂತಿಯಲ್ಲ; ಅಂತೆಯೇ ಅಳ್ಳೆದೆಯ ಅಂಜುಬುರುಕನ ಅಹಿಂಸೆಯೂ ಅಲ್ಲ. ಪ್ರಾಚೀನ ಭಾರತದ ಮಹಾನ್ ಋಷಿ ಮುನಿಗಳಂತೆ ಅವರೂ ನಮಗೆ ಕಲಿಸಿದ ಪಾಠ ಅಮೂಲ್ಯವಾದದ್ದು. ದ್ವೇಷಾಸೂಯೆಯ ಮೂಲಕ, ಕ್ರೌರ್ಯ ಹಿಂಸೆಯ ಮೂಲಕ ಮಹಾನ್ ಗುರಿ ಮುಟ್ಟಲು ಸಾಧ್ಯವಿಲ್ಲ. ಸಮುಚಿತವಾದ ಧ್ಯೇಯಾದರ್ಶಗಳು ಸಾಧಿತವಾಗಬೇಕಾದರೆ, ಸಮ್ಯಕ್ ಆಚಾರದ ಮೂಲಕ ಮಾತ್ರ ಸಾಧ್ಯ ಎಂಬುದು ಅವರ ಬೋಧೆಯ ಸಾರ ಸರ್ವಸ್ವ. ಇದು ಕೇವಲ ಭಾರತೀಯರಾದ ನಮಗೆ ಮಾತ್ರ ಬೋಧಿಸಿದ ಮೂಲಭೂತ ಪಾಠವಾಗಿರದೆ, ಜಗತ್ತಿನ ಸಮಸ್ತ ಜನತೆಗೂ ಮಾಡಲಾಗಿರುವ ಉದ್ಬೋಧನೆಯಾಗಿದೆಯೆಂದು ಹೇಳಬಯಸುತ್ತೇನೆ.

ಈ ಧೋರಣೆ ಇವತ್ತಿಗೂ ಫಲ ನೀಡುತ್ತಿದೆ. ನಾವು ಇನ್ನು ಮುಂದೆಯೂ ಈ ಧೋರಣೆಯನ್ನೇ ಮುಂದುವರೆಸಿಕೊಂಡು ಹೋಗುವುದರಿಂದ ಇಂದು ಜಗತ್ತಿನ ಅನೇಕ ಭಾಗಗಳಲ್ಲಿ ಅಸ್ತಿತ್ವದಲ್ಲಿರುವ ಕರ್ಷಣದ ವಾತಾವರಣವನ್ನು ಒಂದಿಷ್ಟಾದರೂ ತಿಳಿಗೊಳಿಸಲು ಪ್ರಯತ್ನಿಸಬಹುದೆಂದು ನನಗೆ ವಿಶ್ವಾಸವಿದೆ. ನಮ್ಮ ಸರ್ಕಾರವು ಬೇರೊಬ್ಬರ ಹಸ್ತಕ್ಷೇಪವನ್ನು ಹೇಗೆ ಸಹಿಸುವುದಿಲ್ಲವೋ ಹಾಗೆಯೇ ಮತ್ತೊಂದು ರಾಷ್ಟ್ರದಲ್ಲಿ ಹಸ್ತಕ್ಷೇಪ ಮಾಡಲೂ ಬಯಸುವುದಿಲ್ಲ. ನಮಗೆ ಸಾಧ್ಯವಿರುವ ಕ್ಷೇತ್ರಗಳಲ್ಲೆಲ್ಲಾ ನಾವು ಸಹಕಾರದ ವಿಧಾನವನ್ನು ಅನುಸರಿಸಲು ಪ್ರಯತ್ನಿಸಿದ್ದೇವೆ ಮತ್ತು ಶಾಂತಿಯ ಮಹಾಕಾರಣಕ್ಕಾಗಿ ದುಡಿಯುವವರೆಲ್ಲರಿಗೂ ನಮ್ಮ ಸದಧಿಕಾರ, ಸದ್ಭಾವದ ಬೆಂಬಲ ಸದಾ ನೀಡುತ್ತಿದ್ದೇವೆ. ನಾವು ಯಾರ ಮೇಲೂ ನಮ್ಮ ಅಧಿಕಾರ, ಅಭಿಪ್ರಾಯಗಳನ್ನು ಹೇರಬಯಸುವುದಿಲ್ಲ. ಆದರೂ ಇಂದಿನ ಜಗತ್ತಿನಲ್ಲಿ ಯಾವೊಂದು ರಾಷ್ಟ್ರವೂ ಸಂಪೂರ್ಣ ಸ್ವತಂತ್ರವಾಗಿ, ಪರಭಾರೆಯಾಗಿ ಉಳಿಯಲು ಸಾಧ್ಯವಿಲ್ಲ. ಪರಸ್ಪರ ಅವಲಂಬನೆ, ಅಂತರರಾಷ್ಟ್ರೀಯ ಸಹಕಾರ, ಈ ಕಾಲದ ಅನಿವಾರ್ಯತೆಗಳಾಗಿವೆ. ಮುಂದೊಂದು ದಿನ ಜಗತ್ತಿನ ಎಲ್ಲ ರಾಷ್ಟ್ರಗಳೂ ಒಗ್ಗೂಡಿ ಇಡೀ ಮಾನವ ಕುಲದ ಮುನ್ನಡೆಗೆ ಮಹಾನ್ ಸಹಕಾರದ ಪ್ರಯತ್ನ ಮಾಡಬಹುದೆಂದೂ ಆ ಮೂಲಕ ಎಲ್ಲಾ ರಾಷ್ಟ್ರಗಳ

ಸರ್ವೋದಯ ಸಾಧಿತವಾಗಬಹುದೆಂದೂ ಆಶಿಸಬಹುದಾಗಿದೆ. ಈಗ ಸುಮಾರು ಒಂದು ವರ್ಷದಿಂದಲೂ ಕೋರಿಯಾದಲ್ಲಿ ಶಾಂತಿ ನೆಲೆಸುವಂತೆ ಮಾಡುವ ಪ್ರಯತ್ನಗಳು ನಡೆಯುತ್ತಿವೆ. ಏಶಿಯಾದ ದೂರಪೂರ್ವದ ರಾಷ್ಟ್ರಗಳನ್ನು ಕಾಡುತ್ತಿರುವ ಸಮಸ್ಯೆಗಳಿಗೆ ಶಾಂತಿಯುತವಾದ ಪರಿಹಾರ ಕಂಡುಕೊಳ್ಳಲು ಕಳೆದ ಒಂದು ವರ್ಷದಿಂದಲೂ ಹೆಣಗಲಾಗುತ್ತಿದೆ. ಕಡೆಗೂ ಈ ಪ್ರಯತ್ನಗಳಿಗೆ ಯಶಸ್ಸು ದೊರೆತು ಅಲ್ಲಿ ಶಾಂತಿ ಸ್ಥಾಪಿತವಾಗುವುದೆಂಬ ನನ್ನ ಆಶಯವನ್ನು ಅನೇಕ ಸಂದರ್ಭಗಳಲ್ಲಿ ನಾನು ಅಭಿವ್ಯಕ್ತಿಸಿದ್ದೇನೆ. ಅತ್ಯಂತ ದಾರುಣ ದುರಂತವೆಂದರೆ, ಕೋರಿಯಾದ ಜನತೆಗೆ ನಾವು ನಮ್ಮ ಸದ್ಭಾವವನ್ನು ಎಷ್ಟೇ ತೋರಿದರೂ ಅದರಿಂದ ಏನೂ ವ್ಯತ್ಯಾಸವಾಗಿಲ್ಲ, ಬದಲಾಗಿ, ಈ ಪ್ರಾಚೀನ ರಾಷ್ಟ್ರ ಯುದ್ಧ, ಹಸಿವು, ಕ್ಷಾಮ, ಡಾಮರಗಳಿಗೆ ಬಲಿಯಾಗಿ, ವಿನಾಶದ ಪ್ರಪಾತಕ್ಕೆ ಬಿದ್ದಿದೆ. ಅದರ ಈ ಸ್ಥಿತಿಗೆ ಯಾವುದೇ ಸಮರ್ಥನೆಗಳನ್ನು ಮುಂದಿಡಬಹುದಾದರೂ ಅದು ಜಗತ್ತಿನ ನಮ್ಮ ಮುಂದಿರುವ ಗಂಭೀರ, ಗುರುತರ ಕಾರ್ಯಭಾರದ ಸಮ್ಮುಖದಲ್ಲಿ ತಾವು ಈ ಪ್ರಾಚೀನವಾದರೂ ನಿತ್ಯನೂತನವಾದ ಭಾರತದ ಸಂದೇಶವನ್ನು ನೆನಪಿಟ್ಟುಕೊಳ್ಳುವಿರೆಂದು ನಾನು ನಿಜವಾಗಿಯೂ ನಂಬುತ್ತೇನೆ. ಚಿಕ್ಕಪುಟ್ಟ ಗುರಿಗೊತ್ತುಗಳನ್ನು ಬದಿಗಿಟ್ಟು, ರಾಷ್ಟ್ರದ ಮೇಲಾಗಿ, ಮಾನವತೆಯ ಮಹಾನ್ ಕಾರಣಕ್ಕಾಗಿ, ನೈಜ ಸಹಕಾರದ ಭಾವದಿಂದ ಶ್ರಮಿಸುವಿರೆಂಬ ಅಚಲ ವಿಶ್ವಾಸ ನನಗಿದೆ. ನಾವು ಭಾರತದ ಐಕ್ಯತೆಯನ್ನು ನಿರ್ಮಿಸಬೇಕಾಗಿದೆ, ನಮಗಾಗಿ ಕಾತರದಿಂದ ಕಾಯುತ್ತಿರುವ, ಪರಮೋನ್ನತ ಭವಿಷ್ಯತ್ತನ್ನು ಸಾಕಾರಗೊಳಿಸಲು ಅಹರ್ನಿಸಿ ದುಡಿಯುತ್ತಿರುವ, ಸ್ವತಂತ್ರ ಜನತೆಯ ಐಕ್ಯತೆಯನ್ನು ಸಾಧಿಸಬೇಕಿದೆ. ಆದ್ದರಿಂದ ನಮ್ಮ ಐಕ್ಯತೆಯನ್ನು ದುರ್ಬಲಗೊಳಿಸಬಲ್ಲ ಎಲ್ಲ ಒಲವು ನಿಲುವುಗಳಿಗೆ ಇತಿಶ್ರೀ ಹಾಡಬೇಕಿದೆ. ನಮ್ಮ ಮಧ್ಯೆ ಕೋಮುವಾದ, ಪ್ರಾಂತೀಯವಾದ ಮತ್ತು ಜಾತೀಯವಾದದ ಗೋಡೆಗಳನ್ನು ನಿರ್ಮಿಸಿ, ನಮ್ಮ ಐಕ್ಯತೆಯನ್ನು ನಿಶ್ಯಕ್ತಗೊಳಿಸುವ ಎಲ್ಲ ಭಾವನೆಗಳನ್ನೂ ದಮನಿಸಬೇಕಿದೆ. ಅನೇಕ ಆರ್ಥಿಕ ಮತ್ತು ರಾಜಕೀಯ ವಿಷಯಗಳಿಗೆ ಸಂಬಂಧಿಸಿದಂತೆ ಅಭಿಪ್ರಾಯ ಭೇದ, ಕಾಣಿಸಿಕೊಳ್ಳುವುದು ಸಹಜ, ಸಾಧ್ಯ. ಆದರೆ, ಭಾರತ ಮತ್ತು ಅದರ ಜನತೆಯ ಏಳ್ಗೆಯೇ ನಮ್ಮ ಪ್ರಧಾನ ಒತ್ತಾಸೆಯಾಗಿರುವುದಾದರೆ, ನಾವು ಈ ಅಭಿಪ್ರಾಯ ಭಿನ್ನತೆಗಳನ್ನೂ ನಮ್ಮ ಸಾರ್ವಜನಿಕ ಬದುಕಿನ ಸಮೃದ್ಧಿಗಾಗಿ ಬಳಸಬಹುದು. ಶಾಂತಿಯುತ ಸಹಕಾರದ ವಿಧಾನಗಳ ಮೂಲಕ ಮಾತ್ರ ನಾವು ಭಾರತದ ಮೇಲ್ಮೆಯನ್ನು ಸಾಧಿಸಬಹುದು.

ತಾವೆಲ್ಲ ಈ ದೃಷ್ಟಿಯಿಂದಲೇ ಈ ದೇಶದ ಸಮಸ್ಯೆಗಳನ್ನು ಎದುರಿಸಬೇಕೆಂದು ನಾನು ತಮ್ಮಲ್ಲಿ ಭಿನ್ನವಿಸಿಕೊಳ್ಳುತ್ತೇನೆ. ಈ ನಿಲುವಿನಿಂದಲೇ ತಾವು ಸ್ನೇಹಶೀಲ ದೃಷ್ಟಿ ಮತ್ತು ನಿರ್ಭೀತತೆಯಿಂದ ಜಗತ್ತನ್ನೆದುರಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇಂದು ಎಲ್ಲೆಲ್ಲೂ ಭಯವೇ ಆವರಿಸಿದೆ. ಸಮೀಪಿಸುತ್ತಿರುವ ಪ್ರಳಯವೊಂದರ ಭಯ ಪ್ರಪಂಚದ ಮುಖ ಕಪ್ಪಿಟ್ಟುಕೊಳ್ಳುವಂತೆ ಮಾಡುತ್ತಿದೆ. ವ್ಯಕ್ತಿಯಾಗಲಿ, ರಾಷ್ಟ್ರವಾಗಲಿ, ಭಯದ ಮೂಲಕ ಬೆಳೆಯುವುದಿಲ್ಲ. ನಿರ್ಭೀತತೆಯ ಮೂಲಕ, ನಮ್ಮ ಪ್ರಾಚೀನ ಗ್ರಂಥಗಳು ಹೇಳುವಂತೆ, ಅಭಯದ ಮೂಲಕ ಮಾತ್ರ ನಾವು ಬೆಳೆಯಲು ಸಾಧ್ಯವಿದೆ.

ನಾವು ಪ್ರಪಂಚದ ಎಲ್ಲ ರಾಷ್ಟ್ರಗಳ ಜೊತೆಗೆ ಸ್ನೇಹ ಸೌಹಾರ್ದದ ಧೋರಣೆಯನ್ನು ನಿರಂತರವಾಗಿ ಅನುಸರಿಸುತ್ತಾ ಬಂದಿದ್ದೇವೆ. ಈ ನಮ್ಮ ಧೋರಣೆಯನ್ನು ಕೆಲವರು ಹಲವೊಮ್ಮೆ ತಪ್ಪಾಗಿ ಭಾವಿಸಿದ್ದುಂಟು. ಆದರೆ ಇತರ ಅನೇಕರು ಅದನ್ನು ಸತತವಾಗಿ ಮೆಚ್ಚುತ್ತಲೇ ಬಂದಿದ್ದಾರೆ. ಹೀಗಾಗಿ, ನಮ್ಮ ಈ ಧೋರಣೆಯು ಉಳಿದೆಲ್ಲಾ ರಾಷ್ಟ್ರಗಳಿಗೂ ಯುದ್ಧದ ಅನಾಹುತದ ಬಗ್ಗೆ ಒಂದು ರೀತಿಯ ಎಚ್ಚರಿಕೆಯನ್ನು ನೀಡುತ್ತಿದೆ; ಯುದ್ಧದ ವಿಧ್ವಂಸನಕಾರಿ ಪರಿಣಾಮಗಳನ್ನು ಮನಗಾಣಿಸುತ್ತಿದೆ. ಯುದ್ಧ ಯಾವುದೇ ಸಮಸ್ಯೆಗಳನ್ನು ಬಗೆಹರಿಸುವುದಿಲ್ಲ. ಪ್ರತಿಯಾಗಿ, ಅದು ಸಮಸ್ಯೆಗಳನ್ನು ಸೃಷ್ಟಿಸುತ್ತದೆ. ಈಗ ಕೋರಿಯಾದಲ್ಲಿ ಶಾಂತಿ ಸಂಧಾನದ ಸ್ಥಾಪನೆಗೆ ಇರುವ ಅನೇಕ ಅಡಚಣೆಗಳನ್ನು ನಿವಾರಿಸಲಾಗಿದೆ. ಆದರೂ ಉಳಿದಿರುವ ಒಂದೇ ಒಂದು ಸಮಸ್ಯೆಯೆಂದರೆ, ಯುದ್ಧದ ಸೆರೆಯಾಳುಗಳ ವಿನಿಮಯ. ಇದು ರಾಜಕೀಯ ಮುತ್ಸದ್ದಿಗಳ ಬುದ್ಧಿಗೆ ಮೀರಿದ ಸಮಸ್ಯೆಯೇನೂ ಅಲ್ಲ. ಇಂಥ ಸರಳ ಸಮಸ್ಯೆಗೆ ಪರಿಹಾರ ಕಂಡುಕೊಳ್ಳದೇ ಇರುವುದೆಂದರೆ, ಅದು ಕೇವಲ ಬುದ್ಧಿಯ ವಿಫಲತೆಯಷ್ಟೇ ಅಲ್ಲ, ಇಡೀ ಮಾನವ ಕುಲದ ವಿಫಲತೆಯಾಗುತ್ತದೆ. ಪ್ರಪಂಚದ ಜನತೆ ಶಾಂತಿಗಾಗಿ ತಹತಹಿಸುತ್ತಿದ್ದಾರೆ. ಪ್ರಪಂಚದಾದ್ಯಂತ ಶಾಂತಿಯನ್ನು ಸ್ಥಾಪಿಸಲು ಪ್ರಯತ್ನಿಸುವ ಮುತ್ಸದ್ದಿಗಳು, ಕೋಟಿ ಕೋಟಿ ಜನರ ಮನಸ್ಸನ್ನು ಕಾಡುತ್ತಿರುವ ಭಾರವಾದ, ಭಯಾನಕವಾದ ಹೊರೆಯನ್ನು ಕೆಳಗಿಳಿಸಿದಂತಾಗುತ್ತದೆ.

ಇವತ್ತಿಗೂ ಪಾರತಂತ್ರ್ಯದಲ್ಲಿ ತೊಳಲಾಡುತ್ತಿರುವ ಏಶಿಯಾ ಮತ್ತು ಆಫ್ರಿಕಾ ಖಂಡದ ಅನೇಕ ಭಾಗದಲ್ಲಿ ಉಲ್ಬಣಿಸುತ್ತಿರುವ ಮಹತ್ತರ ರಾಷ್ಟ್ರೀಯ ಹೋರಾಟಗಳ ಬಗ್ಗೆ ಈ ಹಿಂದೆ ಅನೇಕ ಸಂದರ್ಭಗಳಲ್ಲಿ ನಾನು ಪ್ರಸ್ತಾಪಿಸಿದ್ದೇನೆ. ವಿಶೇಷವಾಗಿ, ಇತ್ತೀಚೆಗೆ ಟ್ಯುನೀಶಿಯಾದಲ್ಲಿ ನಡೆದ ಘಟನೆಗಳ ಬಗ್ಗೆ ಪ್ರಸ್ತಾಪಿಸುತ್ತ ನಾನು ನನ್ನ ಅಭಿಪ್ರಾಯಗಳನ್ನು ಮಂಡಿಸಿದ್ದೇನೆ. ಆ ದೇಶದ ಜನತೆಯ ಸ್ವಾತಂತ್ರ್ಯಕಾಂಕ್ಷೆಯ ಬಗ್ಗೆ ನಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿದ್ದೇವೆ. ಏಶಿಯಾ ಮತ್ತು ಆಫ್ರಿಕಾದ ಅನೇಕ ರಾಷ್ಟ್ರಗಳ ಬಹುಸಂಖ್ಯಾತರ ಬಯಕೆಗೆ ವಿರುದ್ಧವಾಗಿ ಸಂಯುಕ್ತ ರಾಷ್ಟ್ರ ಸಂಘವು ಮೌನವಹಿಸುತ್ತಿದೆ. ಇದು ಅತ್ಯಂತ ದುಃಖದ ಸಂಗತಿ. ಅಸಂಖ್ಯಾತ ಜನರು ತಮ್ಮ ಸ್ವಾತಂತ್ರ್ಯದ ಬಗ್ಗೆ ತಮಗಿರುವ ಉತ್ಕಟ ಹಂಬಲವನ್ನು ವ್ಯಕ್ತ ಮಾಡುತ್ತಿದ್ದರೂ ಸಂಯುಕ್ತ ರಾಷ್ಟ್ರ ಸಂಘದಲ್ಲಿ ಆ ವಿಷಯ ಚರ್ಚೆಗೆ ಎತ್ತಿಕೊಳ್ಳಲು ಅವಕಾಶ ಮಾಡಿಕೊಡುತ್ತಿಲ್ಲ ಎಂಬುದು ತೀರ ವಿಷಾದನೀಯ ಸಂಗತಿ. ಇಡೀ ಜಾಗತಿಕ ಸಮುದಾಯವನ್ನು ಪ್ರತಿನಿಧಿಸುವುದೇ ಸಂಯುಕ್ತ ರಾಷ್ಟ್ರ ಸಂಘದ ಗುರಿ. ಸೌಮ್ಯವಾಗಿದ್ದರೂ, ಶಾಂತಿ ಸಂರಕ್ಷಣೆಯೇ ತನ್ನ ಪ್ರಾಥಮಿಕ ಉದ್ದೇಶವೆಂದು ಸಾರಿಕೊಂಡರೂ ಅದು ತನ್ನ ಧೋರಣೆಯ ದಾರಿಯಲ್ಲಿ ಮುನ್ನಡಿ ಇಡದೆ ಸ್ಥಗಿತಗೊಂಡಿರುವುದು ದುಃಖದ ವಿಷಯ. ಸಂಯುಕ್ತ ರಾಷ್ಟ್ರ ಸಂಘವನ್ನು ಸಂಸ್ಥಾಪಿಸಿದ ಮಹನೀಯರ ಶ್ರೇಷ್ಠ ಗುರಿಗಳು ಮತ್ತು ಅವರು ಸಿದ್ಧಪಡಿಸಿದ್ದ ಜಾಗತಿಕ ಸನ್ನದು ಎಲ್ಲವೂ ಅರ್ಥ ಕಳೆದುಕೊಂಡು ಅಸ್ಪಷ್ಟವಾಗುತ್ತಿದೆ. ದೃಷ್ಟಿ ವೈಶಾಲ್ಯ ತೊಲಗಿ, ಅದರ ಸ್ಥಾನದಲ್ಲಿ ಸಂಕುಚಿತ ಮನೋಭಾವನೆ ಮನೆ ಮಾಡುತ್ತಿದೆ; ಸಾರ್ವತ್ರಿಕತೆಯ ಪರಿಕಲ್ಪನೆ ಪಲಾಯನಗೊಂಡು ತುಂಬಾ ಸಂಕುಚಿತ ದೃಷ್ಟಿ ನೆಲೆಯಾಗುತ್ತಿದೆ. ತತ್ಪರಿಣಾಮವಾಗಿ, ಶಾಂತಿಯ ಬಗ್ಗೆ ಇರಬೇಕಾದ ಒತ್ತಾಸೆ ಬಲಹೀನಗೊಂಡು ದುರ್ಬಲವಾಗುತ್ತಿದೆ. ಮಾನವನ ಹೃದಯಾಂತರಾಳದ ಅಭೀಷ್ಟೆಯನ್ನು ಈಡೇರಿಸುವ ಉದ್ದೇಶದಿಂದಲೇ ಸಂಯುಕ್ತ ರಾಷ್ಟ್ರ ಸಂಘವು ಅಸ್ತಿತ್ವಕ್ಕೆ ಬಂದಿತು. ಅದು ತನ್ನ ಉದ್ದೇಶದಲ್ಲಿ ವಿಫಲಗೊಂಡು ಜಾಗತಿಕ

ಶಾಂತಿ ಸ್ವಾತಂತ್ರ್ಯದ ಮಹತ್ತರ ಕಾರಣಗಳನ್ನು ಕಾಯದಲ್ಲಿ ಪರಿಣಾಮಕಾರಿಯಾಗಿ ಕೆಲಸಮಾಡದಿದ್ದರೆ ಅದಕ್ಕಿಂತ ದೊಡ್ಡದಾದ ದುರಂತ ಮತ್ತೊಂದಿಲ್ಲ. ಪ್ರಪಂಚದ ಸಮಗ್ರ ಜನತೆಯ ಆಶಾ ಭಾವನೆಯ ನೆಲೆಯಾಗಿರುವ ಈ ಮಹಾನ್ ಸಂಘಟನೆ ಮತ್ತೆ ತಿರುಗಿ ತನ್ನ ಗತದ ಸ್ಥಾನಮಾನಗಳನ್ನು ಪಡೆದುಕೊಂಡು, ಶಾಂತಿ ಸ್ವಾತಂತ್ರ್ಯದ ಆಧಾರ ಸ್ತಂಭವಾಗಲಿದೆಯೆಂದು ನಾನು ಹೃದಯಪೂರ್ವಕವಾಗಿ ನಂಬುತ್ತೇನೆ.

ನನ್ನ ಸರ್ಕಾರವು ನಮ್ಮ ಮಹಾನ್ ನೆರೆಯ ರಾಷ್ಟ್ರವಾಗಿರುವ ಚೀನಕ್ಕೆ ಒಂದು ಸಾಂಸ್ಕೃತಿಕ ನಿಯೋಗವನ್ನು ಕಳಿಸಿಕೊಟ್ಟಿದೆ. ಆ ನಿಯೋಗವು ಚೀನದ ಜನತೆಗೆ ನಮ್ಮ ಶುಭಾಶಯ, ಸದ್ಭಾವಗಳನ್ನು ತಲುಪಿಸಿದೆ. ಈ ನಿಯೋಗಕ್ಕೆ ಚೀನದ ಸರ್ಕಾರ ಮತ್ತು ಜನತೆ ನೀಡಿರುವ ಹಾರ್ದಿಕ ಸ್ವಾಗತಕ್ಕಾಗಿ ನಾನು ಅವರಿಗೆ ನಮ್ಮ ಕೃತಜ್ಞತೆಗಳನ್ನು ಸೂಚಿಸ ಬಯಸುತ್ತೇನೆ.

ದಕ್ಷಿಣ ಆಫ್ರಿಕೆಯ ಸರ್ಕಾರದ ವರ್ಣಭೇದ ನೀತಿ ಇಂದಿಗೂ ಮುಂದಿವರಿಯುತ್ತಾ ಅನೇಕ ಗಂಭೀರ ಬೆಳವಣಿಗೆಗಳಿಗೆ ದಾರಿ ಮಾಡಿಕೊಟ್ಟಿರುವುದು ತುಂಬಾ ವ್ಯಥೆಯ ಸಂಗತಿ. ದಕ್ಷಿಣ ಆಫ್ರಿಕಾದಲ್ಲಿ ಭಾರತೀಯ ಮೂಲದ ಅನೇಕ ಜನರು ವಾಸಿಸುತ್ತಿರುವುದರಿಂದ ನಮ್ಮ ಜನತೆಗೆ ಆ ಧೋರಣೆ ಚಿಂತೆಗಿಟ್ಟುಕೊಳ್ಳುವಂತೆ ಮಾಡಿದೆ. ಆದರೆ ಇದು ದಕ್ಷಿಣ ಆಫ್ರಿಕೆಯಲ್ಲಿಯ ಭಾರತೀಯರಿಗೆ ಮಾತ್ರ ಸಂಬಂಧಿಸಿದ ಪ್ರಶ್ನೆಯಲ್ಲ. ಅದಕ್ಕೆ ಈಗಾಲೇ ವ್ಯಾಪಕವಾದ ಮಹತ್ವ ಬಂದಿದೆ. ಅದು ಜನಾಂಗೀಯ ದಬ್ಬಾಳಿಕೆ ಮತ್ತು ವರ್ಣ ಭೇದ ನೀತಿಯ ಅಸಹಿಷ್ಣುತೆಯ ಪ್ರಶ್ನೆಯಾಗಿದೆ. ದಕ್ಷಿಣ ಆಫ್ರಿಕದಲ್ಲಿಯ ಭಾರತೀಯರಿಗೆ ಸಂಬಂಧಿಸಿದಕ್ಕಿಂತಲೂ ಇಡೀ ಆಫ್ರಿಕನ್ನರ ಭವಿಷ್ಯತ್ತಿಗೆ ಸಂಬಂಧಿಸಿದ ಪ್ರಶ್ನೆ ಅದಾಗಿದೆ. ಈ ಪ್ರಶ್ನೆಯನ್ನಾಗಲಿ, ಇಂಥ ಇನ್ನಾವುದೇ ಸಮಸ್ಯೆಯನ್ನಾಗಲೀ ಬಗೆಹರಿಸುವಲ್ಲಿ ಉಂಟಾಗುವ ವಿಳಂಬ ಇಡೀ ಮಾನವತೆಯನ್ನು ವಿನಾಶದ ಅಂಚಿಗೆ ತಳ್ಳಬಲ್ಲದು. ಆಫ್ರಿಕಾದಾದ್ಯಂತ ಆಫ್ರಿಕನ್ನರು ಮತ್ತು ಅಲ್ಲಿಯ ಭಾರತೀಯರ ನಡುವೆ ಸ್ನೇಹ ಸೌಹಾರ್ದದ ಸಂಬಂಧಗಳು ಬೆಳೆದು ಬರುತ್ತಿರುವುದು ಸಂತೋಷದ ಸಂಗತಿಯಾಗಿದೆ. ಆಫ್ರಿಕಾ ಜನತೆಯ ಅಭಿವೃದ್ಧಿಯ ದಾರಿಯಲ್ಲಿ ಯಾವುದೇ ಹಸ್ತಕ್ಷೇಪ ಮಾಡಬಾರದೆಂಬುದು ನಮ್ಮ ಆಕಾಂಕ್ಷೆಯಾಗಿದೆ. ಅದಕ್ಕೆ ಬದಲಾಗಿ, ನಮಗೆ ಸಾಧ್ಯವಿದ್ದಷ್ಟು ಅವರಿಗೆ ಸಹಾಯ ಮಾಡಬೇಕೆಂಬುದೇ ನಮ್ಮ ಬಯಕೆಯಾಗಿದೆ. ಸಿಲೋನಿನಲ್ಲಿ ಬಹುಕಾಲದಿಂದಲೂ ವಾಸವಾಗಿರುವ ಬೃಹತ್ ಸಂಖ್ಯೆಯ ಭಾರತೀಯರಿಗೆ ಮತದಾನದ ಹಕ್ಕು ನೀಡದಿರುವುದು ದುಃಖದ ಸಂಗತಿಯಾಗಿದೆ. ಅಲ್ಲಿಯ ಮೂಲನಿವಾಸಿಗಳಷ್ಟೇ ಇವರೂ ಕೂಡಾ ಸಿಲೋನಿನ ನಾಗರೀಕರಾಗಿದ್ದಾರೆ. ಇದು, ಅಲ್ಲಿಯ ಭಾರತೀಯರು ಕೇಳುವ ಹಕ್ಕು. ಸಿಲೋನ್ ಜೊತೆಗಿನ ನಮ್ಮ ಸಂಬಂಧ ಸಾವಿರಾರು ವರ್ಷಗಳಷ್ಟು ದೀರ್ಘ ಕಾಲದ್ದು. ಸಿಲೋನಿನ ಜನತೆ ಎಂದಿನಿಂದಲೂ ನಮ್ಮೊಂದಿಗೆ ಅತ್ಯಂತ ಸ್ನೇಹದಿಂದಿದ್ದಾರೆ. ಆ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದ್ದನ್ನು ನಾವು ಹಾರ್ದಿಕವಾಗಿ ಸ್ವಾಗತಿಸಿದ್ದೇವೆ, ಮತ್ತು ಆ ಸ್ವತಂತ್ರ ನಾಡಿನ ಜನತೆ ಇನ್ನು ಮುಂದೆ ಭರದಿಂದ ಹೆಜ್ಜೆ ಹಾಕುವರೆಂಬ ಆಶಯವೂ ನಮ್ಮದಾಗಿದೆ. ಆದರೆ ಒಂದು ದೊಡ್ಡ ಸಂಖ್ಯೆಯ ನಾಗರಿಕರಿಗೆ ಸಹಜ ಹಕ್ಕುಗಳನ್ನು ತಿರಸ್ಕರಿಸುವ ಮೂಲಕ ಆ ದೇಶ ನಿಜವಾದ ಅರ್ಥದಲ್ಲಿ ಪ್ರಗತಿ ಹೊಂದಲಾರದು. ಅದು ಈಗಾಗಲೇ ಹಲವಾರು ಸಮಸ್ಯೆಗಳನ್ನು ಸೃಷ್ಟಿಸಿದೆ. ಮುಂದೆ ಇನ್ನೂ ಗಂಭೀರವಾದ ಸಮಸ್ಯೆಗಳಿಗೆ ಎಡೆಮಾಡಿಕೊಟ್ಟು, ಗೊಂದಲಗಳನ್ನು ಸೃಷ್ಟಿಸುವುದು ಖಚಿತ.

ನಾವು ಅನೇಕ ವರ್ಷಗಳಿಂದ ಆಹಾರದ ಕೊರತೆಯಿಂದ ಬಳಲುತ್ತ ಬಂದಿದ್ದೇವೆ. ತತ್ಪರಿಣಾಮವಾಗಿ, ಬೃಹತ್ ಮೊತ್ತದ ಆಹಾರ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳುತ್ತ ಬಂದಿದ್ದೇವೆ. ಈ ದಿಸೆಯಲ್ಲಿ ಅಮೇರಿಕೆ ನಮಗೆ ಅಪಾರ ಸಹಾಯ ಮಾಡಿದೆ. ಕಾರಣ ನಾವು ಅವರ ಉದಾರ ಸಹಾಯಕ್ಕಾಗಿ ಅವರಿಗೆ ಕೃತಜ್ಞರಾಗಿದ್ದೇವೆ. ಇತಿಹಾಸದಲ್ಲಿಯೇ ಪ್ರಪ್ರಥಮ ಬಾರಿಗೆ ನಾವಿಂದು ಸಾಕಷ್ಟು ಆಹಾರ ಧಾನ್ಯಗಳನ್ನು ಸಂಗ್ರಹ ಮಾಡಿಕೊಳ್ಳಲು (ಅಕ್ಕಿಯೊಂದನ್ನು ಬಿಟ್ಟು) ಸಾಧ್ಯವಾಗಿದೆ. ಅಷ್ಟೇ ಅಲ್ಲ, ಮುಂದೆ ಅವಶ್ಯಕತೆ ಬೀಳಬಹುದಾದ ಸಾಧ್ಯತೆಯನ್ನು ನೀಗಿಸಿಕೊಳ್ಳಲು ಸಾಕಷ್ಟು ಆಹಾರ ಧಾನ್ಯಗಳನ್ನು ಸಂಗ್ರಹ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿದ್ದೇವೆ. ಇದು ಸ್ವಾಗತಾರ್ಹವಾದದ್ದೆ. ಆದರೆ, ದೇಶದ ಅನೇಕ ಭಾಗಗಳಲ್ಲಿ ಅನಾವೃಷ್ಟಿಯಿಂದಾಗಿ ಅಲ್ಲಿಯ ಜನತೆ ಅನೇಕ ಕಷ್ಟ ನಷ್ಟಗಳಿಗೆ ಗುರಿಯಾಗುವಂತಾಗಿದೆ. ಸತತವಾಗಿ ಕಳೆದ ಐದು ವರ್ಷಗಳಿಂದಲೂ ರಾಯಲ್‌ಸೀಮಾ ಪ್ರದೇಶದಲ್ಲಿ ಜನತೆ ಬರಗಾಲದ ಬವಣೆಗೆ ತುತ್ತಾಗುತ್ತಿದ್ದಾರೆ. ಅಲ್ಲಿನ ಅತ್ಯಂತ ತುರ್ತಿನ ಅವಶ್ಯಕತೆಯೆಂದರೆ ನೀರು. ನಮ್ಮ ಸೇನಾ ಬಲವು ಅನೇಕ ಬಾವಿಗಳನ್ನು ತೋಡುವ ಮೂಲಕ ಜನತೆಗೆ ನೀರೊದಗಿಸುವ ಕಾರ್ಯಕ್ರಮಗಳ ಮೂಲಕ, ಇನ್ನೂ ಅನೇಕ ವಿಧದಿಂದ ಅಲ್ಲಿಯ ಸಂತ್ರಸ್ತರಿಗೆ ಸಹಾಯಮಾಡುವ ಅಮೂಲ್ಯ ಕಾರ್ಯದಲ್ಲಿ ತೊಡಗಿದ್ದಾರೆ. ಬರಗಾಲ ಮತ್ತು ಅಭಾವದಿಂದ ಪೀಡಿತರಾದ ಜನತೆಗೆ ಸಹಾಯ ಮಾಡುವ ಉದ್ದೇಶದಿಂದ ಆ ಪ್ರದೇಶಗಳಲ್ಲಿ ಅನೇಕ ಸಣ್ಣ ಪುಟ್ಟ ಯೋಜನೆಗಳನ್ನು ಹಮ್ಮಿಕ್ರೊಳ್ಳಲಾಗಿದೆ. ಆ ಮೂಲಕ ಅಲ್ಲಿಯ ಜನರಿಗೆ ಕೆಲಸ ಒದಗಿಸಲಾಗುತ್ತಿದೆ. ಜೊತೆಗೆ ಅಗ್ಗದ ದರದಲ್ಲಿ ಆಹಾರ ಸಾಮಗ್ರಿಗಳನ್ನು ಪೂರೈಸಲು ಅಂಗಡಿಗಳನ್ನು ತೆರೆಯಲಾಗಿದೆ. ಅವಶ್ಯವಿದ್ದಲ್ಲೆಲ್ಲ ಆಹಾರವನ್ನು ಉಚಿತವಾಗಿ ಒದಗಿಸಲಾಗುತ್ತಿದೆ.

ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳಲಾಗುತ್ತಿದೆ ಎಂದು ಹೇಳಿದ್ದೇನಷ್ಟೆ. ಈಗ ಆಮದಾಗುತ್ತಿರುವ ಆಹಾರ ಸಾಮಗ್ರಿಗಳ ದುಬಾರಿ ಬೆಲೆಯಿಂದಾಗಿ ಇಲ್ಲಿಯ ಧವಸ ಧಾನ್ಯಗಳ ಬೆಲೆ ಮೇಲೆ ಹೋಗಿದೆ. ಈ ಬೆಲೆಯ ಹೆಚ್ಚಳಕ್ಕೆ ಆಹಾರ ಧಾನ್ಯಗಳಿಗೆ ಕೊಡಲಾಗುತ್ತಿದ್ದ ಸಹಾಯ ಧನಗಳನ್ನು ಕಡಿತಗೊಳಿಸಿರುವುದೇ ಕೆಲಮಟ್ಟಿಗೆ ಕಾರಣವಾಗಿದೆ. ಇದರಿಂದ ಪಡಿತರ ಪದ್ಧತಿಯ ಪ್ರದೇಶಗಳಲ್ಲಿ ಜನರಿಗೆ ಸಾಕಷ್ಟು ತೊಂದರೆ ಉಂಟಾಗಿದೆ. ಅಲ್ಲದೆ ಅವರಲ್ಲಿ ಅತೃಪ್ತಿ ಕಂಡು ಬರುತ್ತಿದೆ. ಬೆಲೆಗಳನ್ನು ಸಾಮಾನ್ಯವಾಗಿ ಇಳಿಸುವ ಮೂಲಕ ಇದನ್ನು ಒಂದಿಷ್ಟು ಸರಿದೂಗಿಸಲು ಪ್ರಯತ್ನಿಸಲಾಗುತ್ತಿದೆ. ಆಹಾರ ಸಬ್ಸಿಡಿ ಮೇಲಿನ ಮಿತಿಯು, ಸರ್ಕಾರಗಳು ಅನೇಕ ರಾಜ್ಯಗಳಲ್ಲಿ ಆಹಾರ ಸಾಮಗ್ರಿಗಳ ಆಮದಿನ ಬಗ್ಗೆ ವಾಸ್ತವಿಕವಾದ ನಿಲುವನ್ನು ತಳೆಯುವಂತೆ ಮಾಡಿದೆ. ಇದರಿಂದಾಗಿ ಅನೇಕ ರಾಜ್ಯಗಳು ತಮ್ಮ ಆಹಾರ ಸಾಮಗ್ರಿಗಳ ಬೇಡಿಕೆಯನ್ನು ತಗ್ಗಿಸಿವೆ. ಇದರಿಂದ ಆಮದಿನ ಮೇಲೆ ಇತ್ಯಾತ್ಮಕ ಪರಿಣಾಮವೇ ಆಗಿದೆ. ಇಂದು ಮತ್ತು ಮುಂದೆಯೂ ಇದರಿಂದ ಲಾಭವೇ ಆಗುವುದೆಂಬುದು ನಿಸ್ಸಂಶಯ. ಈ ರೀತಿಯಾಗಿ, ಆಹಾರ ಸಾಮಗ್ರಿಗಳಿಗೆ ಕೊಡಲಾಗುತ್ತಿದ್ದ ಸಹಾಯ ಧನವನ್ನು ಸಣ್ಣಪುಟ್ಟ ನೀರಾವರಿ ಯೋಜನೆಗಳಿಗೆ ಒದಗಿಸಲಾಗುತ್ತಿದೆ. ಇದು ಮುಂದಿನ ವರ್ಷಗಳಲ್ಲಿ ಹೆಚ್ಚಿನ ಆಹಾರ ಬೆಳೆಯುವುದಕ್ಕೆ ಸಹಾಯ ಮಾಡಿ ಆಹಾರ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ದಾರಿ ಮಾಡಿಕೊಡುತ್ತದೆ. ನನ್ನ ಸರ್ಕಾರವು ಈ ಎಲ್ಲ ವಿಷಯಗಳ ಬಗ್ಗೆ ಅತ್ಯಂತ ಹೆಚ್ಚಿನ ಕಾಳಜಿ ವಹಿಸುತ್ತದೆ. ಅದು ಸದ್ಯದ

ಮತ್ತು ಮುಂದಿನ ಅನುಕೂಲ ಅನಾನುಕೂಲತೆಗಳ ನಡುವೆ ಒಂದು ಸಮತೋಲನವನ್ನೂ ಕಾಯ್ದುಕೊಳ್ಳಬೇಕಾಗಿದೆ. ಜೊತೆಗೆ ಸದ್ಯ ಯಾರಿಗೂ ತೊಂದರೆಯಾಗದಂತೆ ನೋಡಿಕೊಳ್ಳಬೇಕಾದ ಕಾಳಜಿಯು ಅದಕ್ಕಿದೆ. ಅದು ತನಗೆ ಸಾಧ್ಯವಿದ್ದುದೆಲ್ಲವನ್ನೂ ಪ್ರಯತ್ನಿಸಿ, ಮುಂದೆ ಯಾವುದೇ ಸಂಕಟಗಳು ಸಂಭವಿಸದಂತೆ ನೋಡಿಕೊಳ್ಳಲು ಸದಾ ಕಾತರವಾಗಿದೆ.

ಯೋಜನಾ ಆಯೋಗವು ಪಂಚವಾರ್ಷಿಕ ಯೋಜನೆಯ ಮೇಲಿನ ತನ್ನ ವರದಿಗೆ ಅಂತಿಮ ರೂಪ ಕೊಡುತ್ತಿದೆ. ರಾಷ್ಟ್ರದಾದ್ಯಂತ ಐವತ್ತೈದು ಸಮುದಾಯ ಯೋಜನೆಗಳನ್ನು ಆರಂಭಿಸುವ ಒಂದು ಪ್ರಸ್ತಾವನೆಯನ್ನು ಮಾಡುವ ಮೂಲಕ ಸದರಿ ಯೋಜನೆಗೆ ಒಂದು ಅಮೂಲ್ಯವಾದದ್ದನ್ನು ಸೇರಿಸಲಾಗಿದೆ. ಇದು ಸಾಧ್ಯವಾಗಿರುವುದು ಅಮೇರಿಕೆಯ ತಾಂತ್ರಿಕ ಸಹಕಾರ ಯೋಜನೆಯ ಸಹಾಯದಿಂದ. ಈ ಸಮುದಾಯ ಯೋಜನೆಗಳು ನಮ್ಮ ಆಹಾರ ಉತ್ಪಾದನೆಯನ್ನು ಹೆಚ್ಚಿಸುವುದಷ್ಟೇ ಅಲ್ಲ, ಅದಕ್ಕಿಂತಲೂ ಮಿಗಿಲಾಗಿ, ಅವು ನಮ್ಮ ಇಡೀ ಸಾಮುದಾಯಿಕ ಜೀವನದ ಮಟ್ಟವನ್ನೇ ಎತ್ತರಿಸಲಿವೆ. ಈ ಯೋಜನೆಯು ಕ್ರಮೇಣ ವೃದ್ಧಿಗೊಂಡು ಅನತಿ ಕಾಲದಲ್ಲೇ ಭಾರತದ ಬಹುಭಾಗಕ್ಕೆ ವ್ಯಾಪಿಸುವುದೆಂದು ಆಶಿಸಲಾಗಿದೆ. ಆದರೆ ಜನತೆಯ ಸಂಪೂರ್ಣ ಸಹಕಾರವಿದ್ದರೆ ಮಾತ್ರ ಅದು ಬೆಳೆಯಬಲ್ಲುದು. ಯೋಜನಾ ಆಯೋಗದ ಇತರ ಪ್ರಸ್ತಾವನೆಗಳನ್ನು ಜಾರಿಗೊಳಿಸುವ ವಿಷಯದಲ್ಲಿ ಹೇಗೋ ಹಾಗೆಯೇ, ಈ ವಿಷಯದಲ್ಲಿಯೂ ಜನತೆ ಸಂಪೂರ್ಣವಾಗಿ ಸಹಕರಿಸುವರೆಂಬ ವಿಶ್ವಾಸ ನನಗಿದೆ.

ಕೃಷಿ ಉತ್ಪನ್ನವನ್ನು ಹೆಚ್ಚಿಸುವ ಸಮಗ್ರ ಯೋಜನೆಯು ತುಂಬ ತೃಪ್ತಿದಾಯಕ ಪ್ರಗತಿಯನ್ನು ಸಾಧಿಸಿದೆ. ಸಣಬಿನ ಉತ್ಪಾದನೆ ಹೆಚ್ಚಳವನ್ನೇ ನೋಡಬಹುದು. ಅದು ಇತ್ತೀಚೆಗೆ ಗಮನಾರ್ಹವಾಗಿ ಹೆಚ್ಚಾಗಿದೆ. 1947-48ರಲ್ಲಿ 16.6 ಲಕ್ಷ ಬೇಲುಗಳಾಗಿದ್ದುದ್ದು 1951-52 ರಲ್ಲಿ 46.8 ಲಕ್ಷ ಬೇಲುಗಳಾಗಿದೆ. ಹತ್ತಿಯ ಉತ್ಪಾದನೆಯೂ ಇದೇ ಅವಧಿಯಲ್ಲಿ 24 ಲಕ್ಷ ಬೇಲುಗಳಿಂದ 33 ಲಕ್ಷಗಳಿಗೂ ಮೀರಿದ ಬೇಲುಗಳಿಗೆ ತಲುಪಿದೆ. ಆಹಾರ ಧಾನ್ಯದ ಉತ್ಪಾದನೆಯೂ ಗಮರ್ನಾಹವಾಗಿ ಹೆಚ್ಚಿದೆ. ಅದು 14 ಲಕ್ಷ ಟನ್ನುಗಳಷ್ಟು ಹೆಚ್ಚಾಗಿದೆ. ಕೆಲವು ಭಾಗಗಳಲ್ಲಿ ಬರಗಾಲದ ಹೊರತಾಗಿಯೂ ಇಷ್ಟು ಆಹಾರ ಧಾನ್ಯ ಬೆಳೆದಿರುವುದು ಗಮನಾರ್ಹ ಅಭಿವೃದ್ಧಿ ಎಂದೇ ಬಗೆಯಬೇಕು. 1947-48ರಲ್ಲಿ 10.75 ಲಕ್ಷ ಟನ್ ಉತ್ಪಾದನೆಯಾಗಿದ್ದ ಸಕ್ಕರೆ 51-52ರಲ್ಲಿ 13.5 ಲಕ್ಷ ಟನ್‌ಗಳಿಗೆ ತಲುಪಿದೆ. ಉಕ್ಕು, ಕಲ್ಲಿದ್ದಲು, ಸಿಮೆಂಟ್ ಮತ್ತು ಉಪ್ಪಿನ ಉತ್ಪಾದನೆಯಲ್ಲೂ ಸಾಕಷ್ಟು ಹೆಚ್ಚಳ ಕಂಡು ಬಂದಿದೆ. ಉಪ್ಪಿಗೆ ಸಂಬಂಧಿಸಿ ಹೇಳುವುದಾದರೆ, ಭಾರತ ಈಗ ಸಂಪೂರ್ಣವಾಗಿ ಸ್ವಾವಲಂಬಿಯಾಗಿದೆ. ಮೇಲಾಗಿ, ಅದು ರಫ್ತು ಮಾಡುವಷ್ಟು ಆಧಿಕ್ಯವನ್ನು ತಲುಪಿದೆ. ಸೌರಾಷ್ಟ್ರದಲ್ಲಿ ಕೇಂದ್ರೀಯ ಉಪ್ಪು ಸಂಶೋಧನಾ ಸಂಸ್ಥೆಯೊಂದನ್ನು ಆರಂಭಿಸಲಾಗುತ್ತಿದೆ.

ನನ್ನ ಸರ್ಕಾರವು ದೇಶದಲ್ಲಿಯ ಸಾಮಾನ್ಯ ಆರ್ಥಿಕ ಸ್ಥಿತಿಗತಿಗಳ ಮೇಲೆ ನಿರಂತರವಾಗಿ ಕಣ್ಣಿಡುತ್ತಿದೆ. ಲೋಕಸಭೆಯನ್ನುದ್ದೇಶಿಸಿ ನಾನು ಮಾಡಿದ ಹಿಂದಿನ ಭಾಷಣ ಒಂದರಲ್ಲಿ ಸಗಟು ವ್ಯಾಪಾರದ ಬೆಲೆಗಳಲ್ಲಿ ಒಂದಿಷ್ಟು ಇಳಿತ ಕಂಡು ಬಂದದ್ದರ ಬಗ್ಗೆ ಪ್ರಸ್ತಾಪಿಸಿದ್ದೆ. ಫೆಬ್ರವರಿ ಮತ್ತು ಮಾರ್ಚ್ ತಿಂಗಳಲ್ಲಿ ಅದೇ ಬಗೆಯ ಒಲವುಗಳು ಕಂಡು ಬಂದಿದ್ದವು. ಅಷ್ಟೇ ಅಲ್ಲ,

ಅವು ಇನ್ನೂ ತೀವ್ರಗೊಂಡಿದ್ದವು ಇದಕ್ಕೆ ಕಾರಣವೆಂದರೆ, ಜಗತ್ತಿನಾದ್ಯಂತ ಕಂಡು ಬಂದಿರುವ ಬೆಲೆಗಳ ಪುನರ್ ಹೊಂದಾಣಿಕೆ. ಇದು ಸಂಪೂರ್ಣವಾಗಿ ಅಲ್ಲದಿದ್ದರೂ ಅಂಶಿಕವಾಗಿಯಾದರೂ ಕಾರಣವಾಗಿದೆ. ಈ ಪ್ರಕ್ರಿಯೆ 1950ರಲ್ಲಿಯೆ ಆರಂಭವಾಗಿತ್ತು. ಆದರೆ ಕೋರಿಯಾದ ಯುದ್ಧ ಆರಂಭವಾದ ಮೇಲೆ ಅದರಲ್ಲಿ ಹಿನ್ನಡೆ ಕಂಡು ಬಂದಿತು. ಕೋರಿಯಾದಲ್ಲಿ ಅನತಿ ಕಾಲದಲ್ಲೆ ಯುದ್ಧ ವಿರಾಮ ಏರ್ಪಡಲಿದೆ, ಎಂಬ ಸಾಧ್ಯತೆಯಾಧಾರದ ಮೇಲೆ ಬೆಲೆಗಳ ಪುನರ್ ಹೊಂದಾಣಿಕೆಯ ಪ್ರಕ್ರಿಯೆ ಒಂದಿಷ್ಟು ಶಕ್ತಿ ಸಂಚಯಿಸಿಕೊಂಡಿತ್ತು. ಇದರೊಂದಿಗೆ, ರಾಷ್ಟ್ರದಲ್ಲಿ ಆಹಾರ ಧಾನ್ಯಗಳ ಉತ್ಪಾದನೆ ಹೆಚ್ಚಾದದ್ದು, ಮತ್ತು ಬೆಲೆಯೇರಿಕೆಗೆ ಬಳಕೆದಾರರಿಂದ ವಿರೋಧ ಒತ್ತರಿಸಿ ಬಂದದ್ದು - ಇವೆಲ್ಲ ಬೆಲೆಯನ್ನು ಹತೋಟಿಯಲ್ಲಿಡಲು ಕಾರಣವಾಗಿದೆ. ಹಣದುಬ್ಬರವನ್ನು ಹತೋಟಿಯಲ್ಲಿಡುವ ಉದ್ದೇಶದಿಂದ ನನ್ನ ಸರ್ಕಾರವು ಕೈಗೊಂಡಿರುವ ಹಣಕಾಸು ಮತ್ತು ಸಾಲದ ಹೊಸ ಧೋರಣೆ ಕೂಡಾ ಬೆಲೆಗಳು ಇಳಿಯುವುದಕ್ಕೆ ಕಾರಣೀಭೂತವಾಗಿದೆ. ಬೆಲೆಗಳಲ್ಲಿ ಕಂಡು ಬಂದಿರುವ ಈ ತೀವ್ರವಾದ ಇಳಿತದಿಂದ ವ್ಯಾಪಾರೋದ್ಯಮದಲ್ಲಿ ತೊಡಗಿರುವವರಿಗೆ ಸಾಕಷ್ಟು ತೊಂದರೆ ಉಂಟಾಗಿದೆ. ವಿಶೇಷವಾಗಿ, ಜವಳಿ ಉದ್ಯಮದಲ್ಲಿ ತೊಡಗಿರುವರಿಗೆ ಹೆಚ್ಚಿನ ನಷ್ಟ ಉಂಟಾಗಿದೆ. ನನ್ನ ಸರ್ಕಾರವು ಪರಿಸ್ಥಿತಿಯ ಮೇಲೆ ಸಂಪೂರ್ಣ ನಿಗಾ ಇಡುತ್ತಿದೆ. ಈ ಬೆಲೆಗಳ ಏರುಪೇರಿನಿಂದ ಉತ್ಪಾದನೆ ಮತ್ತು ಉದ್ಯೋಗಾವಕಾಶಗಳ ಮೇಲೆ ದುಷ್ಪರಿಣಾಮವಾಗದಂತೆ ಎಚ್ಚರಿಕೆ ವಹಿಸಲಾಗುತ್ತಿದೆ. ಬೆಲೆಗಳನ್ನು ಯೋಗ್ಯ ಮಟ್ಟದಲ್ಲಿ ಸ್ಥಗಿತಗೊಳಿಸಲು ಅವಶ್ಯವಿರುವ ಎಲ್ಲ ಕ್ರಮಗಳನ್ನೂ ಕೈಗೊಳ್ಳುವುದು ನನ್ನ ಸರ್ಕಾರದ ಉದ್ದೇಶವಾಗಿದೆ.

ಇತ್ತೀಚಿಗೆ ಉತ್ಪಾದನಾ ಮಂತ್ರಾಲಯವನ್ನು ಹೊಸದಾಗಿ ಆರಂಭಿಸಿರುವುದು ನನಗೆ ಸಂತೋಷವನ್ನುಂಟುಮಾಡಿದೆ. ರಾಜ್ಯಗಳ ಆಧೀನದಲ್ಲಿರುವ ಉದ್ಯಮಗಳ ಉತ್ಪಾದನೆಯೂ ಅಷ್ಟೇ ಮಹತ್ವದ್ದಿದೆ. ಈ ದೃಷ್ಟಿಯಿಂದ ಹೊಸದಾಗಿ ಆರಂಭಿಸಲಾಗಿರುವ ಉತ್ಪಾದನಾ ಸಚಿವಾಲಯವು ಈ ಎಲ್ಲ ಉತ್ಪಾದನಾ ಪ್ರಕ್ರಿಯೆಗಳ ಬಗ್ಗೆ ವಿಶೇಷ ಗಮನ ಕೊಡುತ್ತಿರುವುದು ಅಪೇಕ್ಷಣಿಯವೇ.

ಹೋದ ವರ್ಷ ಸರ್ಕಾರವು ಒಂದು ಪತ್ರಿಕಾ ಆಯೋಗವನ್ನು ನೇಮಿಸುವುದಾಗಿ ಸಂಸತ್ತಿಗೆ ಆಶ್ವಾಸನೆ ನೀಡಿತ್ತು. ಪತ್ರಿಕೋದ್ಯಮಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ಪರಿಶೀಲಿಸುವುದು ಆ ಆಯೋಗದ ಕರ್ತವ್ಯವಾಗಲಿದೆ. ನನ್ನ ಸರ್ಕಾರವು ಕೆಲವೇ ಸಮಯದಲ್ಲಿ ಇಂಥಾ ಒಂದು ಆಯೋಗವನ್ನು ನೇಮಿಸುತ್ತದೆಂಬ ಭರವಸೆ ನನಗಿದೆ. 'ಪತ್ರಿಕಾ ಕಾಯ್ದೆಗಳ ತನಿಖಾ ಸಮಿತಿ'ಯ ಶಿಫಾರಸ್ಸುಗಳನ್ನಾಧರಿಸಿ ಸಂಸತ್ತಿನ ಮುಂದೆ ಒಂದು ವಿಧೇಯಕವನ್ನು ಮಂಡಿಸಲು ಸೂಚಿಸಲಾಗಿದೆ.

ಸಂಸತ್ತಿನ ಈ ಅಧಿವೇಶನವು ಮುಖ್ಯವಾಗಿ ಆಯವ್ಯಯದ ಬಗ್ಗೆ ಚರ್ಚಿಸಲಿರುವುದರಿಂದ ಬಹುಶಃ ಇತರ ಕಾಯ್ದೆಗಳಿಗಾಗಿ ಸಾಕಷ್ಟು ಸಮಯ ದೊರೆಯಲಾರದು. 1952-1953ರ ಹಣಕಾಸಿನ ವರ್ಷದ ಅಂದಾಜು ಆಯ-ವ್ಯಯದ ಹೇಳಿಕೆಯೊಂದನ್ನು ಸಂಸತ್ತಿನ ಮುಂದೆ ಮಂಡಿಸಲಾಗುತ್ತಿದೆ. ಭಾರತ ಸರ್ಕಾರವು ಮಂಡಿಸಲಿರುವ ಈ ಅಂದಾಜು ಪಟ್ಟಿಯನ್ನು ಲೋಕಸಭೆಯ ಸದಸ್ಯರೆಲ್ಲರೂ ಕೂಲಂಕುಷವಾಗಿ ಪರಿಶೀಲಿಸಿ ಅನುದಾನದ ಈ ಬೇಡಿಕೆಗಳನ್ನು ಅನುಮೋದಿಸಬೇಕಾಗುತ್ತದೆ.

ಹಂಗಾಮಿ ಸಂಸತ್ತಿನ ಕೊನೆಯ ಅಧಿವೇಶನದ ನಂತರ ಸೌರಾಷ್ಟ್ರ ಪೋರ್ಟ್ ಡೆವಲಪ್‌ಮೆಂಟ್ ಲೇವಿ (Abolition of Local Sea Customs Duties) ಗೆ ಸಂಬಂಧಿಸಿದ ತಿದ್ದುಪಡಿಗಾಗಿ ಒಂದು ಸುಗ್ರೀವಾಜ್ಞೆಯನ್ನೂ ಹೊರಡಿಸುವ ಅವಶ್ಯಕತೆಯುಂಟಾಗಿತ್ತು. ಆ ಸುಗ್ರೀವಾಜ್ಞೆಯನ್ನು ಒಂದು ಹೊಸ ವಿಧೇಯಕದ ರೂಪದಲ್ಲಿ ನಿಮ್ಮ ಮುಂದೆ ಮಂಡಿಸಲಾಗುವುದು. ತಾವು ಅದನ್ನು ಪರಿಶೀಲಿಸಿ ಪಾಸು ಮಾಡಬೇಕಾಗಿದೆ. 'ಸ್ಥಾನಾಂತರಿತ ವ್ಯಕ್ತಿಗಳ ಹಕ್ಕುಗಳ ಕಾಯ್ದೆ (Displaced Persons (Claims) Act, 1950)', ಇದಕ್ಕೆ ಸಂಬಂಧಿಸಿ ಇನ್ನೊಂದು ಸುಗ್ರೀವಾಜ್ಞೆಯನ್ನು ಹೊರಡಿಸಲಾಗಿದೆ. ಅದನ್ನೂ ಒಂದು ವಿಧೇಯಕದ ರೂಪದಲ್ಲಿ ತಮ್ಮ ಮುಂದೆ ಮಂಡಿಸಲಾಗುವುದು.

ಹಂಗಾಮಿ ಸಂಸತ್ತಿನಲ್ಲಿ ಮಂಡಿಸಲಾಗಿದ್ದ ಅನೇಕ ವಿಧೇಯಕಗಳು ಈಗ ಅನೂರ್ಜಿತವಾಗಿವೆ. ಅವುಗಳಲ್ಲಿ ಕೆಲವುಗಳನ್ನು, ಈಗ ಮತ್ತೆ ಸಮಯ ದೊರೆತರೆ, ತಮ್ಮ ಮುಂದೆ ಮಂಡಿಸಲಾಗುವುದು. 'ಮುಂಜಾಗ್ರತಾ ಸ್ಥಾನ ಬದ್ಧತೆ (Preventive Detention)'ಗೆ ಸಂಬಂಧಿಸಿದ ಒಂದು ವಿಧೇಯಕವನ್ನು ಸಂಸತ್ತಿನ ಮುಂದೆ ಮಂಡಿಸುವ ಪ್ರಸ್ತಾವನೆ ಇದೆ.

ಹಂಗಾಮಿ ಸಂಸತ್ತಿನಲ್ಲಿ ತುಂಬಾ ದೀರ್ಘಕಾಲದವರೆಗೆ ಚರ್ಚೆಗೆ ಒಳಗಾಗಿದ್ದ ಇನ್ನೊಂದು ವಿಷಯವೆಂದರೆ, "ಹಿಂದೂ ಕೋಡ್ ಬಿಲ್". ಇದನ್ನು ಆಗ ಪಾಸು ಮಾಡಲು ಸಾಧ್ಯವಾಗಲಿಲ್ಲ. ಹಾಗಾಗಿ, ಇನ್ನಿತರ ವಿಧೇಯಕಗಳೊಂದಿಗೆ ಅದೂ ಕೂಡಾ ಅನೂರ್ಜಿತವಾಯಿತು. ಈ ವಿಷಯಕ್ಕೆ ಸಂಬಂಧಿಸಿ ಈಗ ಮತ್ತೆ ಹೊಸದಾಗಿ ಒಂದು ಶಾಸನವನ್ನು ತಮ್ಮ ಮುಂದೆ ಮಂಡಿಸುವ ಉದ್ದೇಶ ನನ್ನ ಸರ್ಕಾರಕ್ಕಿದೆ. ಆದರೆ ಈ ವಿಧೇಯಕವನ್ನು ವಿಭಾಗಿಸಿ, ಸಂಸತ್ತಿನ ಮುಂದೆ ಪ್ರತ್ಯೇಯಕವಾಗಿ ಮಂಡಿಸುವುದರಿಂದ ಆ ಕುರಿತು ಚರ್ಚೆಮಾಡಲು ಮತ್ತು ಅದನ್ನೊಂದು ಕಾನೂನಾಗಿ ಮಾರ್ಪಡಿಸಲು ಅನುಕೂಲವಾಗುತ್ತದೆ.

ಸಂಸತ್ತಿನ ಈ ಅಧಿವೇಶನದಲ್ಲಿ ತಮ್ಮ ಮುಂದೆ ಮಂಡಿಸಲಾಗುವ ಕೆಲವು ಕಾರ್ಯಗಳ ಬಗ್ಗೆ ನಾನು ಸೂಚಿಸಲು ಪ್ರಯತ್ನಿಸಿದ್ದೇನೆ. ಈ ದಾರಿಯಲ್ಲಿ ತಾವು ಪಡುವ ಶ್ರಮವು ಫಲದಾಯಕವಾಗುವುದೆಂದೂ, ಆ ಮೂಲಕ ಅದು ನಮ್ಮ ಜನತೆಯ ಶ್ರೇಯೋಭಿವೃದ್ಧಿಯನ್ನು ಸಾಧಿಸಲು ಒಂದು ಸಾಧನವಾಗುವುದೆಂದೂ ನನ್ನ ನಂಬುಗೆ. ಮೇಲಾಗಿ, ಭಾರತದ ಪ್ರಜಾತಾಂತ್ರಿಕ ಗಣರಾಜ್ಯದ ಈ ಹೊಸ ಸಂಸತ್ತು ಸ್ನೇಹಯುತ ಸಹಕಾರ ಮತ್ತು ದಕ್ಷ ಕಾರ್ಯಾಚರಣೆಯ ಬಗ್ಗೆ ಒಂದು ಮಾದರಿ ನಿದರ್ಶನವನ್ನು ಸ್ಥಾಪಿಸಲಿದೆ ಎಂಬ ವಿಶ್ವಾಸ ನನಗಿದೆ. ತಮ್ಮ ಚಟುವಟಿಕೆಗಳನ್ನು ನಿಯಂತ್ರಿಸಲಿರುವ ಸಹನಾಶೀಲ ಸದ್ಭಾವ ಮತ್ತು ತಮ್ಮ ಪ್ರಯತ್ನಗಳಿಗೆ ಸ್ಫೂರ್ತಿಯ ಚಿಲುಮೆಯಾಗಿ ನಿಲ್ಲಲಿರುವ ಸುಜ್ಞಾನ - ಇವುಗಳ ಮೇಲೆಯೇ ತಮ್ಮ ಯಶಸ್ಸು ಅವಲಂಬಿಸಿದೆ. ಈ ಸದ್ವಿವೇಕ, ಸಹನಾಶೀಲತೆಯ ಸದ್ಭಾವವು ಸದಾ ತಮ್ಮೊಂದಿಗೆ ಇರುತ್ತದೆಂಬುದು ನನ್ನ ಅಚಲ ವಿಶ್ವಾಸವಾಗಿದೆ.

ಮುದ್ರಕರು: ನಿರ್ದೇಶಕರು, ಮುದ್ರಣ, ಲೇಖನಾ ಮತ್ತು ಸಾಮಗ್ರಿಗಳು, ಬೆಂ-1. / ಕಾ.ಸೂ. 1749.